ಶಾರದಾ ಸಾಹಿತ್ಯ ಮಾಲೆ-೩೨

# ರಂಗನಾಯಕಿ

ಕಾದಂಬರಿ

ಲೇಖಕರು

**ಅಶ್ವತ್ಥ**

ಶಾರದಾ ಪ್ರಕಟನಾ

ಅರಳೇಪೇಟೆ, — ಬೆಂಗಳೂರು-೨

ಮುದ್ರಕರು:

**ಎಸ್. ಮುನಿರಾಮಯ್ಯ**

**ಲಲಿತಾ ಪ್ರಿಂಟಿಂಗ್ ವರ್ಕ್ಸ್**

ಬೆಂಗಳೂರು.

ರಕ್ಷಾಪತ್ರದ ರಚನೆ:

**ಎಸ್. ಆರ್. ಸ್ವಾಮಿ.**

ರಕ್ಷಾಪತ್ರದ ಮುದ್ರಣ

**ಮೋಹನ್ ಪ್ರೆಸ್**

ಬೆಂಗಳೂರು.

ಪ್ರಥಮ ಮುದ್ರಣ:

**ಡಿಸೆಂಬರ್ ೧೯೫೩**



**ಬೆಲೆ:**

**ಎರಡು ರೂಪಾಯಿ**

**'ಮಾಲೆ' ಯ**

. ವಾರ್ಷಿಕ ಚಂದಾ

**ಏಳೂವರೆ ರೂಪಾಯಿ**

(ಅಂಚೆ ವೆಚ್ಚ ಸೇರಿ)

ಕಡಿಮೆಯಲ್ಲ”

" ಹೆಂಡತಿ! ಈ ಜನ್ಮದಲ್ಲಿ "

" ಹುಂ, ಮರ್ಯಾದೆಯ ಮನೆ ಸಂಸಾರ, ಅಧಿಕಾರ ಎಲ್ಲ "

" ಹುಚ್ಚು "

" ಇಲ್ಲ. ವಿಧಿವತ್ತಾಗಿ ಮದುವೆಯಾಗುತ್ತೇನೆ. ನನ್ನ ಸರ್ವಸ್ವವನ್ನೂ ನನ್ನನ್ನೂ ನಿನಗೆ ಅರ್ಪಿಸುತ್ತೇನೆ. ನಾನು ಕೇಳಿಕೊಳ್ಳೋದು ಒಂದನ್ನೇ–ನಿನ್ನ ಪ್ರೇಮ. "

" ಛೆ! ಛೆ! " ಅವನ ಆವೇಶದ ರಭಸ ಅವಳ ಶಾಂತತೆಯನ್ನು ಕದಲಿಸಿತ್ತು. ಅವಳ ಮನಸ್ಸಿನಲ್ಲಿ ಗೊಂದಲವಾಯಿತು, ಗಾಬರಿಯಾಯಿತು. ಮುಖವು ಅರುಣೋದಯದಂತೆ ಕೆಂಪಾಯಿತು. ತಲೆ ತಗ್ಗಿತ್ತು. ಅಲ್ಲಿಂದ ಎದ್ದು ಹೋಗಬೇಕೆಂದು ಎಚ್ಚರಿಸಿತು, ಬುದ್ಧಿ–ಬೇಡ ಎಂದು ತಡೆಯಿತು ಎದೆ. ಸಿಟ್ಟಾಗು ಎಂದಿತು ಬುದ್ಧಿ. ಹುಟ್ಟದು ಎಂದಿತು ಎದೆ. ಬಣ್ಣಿಸಲಾಗದ ಹಿಂಸೆ. ಆದರೆ ಅಹಿತವಾದುದಲ್ಲ.

ನಟಿಯ ಪ್ರತಿಷ್ಠೆ ಎಷ್ಟಾದರೂ ಗೃಹಿಣಿಯ ಮರ್ಯಾದೆಗೆ ಸರಿಯಾಗದು. ತನ್ನದು ಅಷ್ಟೈಶ್ವರ್ಯವಾದರೂ ಅವರದು ಶಕ್ತಿಯೆಂಬ ತಕ್ಕಡಿಗೆ ಹಾಕಿದ ತುಳಸಿಯ ದಳ.

ಗೃಹಿಣಿಯ ಜೀವನ! ಅದೇ ನಾ[illegible] ಅವಳಿಗೆ ಬೇಡಿದ್ದು. ಗೃಹಿಣಿಯ ಜೀವನ! ಮದುವೆಯ ಮಧುರ ಸಂಬಂಧ! ಹೆಂಡತಿಯ ಪ್ರೇಮರಸ ಜೀವನ! ತಾಯಿಯ ತುಂಬು ಬಾಳು! ತಾನು ಹಿಂದೆಂದೂ ಯೋಚಿಸಲಾಗದಿದ್ದ ಸೌಭಾಗ್ಯದ ಗೊಂಚಲು.

ರಂಗಭೂಮಿಯಿಂದ ಗೃಹಿಣಿಯ ಜೀವನಕ್ಕೆ ಕಾಲಿಟ್ಟಳು ರಂಗನಾಯಕಿ.

ಆದರೆ? –

## ಖಕರ ಇತರ ಕೃತಿಗಳು

**ಕಥಾಸಂಗ್ರಹ**

ಬಾಳ ಹೊಳೆ
ಸಣ್ಣ ಕತೆಗಳು

**ಕಾದಂಬರಿ**

ಮುನಿಯನ ಮಾದರಿ
ಮರ್ಯಾದೆ ಮಹಲು

**ನಾಟಕ**

ಕ್ರಾಂತಿಕಾರ
ಮಗು

-೧-

ರಾತ್ರಿ ಒಂದು ಗಂಟೆ. ಕಿಕ್ಕಿರಿದ ನಾಟಕ ಮಂದಿರದಲ್ಲಿ ಅನೇಕ ಜನರು ಆಕಳಿಸುತ್ತಲೋ, ತೂಕಡಿಸುತ್ತಲೋ ಇದ್ದರು. ಅಲ್ಲಿ ಇಲ್ಲಿ ಒಬ್ಬೊಬ್ಬ ದೊಡ್ಡ ಮನುಷ್ಯ ಹಳ್ಳದಲ್ಲಿಯ ಕುರ್ಚಿ ಸಾಲುಗಳ ಸಂದಿಯಲ್ಲಿ ಸರಿದುಕೊಂಡು ಹೊರಟು ಹೋಗುತ್ತಲೂ ಇದ್ದ. ನಿದ್ರಾವಸ್ಥೆಯ ಮೊದಲು, ಎರಡನೆಯ ಮಟ್ಟದಲ್ಲಿಲ್ಲದವರು ಕಳೆದ ದೃಶ್ಯವನ್ನೋ, ಸ್ವಂತ ವಿಷಯ ವನ್ನೋ ಚರ್ಚಿಸುತ್ತ ನಗುತ್ತಲೋ ಶಪಿಸುತ್ತಲೋ ಇದ್ದರು. ಲೆಗ್ ಹಾರ್ಮೋನಿಯಂ, ಪಿಟೀಲು, ತಬಲಗಳು, ಮದುವೆ ಮನೆಯ 'ರಿಸೆಪ್ಷನ್' ಸಂತೆ ಸಂಗೀತದಂತೆ, ಶಬ್ದವನ್ನು ಹೆಚ್ಚಿಸುತ್ತ ಗಲಭೆಯ ಪಾಲಾಗಿದ್ದುವು. ಈಚಲು ಚಾಪೆಯವರಿಂದ, ನೆಲದವರಿಂದ ಸಿಳ್ಳುಗಳು ದೊಡ್ಡ ಶಬ್ದವನ್ನು ಸೀಳಿ ಕೇಳಿಸುತ್ತಿದ್ದುವು. ಕೆಮ್ಮಿನ ತಾಳ ಬೇರೆ ಈ ಆರ್ಕೆಸ್ಟ್ರಾದಲ್ಲಿ.

ಆಗ! ಆಗ ತೆರೆ ತೆರೆಯಿತು-ಮೆಲ್ಲ ಮೆಲ್ಲನೆ, ಮೇಲೆ ಮೇಲೆ ಸುರುಳಿ ಸುರುಳಿಯಾಗಿ. ಭವ್ಯವಾದ ಅರಮನೆಯ ಅಂಗಳ. ಅಲ್ಲೊಂದು ರಮ್ಯ ವಾದ ಬೃಂದಾವನ. ಅದರ ಮುಂದೆ ಮುತ್ತಿನಾರತಿಯನ್ನು ಚಿನ್ನದ ತಟ್ಟೆ ಯಲ್ಲಿ ಹಿಡಿದು ನಿಂತ ಅಪ್ಸರೆ-ಹುಂ ಅಪ್ಸರೆ! ತಿರೆಯ ಅಪ್ಸರೆ! ಅವಳ ರೂಪೊ? ಬಣ್ಣಿಸಲಾಗದು, ಬಣ್ಣಿಸಲಾಗದು! ಮಿಂಚುಕಪ್ಪಿನ ಕುರುಳಿಗಿಂತ ಕಪ್ಪಾದ ಕಣ್ಣಿನ ಮಿಂಚು ನೋಟವೇ, ಆ ಎಳೆ ಬಳ್ಳಿಯ ಬಳುಕೇ ಸಾಲವೆ- ಗಮನವನ್ನೆಲ್ಲ ಸೆಳೆದುಬಿಡುವುದಕ್ಕೆ? ಇನ್ನೇನು ಬೇಕು? ಇನ್ನೇನು ಇವೆಯೋ ಯಾರಿಗೆ ಅರಿವು? ಸೌಂದರ್ಯ ಸೆರೆಹಿಡಿದಾಗ ಅದರ ಭಾಗ ಭಾಗ ಗಳನ್ನು ಬೇರ್ಪಡಿಸಿ ಬಗೆಯುವ ಬಗೆಗೇಡಿತನ, ರಸಿಕನಿಗೇ? ಇಲ್ಲ ಇಲ್ಲ. ಹುಚ್ಚು! ಇದೊಂದು ವ್ಯಕ್ತಿಯೋ, ಆಕರ್ಷಣೆಯ ಶಕ್ತಿಯೋ? ಎರಡೂ, ಎರಡೂ. ಆಹಾ! ಆ ಬಿಳಿಯ ತೆಳು ಸೀರೆ, ಕೆಂಪು ಕುಪ್ಪಸ ಎಷ್ಟು ಚೆನ್ನಾಗಿ ಒಪ್ಪುತ್ತವೆ-ಗುಲಾಬಿ ತುರಾಯಿಗೆ ಮಲ್ಲಿಗೆ ಮಾಲೆಯನ್ನು ಹಾಕಿದ ಹಾಗೆ!

ದೀಪಾರತಿ–ಅಯ್ಯೋ, ಹೋಗಲಿ ಬಿಡಿ. ತಾಳಿ! ಕೇಳಿ! 'ಕರುಣಿಸೌ ಎಲೆ ತಾಯೆ......' ಮೋಹನ ರಾಗ. ಎಷ್ಟು ಹಿತ! ಈ ವೀಣೆಯೂ ಎಲ್ಲಿಂದ? ಅಲ್ಲ, ಅವಳ ಮೆಲು ದನಿ! ಹುಶ್! ಶ್! ನಿಶ್ಶಬ್ದ–ನಾಟಕ ಮಂದಿರದಲ್ಲಿ ಎಲ್ಲೆಲ್ಲೂ! ಆ ಸಂತೆಯು ಗುಜುಗುಜು ಎಲ್ಲ ಎಲ್ಲೋ–ಗುಡುಗಿನ ಹೊಳಲು ಅಡಗಿ ಹೋದಂತೆ. ಎಂಥ ಮಂತ್ರವಾದಿಯ ತಂತ್ರ! ಕೆಮ್ಮುವ ಕೆಟ್ಟತನ ಇರಲಿ, ಉಸಿರು ಹುಯ್ಯುವರು ಯಾರು? ಬಿರಿಗಣ್ಣು, ತೆರೆದ ಕಿವಿಗಳಿಂದ ಬೆರಗಾಗಿವೆ ಜನ. ತೆರೆದ ತುಟಿಗಳೂ ಎಷ್ಟೋ. ಆಹಾ, ಏನು ಗಾನ ಲಹರಿ! ತಂಗಾಳಿ ಎಬ್ಬಿಸಿದ ಸಣ್ಣ ಅಲೆಗಳ ಮೇಲೆ ತೇಲಾಡುವ ಕುಸುಮ ದಳಗಳಂತೆ ಹಗುರವಾಗಿ ಮೈ ಮರೆತು ತೇಲುತ್ತಿದ್ದಾರೆ ಪ್ರೇಕ್ಷಕರು.

ಗಾನ ನಿಂತಿತು. ಬಂದ ಅಭಿಮನ್ಯು. ಪದ್ಮವ್ಯೂಹವನ್ನು ಭೇದಿಸಲು ಹೊರಟಿದ್ದಾನೆ. ಪ್ರಿಯೆ ಉತ್ತರೆಯನ್ನು ಬೀಳ್ಕೊಳ್ಳಲು ಬಂದಿದ್ದಾನೆ ಅವನ ಧೈರ್ಯದ ನುಡಿ ಅವಳ ಅಧೈರ್ಯವನ್ನು ನೀಗಲಾರದು. ಅವಳ ಎದೆಯ ಹೊಯ್ದಾಟ, ಗದ್ಗದ ಕಂಠ, ಕಂದಿದ ಮುಖ, ಈ ಭಾವವನ್ನು ಹೇಗೆ ತೋರಿಸುತ್ತಿವೆ! ಅವಳ ಗಲ್ಲವನ್ನು ಹಿಡಿದು ಕುರುಳನ್ನು ನೇವರಿಸುತ್ತ ಅವನು–ಆಹಾ! ಎಂಥ ಪುಣ್ಯವಂತ! ಸಾವು ಕಾದಿದ್ದರೂ ಈ ಸ್ಥಿತಿಗೆ ಬಯಸದ ಗಂಡು ಉಂಟೆ!–ಸಮಾಧಾನಪಡಿಸುತ್ತಿದ್ದಾನೆ. ಆದರೆ ಬಿಕ್ಕಿ ಬರುವ ದುಃಖದಲ್ಲಿ, ಹರಿವ ಕಣ್ಣೀರಿನಲ್ಲಿ ಅವಳಿಗೆಲ್ಲಿ ಸಮಾಧಾನ? ಅಂತೂ ಕಡೆಗೆ ತನ್ನ ಹೆಂಗರುಳನ್ನು ಕ್ಷಾತ್ರತನದಿಂದ ಬಿಗಿಹಿಡಿದು ಬೀಳ್ಕೊಳಲು ಸಿದ್ಧಳಾಗುತ್ತಿದ್ದಾಳೆ. ಅಗೊ, ಅವನಿಗೆ ಕುಂಕುಮವಿಟ್ಟಳು, ಹಾರ ಹಾಕಿ ದಳು, ಆರತಿ ಎತ್ತಿದಳು. "ಪೋಗಿ ಬಾ ಪ್ರಿಯತಮಾ...." ಕಾಂಬೋಧಿ! ಏನು ಸುಖ–ಈ ಹೊತ್ತಿನಲ್ಲಿ, ಈ ಸಂದರ್ಭದಲ್ಲಿ, ಈ ಕಂಠದಲ್ಲಿ! ತುಂಬಿದ್ದ ಚಿಲುಮೆಯ ಪಾತ್ರ ಈಗ ಉಕ್ಕಿ ಸುರಿಯುತ್ತಿದೆ....ಅಗೋ, ಅವನು ಹೊರ ಡಲು ಹೆಜ್ಜೆಯಿಟ್ಟ. ಸತ್ಯವಾನನ ಜೀವವನ್ನು ಹಿಂಬಾಲಿಸಿದ ಸಾವಿತ್ರಿಯಂತೆ ಇವಳೂ ನಡೆಯುತ್ತಿದ್ದಾಳೆ. ಆಹಾ, ಏನು ಅಭಿನಯ! ನಸು ಬಾಗಿದ ಮೈ, ಆರತಿ ಹಿಡಿದೂ ಕೊಂಚ ನೀಡಿದ ಕೈಗಳು, ಒಂದೆಡೆಗೆ ಸ್ವಲ್ಪ ಬಾಗಿದ ತಲೆ, ಅರೆ ಮುಚ್ಚಿದ ಕಣ್ಣುಗಳು, ನಿಂತು ನಿಂತು ಮೆಲ್ಲನೆ ಸರಿಸುವ ಹೆಜ್ಜೆ– ಇಲ್ಲ, ಅಭಿನಯವಲ್ಲ; ಪಾತ್ರದಲ್ಲಿ ಇವಳು ತಲ್ಲೀನಳಾಗಿಹೋಗಿದ್ದಾಳೆ. ಓ,

ಅವನು ಮರೆಯಾದ. ಕೈಜಾರಿ ದೀಪಾರತಿ ಬಿದ್ದಿತು! ದೀಪಗಳು ಚೆಲ್ಲಾಪಿಲ್ಲಿಯಾದವು. ಹಾಡು ನಿಂತಿತು, ಹುಡುಗಿ ಬಿದ್ದಳು! ಮೂರ್ಛೆ! ಒಂದು ಕ್ಷಣ ಎಲ್ಲರೂ ಸ್ತಬ್ಧ: ಮರುಕ್ಷಣದಲ್ಲೇ ಎಲ್ಲೆಲ್ಲೂ ಹಾಹಾಕಾರ! ದೃಶ್ಯದ ಪರದೆಗೆ ಬದಲಾಗಿ ಅಂಕದ ಪರದೆಯೇ ಆತುರದಿಂದ ಬಿದ್ದಿತು. ಒಳಗೆ ಬೆಂಕಿ! ಬೆಂಕಿ! ಹತ್ತಿತು, ಹತ್ತಿತು! ಪರದೆ ಉರಿಯಿತು. ಅಯ್ಯೋ, ಹುಡುಗಿಯ ಗತಿ! ಹುಡುಗಿ! ಎಲ್ಲೆಲ್ಲೂ ಕೂಗು, ಕಿರಿಚು, ನೂಕುನುಗ್ಗು, ಕೋಲಾಹಲ! ದೊಂಬಿ!

ಎಲ್ಲರಿಗೂ ಮುಂಪಾಗಿ ಗಾಬರಿಯ ಅತ್ಯಾತುರದಿಂದ ನಾಗರಾಜ ರಂಗಭೂಮಿಗೆ ಹಾರಿದ. ಉರಿಯುವ ತೆರೆಯನ್ನು ಹರಿದು ಒಳಗೆ ನುಗ್ಗಿದ. ಇತರರು ಹಾರಾಡುತ್ತ ಚೀರಾಡುತ್ತಿರುವಲ್ಲಿ ತನ್ನ ಎದುರಿನಲ್ಲಿ ನಿಶ್ಚೇಷ್ಟಿತಳಾಗಿ ಬಿದ್ದಿದ್ದ ಹುಡುಗಿ–ರಂಗನಾಯಕಿಯ ದೇಹವನ್ನು ಅನಾಯಾಸವಾಗಿ ಎರಡು ಕೈಗಳಲ್ಲೂ ಮಗುವನ್ನು ಎತ್ತಿಕೊಳ್ಳುವಂತೆ ಎತ್ತಿಕೊಂಡು, ಉರಿಹಾಯುವ ಹೋರಿಯಂತೆ ತಲೆತಗ್ಗಿಸಿ ಹೊರಗಡೆಗಾಗಿ ನೇರವಾಗಿ ನುಗ್ಗಿದ. ದಿಕ್ಕು ಕಾಣದಂತೆ ಮುಸುಕಿದ್ದ ಹೊಗೆಯಾಗಲೀ, ಮೇಲೆ ಬೀಳುತ್ತಿದ್ದ ಕೊಳ್ಳಿಗಳಾಗಲೀ, ಹತ್ತಿ ಉರಿಯುತ್ತಿದ್ದ ತನ್ನ ಬಟ್ಟೆಯಾಗಲೀ ಅವನ ಲಕ್ಷ್ಯಕ್ಕೆ ಬರಲಿಲ್ಲ. ಆವಳನ್ನು ರಂಗಮಂದಿರದ ಅಪಾಯದಿಂದ ರಕ್ಷಿಸಬೇಕೆಂಬುದು ಅವನ ಮನಸ್ಸನ್ನೆಲ್ಲ ಆವರಿಸಿದ್ದ ಒಂದು ಆಕಾಂಕ್ಷೆ. ಅದಕ್ಕಾಗಿ ನಡೆದ ಈ ಯತ್ನಕ್ಕೆ ಮತ್ತೆ ಯಾವುದೊಂದೂ ತಡೆಯಿಲ್ಲ. ಇಲ್ಲ. ರಾಜ ತನ್ನ ಸಿರಿಯ ಹೊರೆಯನ್ನು ಹೊತ್ತು ಕಂಬಗಳಿಗೆ ಬಡಿಯುತ್ತ, ಓದರುವ ಜನರನ್ನು ತಳ್ಳುತ್ತ ಉರಿಯುವ ಕುಪ್ಪೆಗಳ ಮೇಲೆ ಹಾರುತ್ತ ಎಲ್ಲ ಆತಂಕಗಳನ್ನೂ ಕಳೆದು ಹೊರಗಡೆಯ ಬಯಲಿಗೆ ಬಂದುಬಿಟ್ಟ. ಆಹಾ, ಎಷ್ಟು ತಂಪು ಗಾಳಿ! ರಂಗನಾಯಕಿಯನ್ನು ಕಾಪಾಡಿದನೆ? ಎಂತಹ ಆನಂದ! ಮೈ ಪುಳುಕ! ಕಾರ್ಯಭರದಲ್ಲಿ ಕಾಣದಿದ್ದ ಆಯಾಸ ಈಗ ಕವಿಯಿತು. ಕಣ್ಣು ಮಂಜಾದುವು. ಕಾಲು ಸೋತುವು, ಕುಸಿದುವು. ಬಿದ್ದ, ಬಿದ್ದ, ಬಿದ್ದುಬಿಟ್ಟ–ಭಾರವನ್ನು ಇನ್ನೂ ಹಿಡಿದುಕೊಂಡೇ.

ನಾಗರಾಜನಿಗೆ ತಟ್ಟನೆ ಎಚ್ಚರವಾಯಿತು. ಮಂಚದಿಂದ ಉರುಳುವುದರಲ್ಲಿದ್ದ. ಕೈಗಳು ಎದೆಗೆ ಬಿಗಿದುಕೊಂಡಿದ್ದುವು ಮೈ ಬಿಸಿಯಾಗಿ ಬೆವೆತಿತ್ತು.

ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ತಂಗಾಳಿ ಕಿಟಕಿಯಿಂದ ಬೀಸುತ್ತಿತ್ತು. ಒಂದೊಂದು ಹಕ್ಕಿ ಕಿಚಿಕಿಚಿ ಎಂದಿತು. ಯಾವುದೋ ಎತ್ತಿನ ಬಂಡಿಯ ಸಾಲು ಕೀಗುಟ್ಟುತ್ತ, ರಸ್ತೆಯ ನುರುಜುಗಲ್ಲನ್ನು 'ಕರಕರ' ಎಂದು ತಿಕ್ಕಿ ಪುಡಿಮಾಡುತ್ತ 'ಡಕ್‌ಡಕ್' ಎಂದು ಕಡಾಣಿಗಳಿಗೆ ಗಾಲಿಗಳನ್ನು ಬಡಿಯುತ್ತ ಹೋಯಿತು. ಇದಿರು ಕಿಟಕಿಯಿಂದ ಬೆಳದಿಂಗಳು ನುಸುಳಿಕೊಳ್ಳುತ್ತಿತ್ತು. ದಿಗಂತದಲ್ಲಿ ಮಂಕಾದ ಮುರುಕು ಚಂದ್ರನೂ ಪಕ್ಕದಲ್ಲಿ ತೇಲಾಡುತ್ತ ಉರಿಯುವ ಸೊಡರಿನ ದೀಪದಂತೆ ಗುರುವೂ ಒಟ್ಟಿಗೆ ಮುಳುಗುತ್ತಿದ್ದುವು. ಮನೆಯ ಗಡಿಯಾರ ಒಂದು, ಎರಡು, ಮೂರು, ನಾಲ್ಕನ್ನು ಬಾರಿಸಿತು. ಅವನು ಸರಿಯಾಗಿ ಹೊರಳಿಕೊಂಡು ಒಂದು ಬಾರಿ ಅತ್ತಿತ್ತ ನೋಡಿ ಮತ್ತೆ ಕಣ್ಣು ಮುಚ್ಚಿಕೊಂಡ. ಆದರೆ ನಿದ್ದೆ ಹತ್ತಲಿಲ್ಲ. ಯೋಚನೆಗಳು ಅಲೆಯಲೆಯಾಗಿ ತಲೆಯಲ್ಲಿ ಸುಳಿದಾಡಿದುವು. ಸುಮ್ಮನೆ ಹೊರಳಾಡಿದ –ಮುಳ್ಳಿನ ಮೇಲೆ ಮಲಗಿದ್ದ ಹಾಗೆ. ಹುಂ. ಆ ರಾತ್ರಿಯೂ ಶಾಮಣ್ಣನ ಕಂಪನಿಯ–ಕಲಾಮಂಡಲಿಗೆ ಅದೇ ಜನರ ನಾಮಕರಣ–'ವೀರ ಅಭಿಮನ್ಯು' ನಾಟಕಕ್ಕೆ ಹೋಗಿ ಮೂರು ಗಂಟೆಗೆ ಹಿಂದಿರುಗಿ ಮಲಗಿದ್ದ. ಇದು ಆರನೆಯ ಬಾರಿಗೋ ಏನೋ. ಈ ನಾಟಕ ಆ ಕಡೆಯಲ್ಲೆಲ್ಲ ಪ್ರಖ್ಯಾತಿ ಪಡೆದಿತ್ತು. ಅದಕ್ಕೆ ಕಾರಣ ಆ ಹುಡುಗಿ–ರಂಗನಾಯಕಿಯ ಉತ್ತರೆಯ ಪಾತ್ರ. ಇದಕ್ಕಾಗಿ ಜನರು ಕಿಕ್ಕಿರಿಯುತ್ತಿದ್ದರು. ಇವಳನ್ನು ನೋಡಿ, ಅಭಿನಯವನ್ನು ಸವಿದು ನಾಗರಾಜ ಅವಳಿಗೆ ಯಾವಾಗಲೋ ಮಾರುಹೋಗಿದ್ದ. ಮತ್ತೆ ಮತ್ತೆ ನಾಟಕಕ್ಕೆ ಹೋಗುತ್ತಿದ್ದ. ಈಗ ಮೂರು ಗಂಟೆಯ ಹಿಂದೆ ನೋಡಿದ ದೃಶ್ಯವೇ ಸ್ವಪ್ನದಲ್ಲಿ ಮತ್ತೆ ಸುಳಿದಿತ್ತು. ಎಲ್ಲವೂ ಅದೇ ರೀತಿ; ಆದರೆ ಬೆಂಕಿಯ ಅನಾಹುತವೇನೂ ನಡೆದಿರಲಿಲ್ಲ. ನಾಗರಾಜನಿಗೆ ಅವಳನ್ನು ರಕ್ಷಿಸುವ ಅವಕಾಶ ಸೌಭಾಗ್ಯ ಸಿಕ್ಕಿರಲಿಲ್ಲ. ಕೇವಲ ಕಾಲ್ಪನಿಕ. ಛೆ; ಈ ಜಾಗ್ರತಾವಸ್ಥೆಯ ಸತ್ಯ ಆ ಸುಖಕ್ಕೆ ಎಂತಹ ಕಹಿಯನ್ನು ಹಿಂಡಿತು! ಈ ಬೆಂಕಿಯ ಪ್ರಕರಣ ಹೇಗಾದರೂ ಇರಲಿ. ಆ ನಾಟಕ ಜೀವನದ ಬೆಂಕಿಯಿಂದ ಹೂವಿನಂತಹ ಆ ಹುಡುಗಿಯನ್ನು ತಾನು–ಹುಂ, ತಾನು–ರಕ್ಷಿಸಬೇಕು. ಯಾಕೆ? ಮೊದಲು ಕಂಡಾಗಲೇ ಅವಳು ತನ್ನವಳಾಗಿಬಿಟ್ಟಿದ್ದಳು. ಅದಕ್ಕೆ ತಕ್ಕ ಅಭಿಮಾನ, ಅವಳಲ್ಲಿ; ಆತಂಕ, ಅವಳ ಬಗ್ಗೆ. ಹೌದು, ಅವಳು ರಂಗ

ಭೂಮಿಯ ಮೇಲೆ ಬಂದಾಗ ತನ್ನ ಪಕ್ಕದವರು ಉಚ್ಚ ಮಾತುಗಳನ್ನಾಡಿ ಚಪ್ಪರಿಸಿದಾಗ ತಾನು ಗದರಿಸಲಿಲ್ಲವೆ? ಒಬ್ಬನು 'ಅವಳು ತಮ್ಮ ಸಂಬಂಧವೆ?' ಎಂದು ಹಲ್ಕಿರಿದು ಕೇಳಿ ಕಣ್ಣು ಹಾರಿಸಿದಾಗ ತನ್ನ ದೃಷ್ಟಿಯೊಂದೇ ಅವನನ್ನು ತಣ್ಣಗಾಗಿಸಿತ್ತು. ನಿಜ, ಆ ಮೃದು ಸಸಿಯನ್ನು ಕಳೆಗಳಿಂದ ಕಾಪಾಡುವುದು ತನ್ನ ಕೆಲಸ. ಪಾಪ, ಅವಳಿಗೆ ಮನೆಯಿಲ್ಲವೆಂದಲ್ಲವೆ, ಇಂಥ ಅವಮಾನದ ಮಾತು, ದೃಷ್ಟಿ ? ತನ್ನ ಮನೆಯನ್ನು ಕೊಟ್ಟರೆ ? ಆಗ ಬಾಯಿ ಮುಚ್ಚಿಕೊಳ್ಳುತ್ತಾರೆ. ಇಲ್ಲದಿದ್ದರೆ, ತಾನೇ ಮುಚ್ಚಿಸದೆ ಬಿಡುವವನು ?.... ಆಹಾ, ಅವಳೊಡನೆ ಸಂಸಾರ ಎಷ್ಟು ಸುಖ ! ಪಾತ್ರಾಭಿನಯದಲ್ಲೇ ಅಷ್ಟೊಂದು ಆಸಕ್ತಿ ಹೊಂದಿ ತಲ್ಲೀನಳಾಗಬಲ್ಲವಳು ನಿಜವಾದ ಸಂಬಂಧದಲ್ಲಿ ಹೇಗೆ ನಡೆದುಕೊಂಡಾಳು. ಅದನ್ನು ನೋಡುವ, ಅನುಭವಿಸುವ ಪುಣ್ಯ ತನಗಿದ್ದೀತೆ ? ಯಾಕಿರಬಾರದು ? ಇನ್ನೂ ಯುಕ್ತಿ ಸಿಯೋ ಇಲ್ಲ. ಹುಂ. ಅವಳು ಒಪ್ಪಬಹುದೇ ? ಹೇಗೆ ಗೊತ್ತು ? ಅವಳನ್ನೇನೋ ತೆರೆಯ ಹಿಂದೆ ಈಗಾಗಲೇ ಅನೇಕ ಬಾರಿ ಕಂಡಿದ್ದ. ತಾನು ಯಾರೆಂಬುದು ಅವಳಿಗೆ ತಿಳಿದಿತ್ತು. ಇತರ ಶ್ರೀಮಂತ ಯುವಕರಂತೆ ಕೆಲವು ಮಾತುಗಳನ್ನೂ ಆಡಿದ್ದ. ಆದರೆ ಸಲಿಗೆಯಿರಲಿಲ್ಲ. ಹಾಗೂ ತನ್ನ ಬಗ್ಗೆ ಅವಳಿಗೆ ಅಲಕ್ಷ್ಯವೂ ಇಲ್ಲವೆಂದು ಅನ್ನಿಸಿತ್ತು, ಅವನಿಗೆ. ಅಯ್ಯೊ, ತಾನೂ ಒಬ್ಬ ಕಂಪನಿಯವನೇ ಆಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ! ಈವರೆಗೆ ಇತ್ಯರ್ಥವಾಗಿಹೋಗಿರುತ್ತಿತ್ತು. ಅಥವಾ ತಾನೂ ಆ ಕಂಪನಿಯ ಕೆಲವರಂತೆಯೋ....ಛೀ, ಆ ನಾಯಿಗಳಂತೆಯೇ ತಾನು ? ಹುಂ, ಅವರಿಗೆ ಅವಳಲ್ಲಿ ಎಷ್ಟು ಸದರ ! ಅವಳನ್ನು ಬೇಕಂತೆಯೇ ಮುಟ್ಟಿಕೊಂಡು ಓಡಾಡುತ್ತಿದ್ದರು. ಏನೋ ಸಲಿಗೆಯ ಮಾತು, ಹಾಳು ಕಿಸಿಕಿಸಿ ನಗು, ನಿರ್ಲಜ್ಜೆಯ ನೋಟ. ಅಬ್ಬಬ್ಬ ! ಇನ್ನೂ ಏನೇನೋ. ನಾಟಕದ ಜೀವನ ! ಮೈ ಜುಂ ಎನ್ನುತ್ತದೆ. ಇವರಿಗೆ ಏನು ಅಧಿಕಾರ–ಇದಕ್ಕೆಲ್ಲ ? ಕಾಡು ಜನರು ! ಅವಳೂ ಇವರೊಡನೆ ಆಗಾಗ ನಸುನಗುತ್ತಿದ್ದಳಲ್ಲ, ಸಲಿಗೆಯಿಂದ ಮಾತಾಡುತ್ತಿದ್ದಳಲ್ಲ ? ಪಾಪ, ಮುಗ್ಧೆ, ಮೋಸಹೋಗಿದ್ದಾಳೆ. ಅವಳಿಗೆ ಬೇರೆ ಸಂಗವೆಲ್ಲಿ ? ಇನ್ನೇನು ಮಾಡಾಳು? ತನ್ನ ಸಂಗ, ಮರ್ಯಾದೆಯ ಮನೆ ಇವನ್ನು ಕಂಡ ಮೇಲೆ ಆ ನೀಚರನ್ನು ಕಣ್ಣೆತ್ತಿಯಾದರೂ ನೋಡಾಳೆ? ಉಹುಂ. ಅವಳ ಸ್ವಭಾವ ಎಂದೂ ಹಾಗಿಲ್ಲ.

ಇಲ್ಲ. ಎಲ್ಲ ಸ್ಥಳದೋಷ, ಸಹವಾಸ ದೋಷ. ಸ್ವಭಾವ ದೋಷವಲ್ಲ. ಹುಂ, ಹುಂ. ಆದಷ್ಟು ಬೇಗ ಆ ನಾಯಿಗಳಿಂದ ಅವಳನ್ನು ದೂರವಾಗಿಡಬೇಕು. ಆ ಹಕ್ಕಿಯನ್ನು–ಗಿಣಿಯನ್ನು–ತನ್ನ ಎದೆಯ ಪಂಜರವಲ್ಲಿಟ್ಟು ಪೋಷಿಸ ಬೇಕು. ಈ ಬೆಕ್ಕುಗಳ ಪಂಜಕ್ಕೆ ಸಿಕ್ಕದಂತೆ ಮೇಲಿಡಬೇಕು–ತನ್ನೊಡನೆ. ಆಹಾ!

ತನ್ನನ್ನು ಒಪ್ಪಿದಳು; ಒಡನೆ ಬಂದುಬಿಡಲೂ ಸಿದ್ಧವಾದಳು; ಮುಂದೆ? ಅಪ್ಪ ಅಮ್ಮ ಒಪ್ಪಿಯಾರೆ? ಕಷ್ಟ. ಕಷ್ಟ? ಅಸಾಧ್ಯ. ಹುಂ. ಅವರೇ ಒಪ್ಪುವವರು? ಉಹುಂ. ಮತ್ತೆ? ಆದರೇನು, ತಾನೇ ಈ ಅಡ್ಡಿಗೆ ಬಲಿಯಾಗುವವನು? ಇಲ್ಲ. ಈ ಮಾತಿಗೆ ಹಿಂದೆಗೆಯುವ ಹೇಡಿಯೆ? ಛೆ! ಇದರಿಂದ ಏನಾದರೂ, ಏನು ಬಂದರೂ ಸಹಿಸಬಲ್ಲ ಧೈರ್ಯವಿದೆ. ಸಂಪ್ರದಾಯ ಶರಣನಲ್ಲ, ಸುಧಾರಕ. ತೋಳದ ಬಾಯಿಗೆ ಸಿಕ್ಕಿದ ಕುರಿಯ ಮರಿಯನ್ನು–ಅದೂ ತನ್ನ ಮುದ್ದು ಮರಿ–ಬಿಡಿಸಿಕೊಳ್ಳದ ಕಟುಕತನ ತನಗೆಲ್ಲಿಯದು? ಜಾರಿಹೋಗುತ್ತಿರುವ ಬಾಳನ್ನು ಉಳಿಸಿಕೊಳ್ಳುವುದು ಎಂತಹ ಉತ್ತಮ ಧ್ಯೇಯ! ತಾನು ಧ್ಯೇಯವಾದಿ. ಅವಳು ತನ್ನವಳು. ಎಂದಿಗೂ ಕೈಬಿಡಲಾಗದು....ಅಯ್ಯೊ ಏನು ಭ್ರಮೆ! ಅವಳಿಗೆ ತನ್ನ ಮನಸ್ಸಿನ ಸೂಚನೆಯೂ ಕೂಡ ಇನ್ನೂ ಮುಟ್ಟಿಲ್ಲ. ಈಗಾಗಲೇ ಈ ಹುಚ್ಚೆ? ಹುಂ, ಸೂಚನೆಯನ್ನು ಮುಟ್ಟಿಸುವ ಯೋಚನೆ ಹಿಂದೆಯೂ ಎಷ್ಟೋಬಾರಿ ಬಂದಿತ್ತು; ಯಾಕೆ, ದಿನದಿನವೂ ತನ್ನನ್ನು ತಿವಿಯುತ್ತಲೇ ಇತ್ತು. ಆದರೆ ಅವಳೊಡನೆ ಪ್ರಸ್ತಾಪಿಸಲು ಯಾಕೋ ಧೈರ್ಯ ಬರುತ್ತಿರಲಿಲ್ಲ. ಯತ್ನ ವನ್ನು ಮುಂದೆ ಹಾಕುತ್ತಿದ್ದ..ಸಮಯದ ಗೊತ್ತು, ಮಾತಿನ ಕ್ರಮ ನಿರ್ಧರ ವಾಗಿರಲಿಲ್ಲ. ಆದರೆ ಈಗ? ಕಂಪನಿ ಇನ್ನೆರಡು ದಿನಗಳಲ್ಲಿ ಹೊರಡುವು ದಿತ್ತು. ಇನ್ನೂ ತಡಮಾಡುವುದೆ? ಉಹುಂ. ಉಹುಂ, ಅಂದೇ ಪ್ರಸ್ತಾಪಿಸಿ ಬಿಡಬೇಕು–ರೀತಿ ಹೇಗಾದರೂ ಸರಿ. ದೇವರೆ, ಸಹಾಯವಾಗು!

ನಾಗರಾಜನ ಅದೇ ಚಿಂತೆ ತಡಬಡೆಯಿಲ್ಲದೆ ಮುಂದೆ ಹಿಂದೆ ಅತ್ತ ಇತ್ತ ಹರಿದಾಡಿತು, ಹೊರಳಾಡಿತು. ಈಗಾಗಲೇ ಇದು ಎಷ್ಟನೆಯ ಬಾರಿಗೋ, ಎಷ್ಟು ಬಾರಿಯೋ ಅವನಿಗೇ ಗೊತ್ತಿರಲಿಲ್ಲ. ಭಾವಾವೇಶದ ಜ್ವರದಿಂದ ಮೈ ಕಾದಿತು. ಪೂರ್ವದಿಂದ ಇಣಿಕಿದ ಬೆಚ್ಚನೆಯ ಬೆಳಕಾಗಲೀ

ಸುತ್ತಮುತ್ತಲಿನ ಮರಗಳ ಮೇಲಿನ ಚಿಲಪಿಲವಾಗಲೀ, ಬೀದಿಯ ಜನರ ಮಾತಾಗಲೀ, ಮನೆಯೊಳಗಿನ ಸದ್ದಾಗಲೀ ಇವನಿಗೆ ದಿನವನ್ನು ಸೂಚಿಸ ಲಿಲ್ಲ. ಭವಿಷ್ಯದ ರಾತ್ರಿಯಲ್ಲಿ, ಕನಸಿನ ಹೊದಿಕೆಯೊಳಗೆ, ವಿಚಾರದ ನಿದ್ದೆ ಯಲ್ಲಿ ಮೈ ಮರೆತಿದ್ದ. ಬಡಿದ ಎಂಟು ಗಂಟೆಗೂ ಕಿವಿ ಕಿವುಡಾಗಿತ್ತು. ತಾಯಿ ಕೂಗಿದಾಗಲೇ ಪ್ರಜ್ಞೆ ಬಂತು. ದಡಬಡನೆ ಎದ್ದ.

-೨-

ನಾಗರಾಜನು ಸಂಪ್ರದಾಯಸ್ಥನಲ್ಲದಿದ್ದರೂ ಈ ಸೂಕ್ಷ್ಮ ವಿಷಯ ವನ್ನು ಹೇಗೆ ಮುಂದುವರಿಸುವುದೆಂಬುದನ್ನು ನಿರ್ಧರಿಸುವುದಕ್ಕೆ ಅಂದಿನ ಮಧ್ಯಾಹ್ನವೆಲ್ಲ ಅವನಿಗೆ ಬೇಕಾಯಿತು. ರೂಢಿಯ ಸಂಬಂಧವನ್ನು ಬಯಸಿ ದ್ದರೆ ತಂದೆತಾಯಿಗಳಿಗೆ ಸೂಚಿಸಬಹುದಾಗಿತ್ತು. ಯಾಕೆ, ಅವರೇ ಈಗ ಕೃಷ್ಣಸೆಟ್ಟರ ಮಗಳು ಜಾನಕಿಗಾಗಿ ತನ್ನನ್ನು ಒತ್ತಾಯಪಡಿಸುತ್ತಿದ್ದರು. ಇದೊಂದು ದೊಡ್ಡ ಆತಂಕ. ಅದು ಬೇಡವೆಂದರೆ ಸಾಕು, ಬೆಂಕಿಯೇಳು ವುದು ನಿಜ. ಇನ್ನು ಈ ಹೊಸ ಸಂಬಂಧ ಸೂಚಿಸಿದರೆ ತುಪ್ಪ ಸುರಿದ ಹಾಗೇ. ಇದನ್ನು ಹೇಗೆ ತಡೆದುಕೊಳ್ಳುವುದೆಂಬುದನ್ನು ಯೋಚಿಸುವುದು ಕೂಡ ಅವನಿಗೆ ಸದ್ಯಕ್ಕೆ ಬೇಕಾಗಿರಲಿಲ್ಲ. ಯುದ್ಧಕಾಲದಲ್ಲಿ ಶಸ್ತ್ರಾಭ್ಯಾಸ ವಾಗಲಿ. ಬೇರೆ ಗತಿಯಿಲ್ಲ. ಆದರೆ ಇವರಿಂದ ಇದಕ್ಕೆ ಸಹಾಯವೆಂದರೆ ಮರಳಿನಿಂದ ಎಣ್ಣೆಯನ್ನು ನಿರೀಕ್ಷಿಸಿದ ಹಾಗೇ. ಮತ್ತೇನು ಆ ಕಂಪನಿಯ ಯಜಮಾನ ಶಾಮಣ್ಣನನ್ನು ಕಾಣುವುದೆ? ಅವನು ಯಾವ ಕಾರಣ ದಿಂದಲೋ–ಎಷ್ಟೆಷ್ಟು ಕಾರಣಗಳಿರಬಹುದೊ–ಇಲ್ಲವೆಂದು ಬಿಟ್ಟರೆ? ಬೇರೆಯ ಮಾರ್ಗದಿಂದ ಮುಂದುವರಿಯುವುದೂ ಅಸಾಧ್ಯ–ಕಡೆಗೆ ಅಪ್ರಯೋಜಕ ವಾದೀತು. ಉಹುಂ. ಮೊದಲು ರಂಗನಾಯಕಿಯನ್ನು ಒಪ್ಪಿಸಬೇಕು. ಆನಂತರ ಬೇಕಾದರೆ ಇವನಲ್ಲಿ ಭಿಕ್ಷೆ. ನಿಜ. ಆದರೆ ಅವಳನ್ನು ವಿಚಾರಿಸು ವುದು ಹೇಗೆ? ಯಾರಾದರೂ ಮೂರನೆಯವರ ಮೂಲಕವೆಂದರೆ ಅಪಾರ್ಥ ಅನರ್ಥಗಳಾದಾವು. ಎದೆಯನ್ನು ಬಿಚ್ಚಿ ಹೇಳಬೇಕಾದರೂ ಅವಕಾಶವಿಲ್ಲ. ತಿಳಿಯದವರಲ್ಲಿ ನಿರ್ಜೀವ ಕಾಗದ ಪತ್ರವೆಂದರೆ ವಿನೋದವಾಗಿ ಪರಿಣಮಿಸ

ಬಹುದು. ಅಲ್ಲದೆ ಅನೇಕ ವೇಳೆ ಮಾತು ಹೇಳಲಾಗದುದನ್ನು ಮುಖ ಹೇಳುತ್ತದೆ. ತನಗಾದರೂ ಅವಳ ರೀತಿಯಿಂದ ಉತ್ತರದ ಸೂಚನೆಯಾಗ ಬಹುದು. ಹೌದು, ತಾನೇ ಅವಳನ್ನು ನೋಡಬೇಕು, ಮಾತನಾಡಿಸಿ ತಿಳಿಯಬೇಕು. ಗಾಬರಿಯಾದಾಳೋ ? ಇನ್ನೂ ಕೊಂಚ ಕಾಲ ಸಲಿಗೆಯನ್ನು ಬೆಳೆಸಿಕೊಂಡು ಅನಂತರ ಅಭಿಮತವನ್ನು ತಿಳಿಸುವುದಾಗಿದ್ದರೆ ಚೆನ್ನಾಗಿತ್ತಲ್ಲವೆ ? ಛಿ, ಅದಕ್ಕೆಲ್ಲಿ ಹೊತ್ತು ಈಗ ? ಅಲ್ಲದೆ ಎಂತೆಂತಹ ಜನರು ಯಾವ ಯಾವ ಹಂಚಿಕೆಗಳನ್ನಿಟ್ಟುಕೊಂಡು ಹೇಗೆ ಹೇಗೆ ಸಾಧಿಸಿಕೊಳ್ಳಲು ಯತ್ನಿಸುತ್ತಿರಬಹುದೋ. ಉಹುಂ. ತಡಮಾಡುವುದು ಸರಿಯಲ್ಲ. ಇಷ್ಟಕ್ಕೂ ಇಂತಹ ಸದುದ್ದೇಶವನ್ನಿಟ್ಟುಕೊಂಡು ಅದನ್ನು ಅಮುಕಿ ಹಿಡಿಯಬೇಕೇಕೆ ? ಹೇಳಿಬಿಟ್ಟರೆ ಏನು ತಪ್ಪು? ಮನಸ್ಸು ಎಷ್ಟು ಹಗುರವಾಗುತ್ತದೆ! ಅವಳನ್ನು ಉತ್ತರಕ್ಕೆ ಆತುರಪಡಿಸದಿದ್ದರಾಯಿತು. ಅಷ್ಟೆ. ಹುಂ. ಅಲ್ಲಿ ಅವಳ ಬಳಿ ಸುಳಿದಾಡುವ ಜನರೆಲ್ಲರೂ ದುರುದ್ದೇಶದವರೆ-ಇಲ್ಲದಿದ್ದರೂ ತನ್ನ ಉದ್ದಿಶ್ಯದವರಲ್ಲ. ಇದು ಅವಳಿಗೇನು ತಿಳಿಯದೆ ಇವೆಯೆ ? ತಾನೂ ಇವರ ಹಾಗೆಯೆ ಸಲಿಗೆಯನ್ನು ಬೆಳೆಸಿದರೆ ಅವಳಿಗೆ ಭೇದವೇನು ಗೊತ್ತಾದೀತು ? ಹುಂ. ನೇರವಾಗಿ ತನ್ನ ಇಷ್ಟವನ್ನು ಹೇಳಿಬಿಡುವುವೇ ಸರಿ-ಸೌಜನ್ಯ. ತಾನು ನೀಡುತ್ತಿರುವುದಾದರೂ ಸಾಮಾನ್ಯವಲ್ಲ. ಅದರ ಮಹತ್ವವನ್ನು ಅವಳು ತಿಳಿದಾಳು. ಇಲ್ಲದಿದ್ದರೆ ? ಉಹುಂ. ಅದರ ಯೋಚನೆಯು ಈಗಲೇ ಬೇಡ. ಅಂತಹ ದುರದೃಷ್ಟವಿರಲಾರದು.

ನಾಟಕದವರು ಇಳಿದಿದ್ದ ಬಿಡಾರಕ್ಕೇ ಹೋಗುವುದಕ್ಕೆ ನಾಗರಾಜನಿಗೆ ಇಷ್ಟವಾಗಲೀ ಧೈರ್ಯವಾಗಲೀ ಇರಲಿಲ್ಲ. ಅದು ಬಹಳ ಬಹಿರಂಗ ಪ್ರಸಂಗವಾದೀತೆಂದು ಭಯ. ನಾಟಕದ ಕಾಲದಲ್ಲಿ ತೆರೆಯೊಳಗೆ ಅವಕಾಶವನ್ನು ಕಲ್ಪಿಸಿಕೊಂಡು ಸೂಚಿಸಬೇಕೆಂದು ಅವನ ಯೋಜನೆ. ಅಲ್ಲಿನ ಗಲಭೆಯಲ್ಲಿ ತನ್ನ ಭೇಟಿ ಮಾತುಗಳು ಅಷ್ಟಾಗಿ ಇತರರ ಗಮನಕ್ಕೆ ಬರಲಾರವೆಂದು ಅವನ ನಿರೀಕ್ಷೆ. ದಿನ ಬಿಟ್ಟು ದಿನ ನಾಟಕಗಳನ್ನಾಡಿದರೂ ಆ ದಿನ ವಿಶೇಷವಾಗಿ 'ಶಾಕುಂತಲ'ವನ್ನು ಆಡುತ್ತಿದ್ದುದು ಅವನ ಆತುರಕ್ಕೆ ನೆರವಾಗಿತ್ತು.

ಆ ರಾತ್ರಿ ನಿಲುವುಗನ್ನಡಿಯ ಮುಂದೆ ನಿಂತು ಎಂದಿಗಿಂತ ಹೆಚ್ಚು ಎಚ್ಚರಿಕೆಯಿಂದ ಜರತಾರಿಯ ಪಂಚೆಯುಟ್ಟು, ರೇಷ್ಮೆ ಷರಟನ್ನು ಹಾಕಿ,

ಗುಂಗುರು ಕ್ರಾಪನ್ನು ಬಹಳ ಹೊತ್ತು ಬಾಚಿ, ಕುಡಿ ಮೀಸೆಯನ್ನು ತಿದ್ದಿ ಕರಿ ಸರ್ಜ್ಕೋಟನ್ನು ತೊಟ್ಟು, 'ಯುಡಿಕೋಲೋನ್' ಹಾಕಿದ ಬಿಳಿ ಚೌಕವನ್ನು ಮೇಲಿನ ಎಡ ಜೇಬಿಗೆ ಸಿಕ್ಕಿಸಿ, 'ಬಟನ್ ಹೋಲ್'ಗೆ ಕೆಂಪು ಗುಲಾಬಿಯನ್ನು ಸಿಕ್ಕಿಸಿ, ಪಂಪ್‌ಷೂ ಮೆಟ್ಟಿ, ಹಿಂದೆ ಮುಂದೆ ಹತ್ತು ಬಾರಿ ತಿರಿತಿರಿಗಿ ನೋಡಿಕೊಂಡು ಹೊರಟ. ಸಂಜೆಯೇ ಬಾಯಿಪಾಠ ಮಾಡಿದ್ದ ಊಹಾಪೋಹದ ಪ್ರಶ್ನೋತ್ತರಗಳನ್ನು ಪರೀಕ್ಷೆಗೆ ಹೋಗುವ ವಿದ್ಯಾರ್ಥಿ ಯಂತೆ ದಾರಿಯಲ್ಲಿ ಕಡೇ ಎರಡು ಸಾರಿ ಸ್ಮರಿಸಿಕೊಂಡು ಧೈರ್ಯ ತಂದು ಕೊಂಡು ಆಸೆ ಭಯಗಳಿಂದ ನಾಟಕಮಂದಿರವನ್ನು ಸೇರಿದ.

'ಶಾಕುಂತಲ' ಆಗಲೇ ಮೊದಲಾಗಿದ್ದಿತು. ನಾಟಕ ಅವನಿಗೆ ಬೇಕಾ ಗಿರಲಿಲ್ಲ. ಆದರೂ ತಾನು ಕಾದಿರಿಸಿದ್ದ ಸ್ಥಾನದಲ್ಲಿ ಕುಳಿತು ನೋಡಿದ– ರಂಗನಾಯಕಿಯನ್ನು. ಆಹಾ, ಈ ಋಷಿಕನ್ಯೆಯ ಪಾತ್ರವಂತೂ ಇವಳಿಗೆ ಎಷ್ಟು ಚೆನ್ನಾಗಿ ಒಪ್ಪಿತ್ತು! ಆ ನಾರು ಸೀರೆಯ ಕಿರಿ ನಡು, ರವಿಕೆಯಿಲ್ಲದೆ ಸೆರಗು ಮುಚ್ಚಿದ ತುಂಬಿದೆದೆ, ಹೂ ಕಟ್ಟಿದ ಬೋಳು ಕೈಗಳು ಎಷ್ಟು ದುಂಡು, ಬಿಳುಪು, ನುಣುಪು! ಸುಳಿಗುರುಳಿನ ಜೋಲು ಮುಡಿ, ಹಾಲು ಗೊರಳು, ಸಿರಿಯ ಮೊಗ, ಮುಗ್ಧ ದೃಷ್ಟಿ–ನಾಗರಾಜ ಎವೆಯಿಕ್ಕದೆ ನೋಡಿದ, ನೋಡಿದ. ತಣಿಯಲಿಲ್ಲ. ಆದರೆ ನಾಚಿದ. ಹೀಗೆ ರಂಗದ ಮೇಲೆ ಬರುವುದು ಇದೇ ಕಡೆಯ ಬಾರಿ ಆದೀತೆ ಎಂದು ಆಶಿಸಿದ. ಯಾವ ದೃಶ್ಯವೊ, ಅವಳೇನು ಹೇಳಿದಳೊ, ಹಾಡಿದಳೊ, ಅವನಿಗೆ ಅರಿವಾಗಲಿಲ್ಲ. ಇನ್ನು ದುಷ್ಯಂತ ಗಿಷ್ಯಂತರಂತೂ ಅವನ ಕಣ್ಣಿಗೇ ಕಾಣಲಿಲ್ಲ, ಗಮನಕ್ಕೆ ಬರುವುದು ಹಾಗಿರಲಿ. ತನ್ನ ಅರಮನೆಯನ್ನು ಕಟ್ಟಿ ತನ್ನ ಅರಸಿಯನ್ನು ಅದರಲ್ಲಿ ಪ್ರತಿಷ್ಠಿಸುವುದರಲ್ಲೇ ಮಗ್ನನಾಗಿದ್ದ. ದೃಶ್ಯ ಮುಗಿದೊಡನೆ ಜನರು ಚಪ್ಪಾಳೆ ತಟ್ಟಿದರು. ಪರದೆ ಬಿದ್ದ ಮೇಲೆ ತಮ್ಮ ತಮ್ಮಲ್ಲಿ ಆವೇಶ ದಿಂದ ಪಿಸಿಪಿಸಿಗುಟ್ಟಿದರು.

ನಾಗರಾಜನಾದರೋ ತಟ್ಟನೆದ್ದು ತೆರೆಯ ಪಕ್ಕಕ್ಕೆ ಹೋಗಿ ಒಳ ಹೊಕ್ಕ. ಆ ಬಣ್ಣ, ಬೇಗಡೆ, ಗಡ್ಡ, ಮೀಸೆ, ಚಮಕಿ, ರಸಗುಂಡು, ಟೋಫನ್, ಕಿರೀಟ, ಬಿಲ್ಲು, ಬಾಣ, ಬತ್ತಳಿಕೆ ಇನ್ನೂ ನೂರಾರು ನಾಟಕ ವಸ್ತುಗಳ ಕಿತ್ತಾಟದ ಸಂತೆ ಮಾಳದಲ್ಲಿ, ನಟ ಭಟರ ಸುಳಿದಾಟ ತಿಕ್ಕಾಟಗಳ

ಮಧ್ಯೆ, ಅನಸೂಯ ಪ್ರಿಯಂವದೆಯರ ಪಾತ್ರ ವಹಿಸಿದ್ದ ನಟರೊಡನೆ ಮಾತನಾಡುತ್ತ ರಂಗನಾಯಕಿ ನಿಂತಿದ್ದಳು. ಆಗಲೇ ಊರಿನ ಶ್ರೀಮಂತ ಯುವಕರು ಕೆಲವರು ಅಲ್ಲಲ್ಲೆ ಗುಂಪಾಗಿ ನಿಂತು ಗಟ್ಟಿಯಾದ ಮಾತು, ಕೃತಕವಾದ ನಗೆಗಳಿಂದ ತಮ್ಮ ಕಡೆಗೆ ಅವಳ ಗಮನವನ್ನು ಸೆಳೆಯಲು ಯತ್ನಿಸುತ್ತಿದ್ದರು. ವಿಧವಿಧವಾಗಿ ನಟಿಸುತ್ತ ದೃಷ್ಟಿಯನ್ನು ಅವಳತ್ತ ಹೊರಳಿಸುತ್ತಿದ್ದರು. ಅವರ ಪೈಕಿ ಒಬ್ಬನು "ಲೋ, ನಾಗರಾಜ ನೀನೂ ಬಂದೆಯ ? ಬಾರೋ," ಎಂದು ಕರೆದ. ಎಲ್ಲರೂ ಅಕಾರಣವಾಗಿ ಗಹಗಹಿಸಿ ನಕ್ಕರು. ಇವನು ಅವರೊಂದಿಗೆ ಸೇರಲು ಹೇಸಿ "ಮುಂದಿನ ದೃಶ್ಯ ಸಮೀಪಿಸಿತು," ಎಂದು ಹೇಳಿ ಹೊರಗೆ ಬಂದುಬಿಟ್ಟ. ಆದರೆ "ಲೋ, ಬಿಡೋ. ಅದು ಎಂಥ ದೃಶ್ಯವೋ–ಇಲ್ಲಿ ಇರೋದಕ್ಕಿಂತ," ಎಂಬ ಮಾತುಗಳೂ ಮತ್ತೊಮ್ಮೆ ನಗುವೂ ಕೇಳಿಸದೆ ಇರಲಿಲ್ಲ. ಇವನ ಹುಬ್ಬು ಗಂಟಿಕ್ಕಿತು, ಮುಖ ಕೆಂಪಾಯಿತು. ಕುರ್ಚಿಯಲ್ಲಿ ಕುಳಿತಾಗ ತನ್ನಲ್ಲೇ ಸಿಡಿಮಿಡಿಗುಟ್ಟುತ್ತಿದ್ದ. ಅಲ್ಲಿಯೂ ಅಕ್ಕಪಕ್ಕದವರ ಮಾತನ್ನು ಕೇಳಲಾರದೆ ನಾಟಕ ಮಂದಿರದಿಂದ ಹೊರಗೆ ತಂಗಾಳಿಗೆ ಬಂದುಬಿಟ್ಟ. ಮನಸ್ಸು ಕೊಂಚ ಶಾಂತವಾಯಿತು.

ಬೆಸ್ತ ಮತ್ತು ಅವನ ಹೆಂಡತಿಯ ದೃಶ್ಯ. ಪ್ರಖ್ಯಾತಿ ಪಡೆದಿದ್ದ ಮೂರ್ತಿಯ ನಕಲಿ. ಇದರ ವಿನೋದವನ್ನು ಯಾರೂ ಕಳೆದುಕೊಳ್ಳುತ್ತಿರಲಿಲ್ಲ. ಇದೇ ಸಮಯವನ್ನು ಕಾದಿದ್ದ ನಾಗರಾಜ ಮತ್ತೊಮ್ಮೆ ಒಳಹೊಕ್ಕ. ನಾಟಕದವರೂ ಕೂಡ ತೆರೆಯ ಮರೆಯಲ್ಲಿ ತುಂಬಿಕೊಂಡು ದೃಶ್ಯವನ್ನು ನೋಡುತ್ತಿದ್ದರು. ಓ, ಇವನ ಅದೃಷ್ಟ ! ಅಗೋ ಅಲ್ಲೇ ನಕಲಿಯನ್ನು ನೋಡುತ್ತ ಕುಳಿತಿದ್ದಳು ರಂಗನಾಯಕಿ–ಒಬ್ಬಳೇ ! ಸಮಯ ಬಂದಿತು ! ಎದೆ ಡವಡವನೆ ಬಡಿದುಕೊಳ್ಳಲಾರಂಭಿಸಿತು. ಮುಖಕ್ಕೆ ರಕ್ತ ನುಗ್ಗಿತು. ಹಣೆ ಬೆವರಿಟ್ಟಿತು. ಪ್ರಯಾಸದಿಂದ ಹೆಜ್ಜೆಯಿಟ್ಟ. ಇದಿರಿಗೆ ಬಂದ ಹೋಟಲು ಮಾಣಿಯಿಂದ ಒಂದು ಬಟ್ಟಲು ಕಾಫಿಯನ್ನು ಕೈಗೆ ತೆಗೆದುಕೊಂಡ. ಕೈ ಅಷ್ಟು ಸ್ಥಿಮಿತಕ್ಕೆ ಬಂದಹಾಗಾಯಿತು. ಒಣಗಿದ ಗಂಟಲನ್ನು ಕಾಫಿಯಿಂದ ಒದ್ದೆಮಾಡಿಕೊಳ್ಳಬೇಕೆಂದು ಬಟ್ಟಲನ್ನೆತ್ತಿದ. ಆದರೆ ಮನ

ಸ್ಸನ್ನು ಬದಲಾಯಿಸಿ ಹಾಗೆಯೇ ಇಳಿಸಿಬಿಟ್ಟ. ಉಗುಳು ನುಂಗಿಕೊಂಡು
ಅವಳ ಬಳಿಗೆ ಹೋದ.

ರಂಗನಾಯಕಿ ಬೆಸ್ತರ ಸಂಭಾಷಣೆಯನ್ನು ಆಲಿಸಿ ಕೇಳುತ್ತ ನಸು
ನಗುತ್ತಿದ್ದಳು. ನಾಗರಾಜ ಹತ್ತಿರಕ್ಕೆ ಬಂದುದು ಅವಳ ಗಮನಕ್ಕೆ ಬರಲೇ
ಇಲ್ಲ. ಅವನಿಗೆ ಕ್ಷಣಕಾಲ ಏನು ಹೇಳಬೇಕು ಏನು ಮಾಡಬೇಕು ಎಂದು
ತೋಚಲಿಲ್ಲ. ಅನಂತರ ಕೊಂಚ ಕೆಮ್ಮಿ ಎಡವಟ್ಟಾಗಿ "ಸ್ವಲ್ಪ ಕಾಫಿ,"
ಎಂದು ದಿಗಿಲಿನಿಂದ ಅವಳ ಕಡೆಗೆ ನೋಡುತ್ತಿದ್ದ. ಅವಳು ಸ್ವಾಭಾವಿಕ
ವಾಗಿ ಇನ್ನೂ ನಸುನಗುತ್ತಲೇ ಕಪ್ಪುರೆಪ್ಪೆಗಳನ್ನು ಸ್ವಲ್ಪ ಮೇಲೆತ್ತಿ ನಗೆ
ಗಣ್ಣುಗಳ ಥಳಥಳವನ್ನು ಇವನ ಕಡೆಗೆ ತಿರುಗಿಸಿದಳು. ಕೊಂಚ ಬೆರಗಾದಳು.
ಹಾಗೇ ದೃಷ್ಟಿಯನ್ನಿಳಿಸಿದಳು ಬರೆದಂತಿದ್ದ ಬಿಲ್ಲು ಹುಬ್ಬುಗಳು ಕೊಂಚವೇ
ಕೊಂಚ ಹತ್ತಿರ ಬಂದು ಮತ್ತೆ ಸರಿದುಕೊಂಡುವು ಮುಖವು ಬಿಗಿಯಾಗಿ
ದ್ದರೂ ಗಂಭೀರವಾಯಿತು. ಅವಳಿಗೆ 'ಈತ ಈಗ ಯಾಕೆ ಇಲ್ಲಿದ್ದಾನೆ,
ಕಾಫಿಯನ್ನೇಕೆ ತಂದಿದ್ದಾನೆ' ಎನ್ನಿಸಿರಬೇಕು. ಆದರೆ ಹೀಗೆ ಉಪಚಾರ
ಮಾಡಿಸಿಕೊಳ್ಳುವ ರೂಢಿ ಬಹಳವಿದ್ದು ತನ್ನ ಕೋಮಲವಾದ ಕೈಗಳನ್ನೆತ್ತಿ
ಕಾಫಿಯ ಬಟ್ಟಲನ್ನು ತೆಗೆದುಕೊಳ್ಳುತ್ತ "ನಿಮಗೆ—ಆಯಿತೆ ?" ಎಂದು
ಔಪಚಾರಿಕವಾಗಿ ಕೇಳಿದಳು. ಅವನಿಗೆ ಅವಳ ಮುಂದೆ ನಿಲ್ಲುವುದು, ಮಾತ
ನಾಡುವುದು, ಕಾಫಿ ಯಾಕೆ, ಅಮೃತಕ್ಕಿಂತಲೂ ಇಷ್ಟ. ಕಾಫಿ ಆಯಿತೆಂದು
ಸುಳ್ಳು ಹೇಳಬೇಕೆಂದು ಮನಸ್ಸು. ಆದರೆ ಆ ಕ್ಷಣದಲ್ಲಿ, ತನ್ನ ಮಾತನ್ನು
ಹೇಗೆ ಮೊದಲುಮಾಡಬೇಕೆಂಬುದು ಗೊತ್ತಾಗದೆ ಗೊಂದಲವಾಯಿತು.
ಕಲಿತಿದ್ದ ಪಾಠ ಕರ್ಣನ ವಿದ್ಯದಂತೆ ಕೈಕೊಟ್ಟಿತು. ತನ್ನ ಗಡಿಬಿಡಿಯನ್ನು
ಮುಚ್ಚಿಕೊಳ್ಳುವುದಕ್ಕಾಗಿ "ಇಲ್ಲ, ತಂದರಾಯ್ತು," ಎಂದು ನಸುನಕ್ಕು
ಬಟ್ಟಲನ್ನು ಅವಳ ಕೈಗಿಟ್ಟು ಮಾಣಿಯ ಬಳಿಗೆ ಹೋದ. ಕೊಂಚ ಉಸಿರು
ಬಂದಿತು. ಮತ್ತೆ ಆತುರದಿಂದ ಇನ್ನೊಂದು ಬಟ್ಟಲು ಕಾಫಿಯನ್ನು ತೆಗೆದು
ಕೊಂಡು ಹಿಂದಿರುಗಿದಾಗ ಅವಳು ಕಾಫಿ ಕುಡಿಯುತ್ತ ಏನನ್ನೋ ಯೋಚಿಸು
ತ್ತಿದ್ದಂತೆ ಅವನಿಗೆ ತೋರಿತು. ಅವಳ ಮುಂದೆ ನಿಂತೊಡನೆ ಅವಳಲ್ಲಿ ತನ್ನ
ಎದೆಯನ್ನು ತೋಡಿಕೊಂಡುಬಿಡಬೇಕೆಂದು ಆಸೆ. ಆದರೆ ಬೇಕಾದ ಮಾತು
ಗಳು ಗಂಟಲಿನಲ್ಲೇ ಸಿಕ್ಕಿಕೊಂಡಿದ್ದುವು. ಈ ಬಿಗಿತದ ಪರಿಹಾರಕ್ಕಾಗಿಯೋ

ಎನ್ನುವಂತೆ "ಸ್ವಲ್ಪ ಸಕ್ಕರೆ?" ಎಂದು ಸಾಮಾನ್ಯ ಮಾತಿನಿಂದ ಶೃತಿಯನ್ನು ಸರಿಪಡಿಸಿಕೊಳ್ಳಲು ಹವಣಿಸಿದ. ಅವಳು ಬಿಳಿಯ ಚೈನಾದಿಂದ ತನ್ನ ಗುಲಾಬಿ ತುಟಿಗಳನ್ನು ತೆಗೆದು ಕತ್ತೆತ್ತಿ ಇವನತ್ತ ನೋಡಿ "ಸಾಕು," ಎಂದಳು. ಕೆರೆಯ ನೀರಿನ ಮೇಲಿನ ಸುಳಿಯಲೆಯಂತೆ ಅವಳ ಕಳೆಮೊಗದ ಮೇಲೆ ಎಳೆನಗೆಯು ಸುಳಿದು ಹೋದಂತೆ ನಾಗರಾಜನಿಗೆ ಕಂಡಿತು. ಅರೆಕ್ಷಣ ಇಬ್ಬರ ಮಧ್ಯೆ ಮೌನ.

"ಇವತ್ತಂತೂ ಆಸ್ಥಾನದ ದೃಶ್ಯದಲ್ಲಿ ಅಭಿನಯ ಅಮೋಘವಾಗಿತ್ತು," ಇದು ನಾಗರಾಜನ ಬರಿಯ ಊಹೆ. ಆ ದೃಶ್ಯವನ್ನು ಅವನು ನೋಡಿಯೇ ಇರಲಿಲ್ಲ. ಆದರೆ ಮಾತಾಡಬೇಕಾಗಿತ್ತು. ಮೊದಲಾಗಬೇಕಾಗಿತ್ತು— ವಿಷಯ.

ಇದಕ್ಕೆ ತಟ್ಟನೆ ಉತ್ತರ ಬರಲಿಲ್ಲ. ನಾಗರಾಜನಿಗೆ ತನ್ನ ಮುಖದ ಮೇಲೆ ತಣ್ಣೀರು ಎರೆಚಿದಂತೆ ಆಯ್ತು. ಮುಂದೇನು ಹೇಳಬೇಕೋ ಮಾತ ಬೇಕೋ ಎಂದು ಕಕ್ಕಾಬಿಕ್ಕಿಯಾದ. ಆದರೆ ಅವಳು ಅಲಕ್ಷ್ಯದಿಂದ ಸುಮ್ಮನಿರುವಷ್ಟು ಅಸಂಸ್ಕೃತಳಲ್ಲ. ಮರುಕ್ಷಣದಲ್ಲಿ ಹರ್ಷವನ್ನು ತೋರ್ಪಡಿ ಸುತ್ತ "ಹಾಗೇ ? ನಿಮಗೆ ಅಷ್ಟೊಂದು ಒಪ್ಪಿಗೆ ಆಯ್ತೆ ?" ಎಂದು ಸರಳ ವಾಗಿ ಕೇಳಿದಾಗ ಅವನಿಗೆ ಜೀವ ಬಂದಿತು. ನಾಲಿಗೆ ಸಡಿಲವಾಯಿತು. "ಒಪ್ಪಿಗೆ ? ಚೆನ್ನಾಯ್ತು ! ಯಾರು ತಾನೆ ಮೆಚ್ಚದೆ ಇರಬಹುದು ?" ನಾಗ ರಾಜ ಉತ್ಸಾಹದಿಂದ ಹೇಳಿದ, ಮತ್ತು ಹಾಗೇ "ಪಾತ್ರವೊಂದಿಗೆ ಅಷ್ಟೊಂದು ಹೊಂದಿಕೊಳ್ಳೋದು, ತನ್ನನ್ನೇ ಮರೆಯೋದು ಹೇಗೆ ಸಾಧ್ಯ ಅನ್ನಿಸುತ್ತೆ," ಎಂದು ಮಾತನ್ನು ಮುಂದುವರಿಸಿದ.

"ಅದು ನನ್ನ ಉದ್ಯೋಗ, ಶಿಕ್ಷಣ." ಅವಳು ನಸುನಕ್ಕಳು.

"ನಿಜ, ಆದರೆ ಎಷ್ಟು ಜನ ಅದನ್ನು ತಿಳಿದುಕೊಂಡಿರುತ್ತಾರೆ ? ಹಾಗೆ ಅಭ್ಯಾಸ ಮಾಡುತ್ತಾರೆ ?"

"ಅದಕ್ಕಾಗೇ ದುಡ್ಡು ಕೊಟ್ಟು ಬರೋ ಜನದ ತೃಪ್ತಿಗೆ ಯತ್ನಿಸಲೇ ಬೇಕು. ಅದು ಧರ್ಮ. ಇಲ್ಲದಿದ್ದರೆ ದ್ರೋಹ, ವಂಚನೆ."

ಅವಳ ಪ್ರಾಮಾಣಿಕತೆಯ ಬಗೆಯನ್ನು ಕಂಡು ಅವನಿಗೆ ಆಶ್ಚರ್ಯ

ವಾಯಿತು. "ಯಾವ ಉದ್ಯೋಗವಾದರೂ, ಇಷ್ಟವಿರಲಿ, ಇಲ್ಲದಿರಲಿ ?" ಅವನು ಅನುಮಾನಿಸಿ ಕೇಳಿದ.

"ಇಷ್ಟೆ." ಖಂಡಿತವಾಗಿ ಬಂದಿತು ಒಡನೆಯೇ ಉತ್ತರ.

ನಾಗರಾಜನ ಮನಸ್ಸಿನೊಳಗೆ ಏನೇನೋ ಹೊಳೆದು ಹಾಯ್ದು ಗಾಬರಿಯಾಯಿತು.

"ಈ ನಾಟಕ ಜೀವನ ಇಷ್ಟವೆ? ಈ ಗಲಭೆ, ಈ ಸಹವಾಸ, ಈ ಅವ್ಯವಸ್ಥೆ...." ಕ್ಷಣ ಕಾಲದ ಮೇಲೆ ಮತ್ತೆ ಕೇಳಿದ.

"ಆ?....ಆ ಯೋಚನೆ ನನಗೆ ಹೊಳೆವೇ ಇಲ್ಲ. ಮೊದಲಿನಿಂದಲೂ ಇದರಲ್ಲೇ ಬೆಳೆದಿದ್ದೀನಿ. ಬೇರೆ ಜೀವನವನ್ನೇ ಕಾಣೆ." ಅವಳು ನಿಧಾನವಾಗಿ ಹೇಳಿದಳು.

"ಬೇರೆ ಇದ್ದರೆ ?"

"ಆಗತಾನೆ ಯೋಚನೆ, ಹೋಲಿಕೆ. ಈಗೇಕೆ, ಇಲ್ಲದಿರುವಾಗ ?" ವಿನೋದವಾಗಿ ಹೇಳಿದಳು.

"ತಪ್ಪು ತಿಳಿಯಬಾರದು; ಒಂದು ಮಾತು....ಒಂದು ಮಾತು ಕೇಳ್ಬಿಡ್ತೀನಿ. ಬೇರೆ ಜೀವನ ಒದಗಿಸಿದರೆ-ನಾನು ?" ಅಂತರಂಗವನ್ನು ಬಿಚ್ಚುವ ಆತುರದಲ್ಲಿ ದಡಬಡನೆ ಕ್ರಮವಿರದೆ ಒದರಿಬಿಟ್ಟ.

"ಆ!" ಅವಳಿಗೆ ಈ ಅನಿರೀಕ್ಷಿತ ಆಸಕ್ತಿಯಿಂದ ಅತ್ಯಾಶ್ಚರ್ಯವಾಯಿತು, ತಬ್ಬಿಬ್ಬಾಯಿತು. ಕಣ್ಣೆತ್ತಿ ಅವನ ಕಡೆ ಕ್ಷಣಕಾಲ ದಿಟ್ಟಿಸಿ ನೋಡಿದಳು.

"ಹುಂ, ಗೃಹಿಣಿಯ ಜೀವನ." ಒಮ್ಮೆ ಬಾಯಿಬಿಟ್ಟಮೇಲೆ ಅವನ ಮಾತು ಪೂರ್ತಿಯಾಯಿತು.

"ಗೃಹಿಣಿ ! ಅಂದರೆ ನಂಗೆ ಗೊತ್ತಾಗೋದಿಲ್ಲ." ಈ ವಿಚಿತ್ರ ಪ್ರಸ್ತಾಪಕ್ಕೆ, ಹುಚ್ಚು ಮಾತಿಗೆ ಅವಳಿಗೆ ಏನು ಹೇಳಬೇಕೆಂದೇ ತಿಳಿಯಲಿಲ್ಲ. ಮನಸ್ಸಿಗೆ ಮೊದಲು ಮೇಲೆ ಬಂದ ಭಾವವು ಹಾಗೆ ಆಡಿಸಿಬಿಟ್ಟಿತು. ಈಗಾಗಲೇ ಅವರಿವರ ಮೂಲಕ ರಂಗನಾಯಕಿಯನ್ನು ಮುಟ್ಟಿದ ಹಲವು ಸೂಚನೆಗಳು ಈ ಅನುಮಾನಕ್ಕೆ ಆಸ್ಪದಕೊಟ್ಟಿದ್ದುವು. ಇದನ್ನು ತಿಳಿದೇ ನಾಗರಾಜ ಆತುರದಿಂದ,

"ಅಂದರೆ ಕೈ ಹಿಡಿದ ಹೆಂಡತಿಯ ಜೀವನ. ಕಡಿಮೆಯಲ್ಲ," ಎಂದು ಸ್ಪಷ್ಟಪಡಿಸಿದ.

"ಹೆಂಡತಿ !–ಈ ಜನ್ಮದಲ್ಲಿ ?" ಸಂದರ್ಭದ ಅಸಾಧ್ಯತೆ ಅಲಕ್ಷ್ಯವನ್ನು ತೋರಿಸಿತು.

"ಹುಂ, ಮರ್ಯಾದೆಯ ಮನೆ, ಸಂಸಾರ, ಅಧಿಕಾರ-ಎಲ್ಲ" ಪ್ರಮಾಣ ಮಾಡುವ ರೀತಿಯಲ್ಲಿ ಭರವಸೆ ಕೊಟ್ಟ.

"ಹುಚ್ಚು !" ಅವಳ ನುಡಿಯಲ್ಲಿ ನೋವಿತ್ತು, ಅವನ ಆತುರಕ್ಕಾಗಿ ಕನಿಕರವಿತ್ತು.

"ಇಲ್ಲ. ವಿಧಿವತ್ತಾಗಿ ಮದುವೆಯಾಗುತ್ತೀನಿ. ನನ್ನ ಸರ್ವಸ್ವವನ್ನೂ ನನ್ನನ್ನೂ ನಿನಗೆ ಅರ್ಪಿಸುತ್ತೀನಿ. ನಾನು ಬೇಡಿಕೊಳ್ಳೋದು ಒಂದನ್ನೇ– ನಿನ್ನ ಪ್ರೇಮ...."

"ಛೆ! ಛೆ!" ಅವನ ಆವೇಶದ ರಭಸ ಅವಳ ಶಾಂತತೆಯನ್ನು ಕದಲಿಸಿತು. ಅವಳ ಮನಸ್ಸಿನಲ್ಲಿ ಗೊಂದಲವಾಯಿತು. ಗಾಬರಿಯಾಯಿತು. ಈ ಪ್ರವಾಹವನ್ನು ಹೇಗೆ ತಡೆಯುವುದೋ, ತಡೆಯಬೇಕೋ ತಿಳಿಯಲಿಲ್ಲ. ಮುಖವು ಅರುಣೋದಯದಂತೆ ಕೆಂಪಾಯಿತು. ತಲೆ ತಗ್ಗಿತು. ಅಲ್ಲಿಂದ ಎದ್ದು ಹೋಗಬೇಕೆಂದು ಎಚ್ಚರಿಸಿತು, ಬುದ್ಧಿ. ಬೇಡ ಎಂದು ತಡೆಯಿತು ಎದೆ. ಸಿಟ್ಟಾಗು ಎಂದಿತು ಬುದ್ಧಿ. ಹುಟ್ಟಿದು ಎಂದಿತು ಎದೆ. ಬಣ್ಣಿಸಲಾಗದ ಹಿಂಸೆ. ಆದರೆ ಅಹಿತವಾದುದಲ್ಲ

"ಇದು ವಿಚಿತ್ರ ನಡೆನಳಿಕೆಯಾಗಿರಬಹುದು. ನಂಗೆ ಬೇರೆ ಗೊತ್ತಿಲ್ಲ– ನಯ ನಾಜೂಕು. ಆದರೆ ಇದು ಸತ್ಯ. ಒರಟಾಗೇ ದುಡುಕಾಗೇ ಹೇಳಿಬಿಟ್ಟಿದ್ದೀನಿ. ರೀತಿ ಮುಖ್ಯವಲ್ಲ, ಮಾತು, ಯೋಚನೆ, ಪ್ರಸ್ತಾಪ. ತಪ್ಪಿದ್ದರೆ ಕ್ಷಮಿಸಿಬಿಡು. ಈ....ಇಲ್ಲಿಂದ__ಈ ಹೊಲಸಿನಿಂದ ನಿನ್ನ ದೂರ ದೂರ...." ಆವೇಶ ಭರದಲ್ಲಿ ಅವನ ಮೆಲುಧ್ವನಿ ಮೇಲುಧ್ವನಿಯಾಗುತ್ತಿತ್ತು.

"ಶ್ ! ಶ್ !" ಅವಳು ಕತ್ತೆತ್ತಿ ತನ್ನ ಬಾಯಿನ ಬಳಿಗೆ ಬೆರಳು ತಂದು ಎಚ್ಚರಿಸಿದಳು.

ದೃಶ್ಯ ಮುಗಿಯಿತು. ಗಲಭೆ ಹಿಂತಿರುಗಿತು.

"ನಾಳೆ ಬರುತ್ತೀನಿ."

ನಾಗರಾಜ ತಟ್ಟನೆ ಎದ್ದ. ಹಿಂದಿರುಗಿ ನೋಡದೆಯೇ ಅವಸರಪಸರವಾಗಿ ಹೊರಟು ಹೋದ. ರಂಗನಾಯಕಿ ಪ್ರತಿಮೆಯಂತೆ ಕುಳಿತು ಅವನು ಮರೆಯಾಗುವವರೆಗೂ ಅವನ ಕಡೆಯೇ ನೋಡುತ್ತಿದ್ದಳು.

"ಇದೇನು ಕನಸು? ಕಡೆಯ ದೃಶ್ಯ," ಯಾರೋ ನಗುತ್ತ ಹೇಳಿದರು. ರಂಗನಾಯಕಿ ಚಿಗಿದೆದ್ದಳು.

-೨-

ನಾಗರಾಜ ಬ್ರಹ್ಮಗಂಟನ್ನೇನೋ ಹೇಗೋ ಕತ್ತರಿಸಿಬಿಟ್ಟಿದ್ದ. ಅದು ಒಂದು ಆತಂಕವನ್ನು ದೂರ ಮಾಡಿದ್ದರೆ ಹೊಸದು ಇನ್ನೊಂದನ್ನು ತಂದಿತ್ತು-ಉಸುಬಿನಲ್ಲಿ ಒಂದು ಕಾಲನ್ನು ಕಿತ್ತರೆ ಇನ್ನೊಂದು ಹೂತುಕೊಂಡ ಹಾಗೆ. ಕಲಿತ ಗಿಳಿಯ ಪಾಠ ತಲೆಕೆಳಗಾಗಿ, ಸೊಟ್ಟಾಗಿ ಚೂರಾಗಿ ತೇಪೆಯಾಗಿ ಏನೇನೋ ಆಗಿಹೋಗಿ ತನ್ನ ಆಕಾರವನ್ನೇ ಕಳೆದುಕೊಂಡಿತ್ತು. ಆದರೂ ಮುಖ್ಯವಾದುದನ್ನು ಮರೆಯಲಿಲ್ಲವೆಂಬ ಭರವಸೆ. ಹಾಗೂ ಪರಿಣಾಮದ ಬಗ್ಗೆ ಅನುಮಾನ. ತನ್ನ ಪ್ರಸ್ತಾಪ ಸಾಧು. ತಿರಸ್ಕಾರಯೋಗ್ಯವಲ್ಲ. ತನ್ನ ವಿಷಯವೂ ಕೇಡಲ್ಲ. ಒಪ್ಪಬಹುದೆಂಬ ಆಸೆ. ಇದಕ್ಕೆ ಪ್ರತಿಯಾಗಿ ಅವಳ ನಿರೀಕ್ಷಣೆ ಎಷ್ಟು ಹೆಚ್ಚೋ. ಈಗಾಗಲೇ ಯಾವ ಯಾವ ಕಡೆಗಳಿಂದ ಎಂತೆಂತಹ ಆಕರ್ಷಣೀಯ ಸೂಚನೆಗಳು ಬಂದಿದ್ದು-ಅವಳಿಗೆ ಬರುವುದೇನು ಹೆಚ್ಚು-ತನ್ನನ್ನು ಎಲ್ಲಿ ಅಲಕ್ಷ್ಯದಿಂದಲೋ, ಅನುಮಾನದಿಂದಲೋ, ಒಪ್ಪದೆಯೋ ಒತ್ತರಿಸಿಬಿಡುವಳೋ ಎಂಬ ಭಯ. ಅವನ ಮನಸ್ಸು ಈ ಆಸೆ ಭಯಗಳ ಮಧ್ಯೆ ಉಯ್ಯಾಲೆಯಾಡುತ್ತಿತ್ತು. ನಿರೀಕ್ಷಿಸಿದ ಪ್ರಶ್ನೆಗಳೆಲ್ಲ ಬರದ ಪರೀಕ್ಷೆಯಲ್ಲಿ ಅನುಮಾನವಾಗಿ ಬರೆದು ಬಂದ ವಿದ್ಯಾರ್ಥಿಯಂತೆ ಆಗಿದ್ದ; ಆತಂಕ ಮಾತ್ರ ನೂರು ಪಾಲು ಸಾವಿರ ಪಾಲು ಹೆಚ್ಚು. ದಾರಿಯಲ್ಲೆಲ್ಲ ವಿಷಯವನ್ನು ಅಳೆದಳೆದು ಸುರಿಯುತ್ತ ಸರದಿಯಲ್ಲಿ ಭುಜ ತಟ್ಟಿಕೊಳ್ಳುತ್ತ, ಕೈ ಕೊಡಹುತ್ತ ಮನೆ ಸೇರಿದ. ಮಲಗಿದ ಮೇಲೂ ಬಿರಿಗಣ್ಣು ಬಿಟ್ಟುಕೊಂಡು ಅಂತರಿಕ್ಷದಲ್ಲಿ ಅರಮನೆಗಳನ್ನು ಕಟ್ಟುತ್ತಿದ್ದ. ಆಗಾಗ ಅವು ಕೆಳಗೆ

ಬಿದ್ದು ಪುಡಿಪುಡಿಯಾಗುತ್ತಿದ್ದುವು. ಉರಿಗಣ್ಣು ಮುಚ್ಚಿಕೊಂಡು ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದ. ಮಧ್ಯೆ ಮಧ್ಯೆ ಹಲ್ಲು ಮುರಿಯುವಂತಹ ಕಲ್ಲುಗಳು ಸಿಕ್ಕುತ್ತಿದ್ದುವು. ಆಯಾಸ ಪರಿಹಾರಗಳಿಂದ ನಿಟ್ಟುಸಿರನ್ನು ಬಿಡುತ್ತಿದ್ದ. ಮತ್ತೆ ಮತ್ತೆ ಚಿಂತೆಯ ಹೊದಿಕೆಯನ್ನು ಎಳೆದುಕೊಳ್ಳುತ್ತಿದ್ದ, ತೆಗೆದೆಸೆಯುತ್ತಿದ್ದ. ಲಗಾಮು ಹರಿದು ಓಡುವ ಕುದುರೆಯನ್ನು ಬೆನ್ನಟ್ಟಿ ದಂತೆ ದಿಕ್ಕುದಿಕ್ಕಿಗೆ ಹರಿದಾಡುವ ಯೋಚನೆಗಳನ್ನು ಹಿಡಿದಿಡಲು ಪ್ರಯೋಜನವಿಲ್ಲದ ಪ್ರಯತ್ನಗಳನ್ನು ಮಾಡುತ್ತಿದ್ದ. ಗಂಡು ಹೆಣ್ಣಿಗೆ ಸಂಬಂಧಿಸಿದ ಯಾವುದೊಂದು ವಿಷಯವೂ ಅವನನ್ನು ಮುದ್ದಿಸದೆ, ಹಿಂಸಿಸದೆ ಬಿಡಲಿಲ್ಲ. ಈ ಗೊಂದಲದ ಮಧ್ಯೆ ಮಧ್ಯೆ ಅವಳನ್ನು ಮತ್ತೆ ಕಾಣಬೇಕು. ಏನೇ ಆದರೂ ಉತ್ತರವನ್ನು ಹೊಂದಬೇಕೆಂಬ ಆತುರ. ಈ ಅಪೇಕ್ಷೆ ಕೂಡಲೇ ಸಾಧಿಸದ ಮುಜುಗರ, ಕಿರುಕುಳ. ಈ ಸ್ಥಿತಿಯಲ್ಲಿ ನ್ಯಾಯವಾಗಿಯೇ ರಾತ್ರಿ ಯುಗವಾಗಿ ಕಳೆಯಿತು. ಬೆಳಗಾದ ಮೇಲೂ ದಿನದ ಗಂಟೆಗಳು ಕುಂಟುತ್ತ ತೆವಳುತ್ತ ನಡೆದುವು.

ಇತ್ತ ರಂಗನಾಯಕಿಯಲ್ಲಿ ವಿಚಿತ್ರ ಬದಲಾವಣೆಯಾಗಿತ್ತು. ಇದು ಅವಳಿಗೆ ತಿಳಿದಿದ್ದರೂ ಬದಲಾವಣೆ ಏನೆಂಬುದು ಸ್ಪಷ್ಟವಾಗಿ ತಿಳಿಯದು. ಹುಡುಗಿಯಾಗಿದ್ದವಳು ಒಮ್ಮೆಯೇ ಯುವತಿಯಾದ ಹಾಗೆ. ಚಿಂತೆಯನ್ನೇ ಕಾಣದಿದ್ದ ಮನಸ್ಸಿನಲ್ಲಿ ಒಂದು ಬಗೆಯ ಬಿಗಿತ. ಹಗುರವಾಗಿ ಎಲ್ಲೆಲ್ಲೋ ಮೇಲೆ ಆಕಾಶದಲ್ಲಿ ಹಾರಾಡುತ್ತಿದ್ದ ಧೂಳಿ ಕಣ ನೀರುಗೂಡಿ ಹನಿಯಾಗಿ ಭಾರವಾದ ಹಾಗೆ; ಭೂಮಿಗಿಳಿಯುತ್ತಿದ್ದ ಹಾಗೆ, ಭಾವನೆ. ಹುಂ; ಇದೊಂದು ವಿನೋದವೆಂದು ಎಷ್ಟೋ ಬಾರಿ ತನ್ನಿಂದ ಯೋಚನೆಯನ್ನು ಎಸೆಯುತ್ತಿದ್ದಳು, ಆದರೆ 'ಬೂಮರ್‌ರಾಂಗ್' ಹಾಗೆ ಎಸೆದಷ್ಟು ಜೋರಾಗಿ ಬಂದು ಬಂದು ಮತ್ತೆ ಮತ್ತೆ ಬಡಿಯುತ್ತಿತ್ತು. ಅವಳ ಮುಂಗುರುಳಿನಂತೆಯೇ ತುಂಟಾಟಮಾಡುತ್ತಿತ್ತು. ಈ ಗಲಿಬಿಲಿಯಲ್ಲಿ ನಾಟಕದ ಕಡೆಯ ದೃಶ್ಯವನ್ನು ಹೇಗೆ ಮುಗಿಸಿದಳೋ ಅವಳಿಗೇ ತಿಳಿಯದು. ಅದನ್ನು ರೂಢಿ ನೋಡಿಕೊಂಡಿರಬೇಕು. ದೃಶ್ಯ ಮುಗಿದಾಗ ಶಾಮಣ್ಣ "ಇದೇನು ರಂಗು, ನಿನ್ನ ಅಭಿನಯ ಎಲ್ಲಿ ಹೋಯ್ತು ? ಭಾವನೆಯ ಪ್ರದರ್ಶನವಿಲ್ಲ ಏನೂ ಇಲ್ಲ. ಯಂತ್ರದ ಹಾಗೆ ಏನೋ ಮಾಡಿ ಮುಗಿಸಿ ಬಂದೆ. ಮಾತೋ ಸ್ಕೂಲು

ಹುಡುಗಿ ಪಾಠ ಒಪ್ಪಿಸಿದ ಹಾಗೆ. ಹೀಗಾದರೆ ಆಗೋದಿಲ್ಲ. ಎಳ್ಳುಕಾಳು ಬಿದ್ದ ಶಬ್ದ ಕೇಳಿಸೋ ಹಾಗೆ ನಿಶ್ಯಬ್ದವಾಗಿ ಇರುತ್ತ ಇದ್ದ ಜನ ಗುಜುಗುಜು ಅಂತ ಇದ್ದರು. ಗೊತ್ತಾಗಲಿಲ್ಲವೆ? ಯಾಕೆ ಹುಷಾರಿಲ್ಲವೆ?" ಎಂದು ಕೇಳಿದ. ಎಲ್ಲವನ್ನೂ ಸುಮ್ಮನೆ ಕೇಳಿ ಕಡೆಯ ಸೂಚನೆಯನ್ನು ಹಿಡಿದು ಅವಳು "ಸ್ವಲ್ಪ ತಲೆನೋವು" ಎಂದು ಮಾತ್ರ ಹೇಳಿದಳು. ಅವನು "ಹುಂ, ಹಾಗೇ ಏನೋ ಇರಬೇಕು ಅಂದುಕೊಂಡೆ. ದಿನದಿನದ ನಾಟಕ ಅಂದರೆ ಹೀಗೇ ಏನಾದರೂ ಆಗುತ್ತೆ. ನಾಳೆ ಬೇರೆ ಆಟ–ಕಡೇದು ಇಲ್ಲಿ. ಪ್ರಕಟನೆಯೂ ಆಗಿಹೋಗಿದೆ. ಚೆನ್ನಾಗಿ ವಿಶ್ರಾಂತಿ ತಗೊಂಡು ಹುಷಾರಾಗು," ಎಂದು ಬುದ್ಧಿ ಹೇಳಿದ.

ವಿಶ್ರಾಂತಿ ಈಗಾಗಲೇ ಅವಳ ಪಾಲಿಗೆ ಬಿಸಿಲುಗುದುರೆಯಾಗಿಬಿಟ್ಟಿತ್ತು. ತಳಮಳವೇ ಮುಂದಿನ ಜೀವನದ ಕಟ್ಟಳೆಯೋ ಎನ್ನುವ ಭಾವನೆ ಬರುತ್ತಿತ್ತು. ಸಾವು ಸಮೀಪಿಸಿದ ವ್ಯಕ್ತಿ ಜನ್ಮ ಪುನರ್ಜನ್ಮಗಳ ಮಧ್ಯೆ ನಿಂತು ಅನುಮಾನದ ಹೊಸ ಹುಟ್ಟು ಸೆಳೆಯುತ್ತಿರುವಾಗ ಒಲ್ಲದೆ ಹಳೆಯ ಹುಟ್ಟಿಗೆ ಕಚ್ಚಿಕೊಳ್ಳುವಂತೆ ಅವಳು ಒದ್ದಾಡುತ್ತಿದ್ದಳು–'ಇಲ್ಲ, ಈ ಜೀವನದಲ್ಲೇ ಇರುತ್ತೇನಿ. ಅವನ ಮಾತೆಲ್ಲ ಹುಚ್ಚು. ಪೆಚ್ಚು! ಎಲ್ಲಿ ಸಾಧ್ಯ? ನನಗಂತೂ ಬೇಡ' ಎಂದುಕೊಂಡು ಮನಸ್ಸಿಗೆ ಸ್ಥಿಮಿತ ಸಮಾಧಾನಗಳನ್ನು ತಂದುಕೊಳ್ಳಲು ಪ್ರಯತ್ನಿಸುತ್ತಿದ್ದಳು. ಆದರೆ ಮುಂದಿನ ಸೆಳೆತ ಮಾತ್ರ ಅಳಿಯಲಿಲ್ಲ. ಕಡಿಮೆಯಾಗಲೂ ಇಲ್ಲ. ಹೆಚ್ಚುತ್ತಲೇ ಇದ್ದಿತು. ಮಲಗಿದಾಗ ನಿದ್ದೆ ಚಿಂತೆಗಳಿಗೆ ಹೋರಾಟ ನಡೆದು ಇವಳ ನೆರವಿದ್ದರೂ ನಿದ್ದೆಯೇ ಸೋತಿತು. ಆಗ ನ್ಯಾಯವಾಗಿಯೇ ಹಿಂದಿನದೆಲ್ಲ ದೃಶ್ಯದೃಶ್ಯಗಳಾಗಿ ಅಂಕ ಅಂಕಗಳಾಗಿ ಕಣ್ಣಿನ ಮುಂದೆ ಹಾಯ್ದು ಹೋದುವು. ಮುಂದಿನದು ಮಾತ್ರ ಅಲ್ಲಲ್ಲಿ ಇಣಿಕಿ ಮುಖವನ್ನು ತೋರಿಸಿಯೂ ತೋರಿಸದಿತ್ತು-ಮಿಣಿ ಮಿಣಿಕಿ ಮಾಯವಾಗುವ ದೂರದ ತಾರೆಯಂತೆ.

ತಾನೊಬ್ಬಳು ತಬ್ಬಲಿ. ತಾಯಿಯ ಮುಖವನ್ನೂ ಕಂಡ ನೆನಪಿರಲಿಲ್ಲ. ಅವಳು ಪ್ರಸಿದ್ಧ ನಟಿಯಾಗಿದ್ದಳೆಂದು ಕಂಪನಿಯವರು ಹೇಳುತ್ತಿದ್ದುದನ್ನು ಮಾತ್ರ ಕೇಳಿದ್ದಳು. ತಾನೂ ಅವಳಂತೆಯೇ ಇದ್ದಳಂತೆ. ಬುದ್ಧಿ ತಿಳಿದಾಗಿನಿಂದ ತಾನು ರಂಗಭೂಮಿಯ ಮೇಲೆ ಕಾಣಿಸಿಕೊಳ್ಳುತ್ತಿದ್ದಳು.

ಮೂರು ವರ್ಷದವಳಿದ್ದಾಗಲೇ ಶಾಮಣ್ಣ ಶೃಂಗಾರ ಮಾಡಿಸಿ ಆ ಹಸುರು ಅಂಕದ ಪರದೆಯ ಮುಂದೆ ನಿಲ್ಲಿಸಿ ಕೆಲವು ರಾಗಗಳ ಆಲಾಪನೆ ಮಾಡಿಸಿ ಅವುಗಳ ಹೆಸರು ಹೇಳಿಸುತ್ತಿದ್ದ. ಆಗಿನಿಂದಲೂ ಜನಸಮುದ್ರದ ಚಪ್ಪಾಳೆಯು ಇವಳಿಗೆ ರೂಢಿಯಾಗಿತ್ತು. ಐದು ತುಂಬುವುದಕ್ಕೆ ಮುಂಚೆಯೇ ಧ್ರುವ, ಪ್ರಹ್ಲಾದ, ಚಂದ್ರಹಾಸ, ಬಾಲಕೃಷ್ಣ ಇವರ ಪಾತ್ರವನ್ನು ವಹಿಸುತ್ತಿದ್ದಳು. ಕ್ರಮೇಣ ರೋಹಿತಾಶ್ವ, ರಾಹುಲ, ನಚಿಕೇತ ಇವುಗಳೂ ಸೇರಿಕೊಂಡುವು. ಹತ್ತಾಗುತ್ತಲೆ ಸಖಿಯರ ಪಾತ್ರಗಳು. ಹದಿನಾಲ್ಕರ ಸುಮಾರಿನಿಂದ ಈವರೆಗೆ ಆರು ವರ್ಷಗಳೂ ಶಾಕುಂತಲ, ಸೀತ, ತಾರಾಮತಿ, ರತಿ, ದ್ರೌಪದಿ, ಉತ್ತರೆ, ರಾಧ ಮುಂತಾಗಿ ನಾಯಕಿಯರ ಪಾತ್ರವೆಲ್ಲ ಇವಳ ಪಾಲಾಗಿದ್ದುವು. ಅದೆಷ್ಟು ಸ್ಥಳಗಳನ್ನು ಸುತ್ತಿದ್ದಳೋ, ಎಷ್ಟು ನಾಟಕಗಳನ್ನಾಡಿದ್ದಳೋ, ಎಷ್ಟೊಂದು ಬಹುಮಾನ ಬಿರುದುಗಳನ್ನು ಪಡೆದಿದ್ದಳೋ ಹೇಳುವಂತೆಯೇ ಇರಲಿಲ್ಲ. ಈ ಬಹಿರಂಗ ಪ್ರದರ್ಶನವೇ ಅವಳ ಬಾಳನ್ನೆಲ್ಲ ತುಂಬಿತ್ತು. ಈ ನಿತ್ಯ ವಿಜಯಗಳ ಮೆಚ್ಚಿಗೆಯ ಮತ್ತಿನಲ್ಲೇ ಇತರ ಕಾಲ ಕಳೆಯುತ್ತಿತ್ತು. ರಂಗಭೂಮಿಗೂ ತನ್ನ ಬಾಳಿಗೂ ಅಷ್ಟೊಂದು ನಿಕಟ ಸಂಬಂಧ, ಯಾಕೆ ತನ್ನ ಬಾಳೇ ರಂಗಭೂಮಿಯೆನ್ನಬಹುದು. ಇದರಿಂದ ತನ್ನನ್ನು ಹರಿದುಕೊಳ್ಳುವುದು ಸುಲಭವೆ ? ಇದಕ್ಕೆ ಕೈ ಮುಗಿಯಬಲ್ಲಳೆ ? ಎಷ್ಟು ಯಾತನೆ, ಕಷ್ಟ ಯತ್ನ ! ಕುಡಿತ ಬಿಡುವ ಹೋರಾಟ ! ಆದರೆ ಈ ಅಮಲೇ ಸಾಕೆ ತನಗೆ ? ಇದು ತುಂಬಿದ ಬಾಳೆ ? ಇದು ಸಂತೆಯ ಜೀವನ. ಸ್ವಂತ ಜೀವನವೋ ?

ನಾಟಕದ ಹೊರಗೆ ಸ್ವಂತ ಜೀವನವೂ ಇರಲಿಲ್ಲವೆಂದಲ್ಲ. ಅಷ್ಟು ಇಷ್ಟು ಇದ್ದಿತು. ಒಂದೊಂದು ವೇಳೆ ಅದೇ ಬಹಳ ಹೆಚ್ಚು ಎನ್ನಿಸುತ್ತಿತ್ತು. ದಿನಗಳು ಕಳೆದಂತೆಲ್ಲ ಅದರ ಭಾಗ ಹೆಚ್ಚುತ್ತಿತ್ತು. ಮೊದಮೊದಲು ಮಗುವಾಗಿದ್ದಾಗ ಕಂಪನಿಯ ಬಂಟರೇ ಎತ್ತಿ ಆಡಿಸುತ್ತಿದ್ದರು. ಮುದ್ದಿಸುತ್ತಿದ್ದರು. ತಾನೂ ಸಂತೋಷಿಸುತ್ತ ಅವರೊಂದಿಗೆ ನಲಿಯುತ್ತಿದ್ದಳು. ತನಗೆ ವಯಸ್ಸು ಹೆಚ್ಚಿದಂತೆಲ್ಲ ಅವರ ದೃಷ್ಟಿ, ಮಾತು, ಸೋಂಕು ಹೊಸ ರೂಪವನ್ನು ಹೊಂದುತ್ತಿದ್ದುವು. ಈ ಬದಲಾವಣೆ ತನಗೆ ಮೊದಮೊದಲು ವಿಚಿತ್ರವೆನಿಸುತ್ತಿತ್ತು, ಆಕರ್ಷಿಸುತ್ತಲೂ ಇತ್ತು. ಅನಂತರ ಬೇಸರವನ್ನುಂಟುಮಾಡು

ತ್ತಿತ್ತು. ಒಂದೊಂದು ವೇಳೆ ಭಯವನ್ನುಂಟುಮಾಡುತ್ತಿತ್ತು. ಅವಿವೇಕದಿಂದ ಮುಂದುವರಿದ ಕೆಲವರು ಕಂಪನಿಯನ್ನು ಬಿಟ್ಟೂ ಇದ್ದರು. ಇಷ್ಟೇ ಅಲ್ಲ. ಕಂಪನಿಯು ಹೋದೆಡೆಯಲ್ಲೆಲ್ಲ ತೆರೆಯ ಒಳಗಡೆ ತರಹ ತರಹದ ಜನರು ಸೇರುತ್ತಿದ್ದರು. ಯಾವ ಯಾವ ಸ್ನೇಹದಿಂದಲೋ ದಾಕ್ಷಿಣ್ಯದಿಂದಲೋ ಇವರಿಗೆ ಅಲ್ಲಿ ಸುಲಭವಾದ ಪ್ರವೇಶ ಸಿಕ್ಕುತ್ತಿತ್ತು. ಇವರಲ್ಲಿ ಬಹಳ ಪಾಲು ಜನರ ಓರೆಕೋರೆಯ ನೋಟ, ವಕ್ರದ ನಡೆನುಡಿ, ಕೃತ್ರಿಮದ ನಗು ಬಗ್ಗಡವಾದ ಹಾಸ್ಯ ಪರಿಹಾಸ, ಹಾವಭಾವದ ರೀವಿ, ಒಟ್ಟಿನ ಚಲ್ಲುತನ ತನ್ನ ಮುಂದೆ ತಮ್ಮ ಪ್ರದರ್ಶನಕ್ಕಾಗಿ, ತನ್ನ ಗಮನವನ್ನು ಸೆಳೆಯುವುದಕ್ಕಾಗಿ, ತಮ್ಮ ಚೇಷ್ಟೆಯೊಂದರ ತೃಪ್ತಿಗಾಗಿ ಎಂದು ತನಗೆ ಭಾಸವಾಗುತ್ತಿತ್ತು. ಅವರಿವರ ಮೂಲಕ ವಿವಿಧ ಪ್ರಸ್ತಾಪಗಳಂತು ಎಷ್ಟೊ. ನೇರವಾಗಿ ತನಗೇ ಸೂಚಿಸಿದವರೂ ಇದ್ದರು. ಎಂಥ ಜನ!

ಈಗ ಈತ ಬಂದಿದ್ದ. ಅವರಿಗೂ ಇವನಿಗೂ ಎಷ್ಟೊಂದು ವ್ಯತ್ಯಾಸ! ಎರಡು ಧ್ರುವಗಳು. ಇವನನ್ನು ಹಿಂದೆಯೂ ಕಂಡಿದ್ದಳು. ತನಗೆ ತಿಳಿಯದಂತೆಯೇ ತನ್ನ ದೃಷ್ಟಿ ಆಗಾಗ ಇವನ ಕಡೆಗೆ ಹೋಗಿತ್ತು. ಇವನು ಯಾರಿರಬಹುದೆಂಬ ಕುತೂಹಲವೂ ಉಂಟಾಗಿತ್ತು. ಅವರಿವರು ಆಡಿಕೊಂಡ ಮಾತುಗಳನ್ನು ಸ್ವಲ್ಪ ಗಮನವಿಟ್ಟೇ ಕೇಳಿ ಇವನು ತರೀಕೆರೆಯ ಪ್ರಮುಖ ವರ್ತಕರಲ್ಲೊಬ್ಬರ ಮಗನೆಂದು ಮನಸ್ಸಿಗೆ ತಂದುಕೊಂಡಿದ್ದಳು. ಅಷ್ಟೆ. ಇವನೂ ಈವರೆಗೆ ಹೇಗೂ ಮುಂದುವರಿದಿರಲಿಲ್ಲ. ತಾನಾಗಿ ಅದಕ್ಕೆ ಯಾವ ಆಸ್ಪದವನ್ನೂ ಕೊಟ್ಟಿರಲಿಲ್ಲ–ಆ ಯೋಚನೆಯೇ ಬಂದಿರಲಿಲ್ಲ. ಈಗ ಒಂದೇ ಬಾರಿಗೆ ಹೀಗೆಲ್ಲ ಹೇಳಿಬಿಟ್ಟನಲ್ಲ!....ಯಾಕೆ ಹೇಳಬಾರದು–ಇಂಥ ವಿಷಯ? ಅವಮಾನದ್ದೇ? ಇದನ್ನು ಹೇಳುವುದಕ್ಕೇ ಸಮಯ ಕಾಯ್ದು ಬಂದಿದ್ದನೋ ಏನೋ. ಹುಂ. ಇರಬೇಕು. ಅದಕ್ಕೂ ಇಷ್ಟೊಂದು ತಡ; ತಿಳಿಸುವುದಕ್ಕೂ ತಬ್ಬಿಬ್ಬು. ಅಯ್ಯೋ, ಇವನ ರೀತಿ! ಹಿಂದೆಲ್ಲ ಇತರರಿಗಿಂತ ಎಷ್ಟು ಗಂಭೀರವಾಗಿ ನಡೆದುಕೊಂಡಿದ್ದ–ತನ್ನ ಯೋಗ್ಯತೆಗೆ ತಕ್ಕಂತೆ! ಎಂಥ ದಿಟ್ಟ ನಿಲುವು, ಮುಖದ ಚೆಲುವು! ಹುಂ. ಇವನಿಗಿಂತ ರೂಪವಂತರೆಷ್ಟೋ ಜನ ತನ್ನನ್ನು ಕಾಡಿದ್ದರು. ಇವನಿಗಿಂತ ಚತುರರು ಎಷ್ಟೋ ಸವಿಯಾದ

ಮಾತುಗಳನ್ನಾಡಿದ್ದರು. ಇವನಿಗಿಂತ ಪುಣ್ಯವಂತರೂ ಇರಬಹುದು. ಆದರೂ ಆದರೂ ಅವರೆಲ್ಲಿ ಇವನೆಲ್ಲಿ ?. ವಿಚಿತ್ರ ಆಕರ್ಷಣೆ !

ಇವನಲ್ಲಿ ಏನು ತಪ್ಪು—ಪಾಪ ! ಮಾತಿನ ನಯ ಕಡಿಮೆ. ನಯ ಕೇವಲ ಅನುಭವದ ಮಾತು—ಅಷ್ಟೆ. ಅಲ್ಲದೆ ಎದೆಯ ನಯವಲ್ಲವೆ ಸಂಸ್ಕೃತಿಗೆ ಮೂಲ ? ಸುಖಕ್ಕೆ ಬೇಕಾದದ್ದು ? ಇಷ್ಟಕ್ಕೂ ಇಷ್ಟು ನೇರವಾದ ಪ್ರಸ್ತಾಪಕ್ಕೆ ಅತಿ ನಯದ ಹೊದಿಕೆ ಇದ್ದೀ ಇರಬೇಕೇಕೆ ? ಹುಂ. ರೀತಿ ಅಪಕ್ವ, ಮಾತು ಸ್ವಲ್ಪ, ಆದರೆ ವಿಷಯ ದೊಡ್ಡದು. ಎಂಥ ವಿಷಯ ! ಕೆಲವು ಗಳಿಗೆಗಳಲ್ಲೀ ತನ್ನ ಬಾಳನ್ನೆಲ್ಲ ಕಲಕಿಬಿಟ್ಟಿತಲ್ಲ, ತಲೆಕೆಳಗು ಮಾಡಿಬಿಟ್ಟಿತಲ್ಲ ! ಇದೇ, ಈ ನಾಟಕ ಜೀವನವನ್ನು ಚರ್ಚಿಸದೆಯೋ ಯೋಚಿಸದೆಯೋ ಒಗ್ಗಿಸಿಕೊಂಡಿದ್ದಳಲ್ಲ, ಅದರಲ್ಲೀ ತೃಪ್ತಳಾಗಿದ್ದಳಲ್ಲ. ಈ ಕನಸನ್ನು ಒಂದೇ ಮಾತಿನಿಂದ ಗಾಜಿನ ಬುರುಡೆಗೆ ಒಂದು ಕಲ್ಲೆಸೆದಂತೆ—ಒಡೆದುಬಿಟ್ಟನಲ್ಲ. ಏನಂದ ? ಹೊಲಸು ಜೀವನ ! ಹುಂ. ಅಯ್ಯೊ, ಎಷ್ಟು ನಿಜ ! ತನಗೆ ಈವರೆಗೂ ಹೊಳೆವೇ ಇರಲಿಲ್ಲ. ಛಿ; ನೆನೆಸಿಕೊಂಡರೆ—ಈಗ ! ಇದೇ ತನ್ನ ಯೋಗ್ಯತೆ ಎಂದುಕೊಂಡಿದ್ದವಳಿಗೆ ತಾನು ಹೊಸ ಯೋಗ್ಯತೆಗೆ ತಕ್ಕವಳೆಂಬ ತಿಳಿವಳಿಕೆ ಹುಟ್ಟಿಸಿದ. ಹಂಬಲನ್ನುಂಟುಮಾಡಿದ. ಬಾಳಿನ ಪುಟವನ್ನೇ ತಿರುವಿಹಾಕಿದ. ಹಳೆ ಹುಟ್ಟಿಗೆ ಹೊಸ ಚೈತನ್ಯ ಕೊಟ್ಟ ; ಉಸಿರಾಡಲಾಗದಿದ್ದ ಕೋಣೆಯಲ್ಲಿ ಹೊಸ ಗಾಳಿ ಬೀಸಿದಂತೆ, ಕಗ್ಗತ್ತಲೆಯ ಕಾಡಿನಲ್ಲಿ ಸೂರ್ಯೋದಯವಾದಂತೆ. ಅಬ್ಬ, ತಾನೆಂತಹ ಮೂರ್ಖಳು—ಆಗಿದ್ದಳು ! ನಿಜ, ನಾಟಕ ಜೀವನವೇನೋ ಸಾವಿರಾರು ಜನರ ಮೆಚ್ಚಿಗೆಯ ಹೆಮ್ಮೆಯನ್ನು ತರುತ್ತಿತ್ತು. ರಂಗದ ಮೇಲೆ ಎದೆಯುಬ್ಬಿಸುತ್ತಿತ್ತು. ಬುದ್ಧಿಗೆ ಆಹ್ಲಾದಕರವಾಗಿತ್ತು. ಹೊರಗಡೆಯ ಓಲೈಸುವಿಕೆಯೋ ಹೇಳತೀರದು. ನಿಜ. ಆದರೆ ಅದಕ್ಕೆಷ್ಟು ಬೆಲೆ ! ಬಹಳ, ಬಹಳ. ಈ ಬಾಳು ಎಷ್ಟು ದೊಡ್ಡದು, ವಿಶಾಲ. ಆದರೂ ಎಷ್ಟು ಸಣ್ಣದು, ಕೀಳು-ಈಗ ತನಗೆ. ರಂಗಭೂಮಿಯ ಮೇಲೆ ತಾನು ನಡೆದಾಗ ಮಾತನಾಡಿದಾಗ ಅಭಿನಯಿಸಿದಾಗ, ಉಸಿರು ಹುಯ್ಯದೆ ನೋಡುವ ಕೇಳುವ ಜನಸಮುದಾಯವನ್ನು ಕಂಡಾಗ, ಅವರು ಕೈ ತಟ್ಟಿದಾಗ, 'ಇನ್ನೊಂದು ಸಾರಿ' ಎಂದಾಗ, ಹೂ ಹಣಗಳನ್ನು ತನ್ನ ಕಡೆಗೆ ಎಸೆದಾಗ, ಬಹುಮಾನ ಕೊಟ್ಟಾಗ, ದೊಡ್ಡ ದೊಡ್ಡ ಮನು

ಷ್ಯರು ಪ್ರಶಂಸಿಸಿದಾಗ ತನ್ನ ಪ್ರತಿಷ್ಠೆ ಎಷ್ಟು ! ಆದರೂ ಆದರೂ, ಆಗೋ ಅಲ್ಲಿ, ಹಳ್ಳದಲ್ಲಿ ಮುಂದಿನ ಸಾಲಿನ ಸೋಫಗಳ ಮೇಲೆ, ಯಾಕೆ, ಹಿಂದಿನ ಸಾಲು ಕುರ್ಚಿಗಳ ಮೇಲೆ ಕುಳಿತ ಗೃಹಿಣಿಯರನ್ನು ನೋಡಿದಾಗ ತನಗೇಕೊ ಅಸೂಯೆ. ನಟಿಯ ಪ್ರತಿಷ್ಠೆ ಎಷ್ಟಾದರೂ ಗೃಹಿಣಿಯ ಮರ್ಯಾದೆಗೆ ಸರಿದೂಗದು. ತನ್ನದು ಅಷ್ಟೈಶ್ವರ್ಯವಾದರೂ ಅವರದು ರುಕ್ಮಿಣಿಯು ತಕ್ಕಡಿಗೆ ಹಾಕಿದ ತುಳಸಿಯ ದಳ. ಗೃಹಿಣಿ !

ಹುಂ, ಗೃಹಿಣಿ ! ಅದೇ ಅವನು ಅಂದ ಮಾತು. ಅದೇ ಅವನು ತನಗೆ ನೀಡಿದ್ದು. ಸಾಧ್ಯವೆ, ತನ್ನಂಥವಳಿಗೆ ? ಕೊಡಬಲ್ಲನೆ, ಅವನು ? ಅ ? ಇಲ್ಲ, ಇದೊಂದು ಹೊಸ ಮೋಸವೊ ? ಛೆ, ಅವನ ಕಣ್ಣಿನಲ್ಲಿ ಮೋಸ ಕಂಡಿತೆ ? ಅವನ ಧ್ವನಿಯಲ್ಲಿ ಅಪಸ್ವರವಿತ್ತೆ ? ಇಲ್ಲ, ಇಲ್ಲ. ಮೋಸಗಾರರ ರೀತಿಯೇ ಬೇರೆ. ಅವರನ್ನು ತಾನೇನು ಕಂಡಿರಲಿಲ್ಲವೆ ? ಅದೂ ಎಷ್ಟೋ ಜನರನ್ನು ? ಅವನಲ್ಲಿ ಅಪನಂಬಿಕೆ ತನ್ನೆದೆಗೆ ಒಪ್ಪದು. ಅವನ ತಡೆನುಡಿ ಕಪಟಿಯು ಹಿಡಿನುಡಿಯಲ್ಲ; ಭಾವಾವೇಶದ ಎದೆಯಿಂದ ಉಕ್ಕಿದ ಬುಗ್ಗೆ. ಹುಂ, ತಂತ್ರಗಾರನ ನಡೆನುಡಿ, ಕೊಳೆಯೆಲ್ಲವನ್ನೂ ಒಳಗೊಂಡು ಸಿದ್ಧವಾದ ದಡಗಳ ಮಧ್ಯೆ ಹರಿಯುವ ಹೊಳೆಯಂತೆ ಧಾರಾಳವಾಗಿಯೇ ಹರಿಯುತ್ತದೆ. ಇದರ ಸತ್ಯ ತನಗೆ ಗೊತ್ತು....ಗೃಹಿಣಿಯ ಜೀವನ ! ಹುಂ. ಮದುವೆ ! ಹೆಂಡತಿ ! ತಾಯಿ ! ಆಹಾ, ಎಷ್ಟೊಂದು ! ಮದುವೆಯ ಮಾನ ಸಂಬಂಧ ; ಹೆಂಡತಿಯ ಪ್ರೇಮರಸ ಜೀವನ ; ತಾಯಿಯ ತುಂಬು ಬಾಳು ! ತಾನು ಹಿಂದೆಂದೂ ಯೋಚಿಸಲಾಗದಿದ್ದ ಸೌಭಾಗ್ಯದ ಗೊಂಚಲು ! ಎಷ್ಟು ಸಣ್ಣದು-ಕಾಣುವುದರಲ್ಲಿ ; ಎಷ್ಟು ದೊಡ್ಡದು-ಇರುವುದರಲ್ಲಿ ! ಇದಕ್ಕೇನು ಬೆಲೆ ? ಜೀವಸಂಗಮ ಆತ್ಮಸಂಗಮ ; ಜೀವನ ಸಂಗಾತಿಯೊಡನೆ. ತಾನು ಮಾಡಬಲ್ಲಳೆ ? ಯಾಕಿಲ್ಲ ? ಎದೆ ಇನ್ನೂ ಬಾಡಿಲ್ಲ. ಮಲ್ಲಿಗೆಯ ಹಣ್ಣು ಮೊಗ್ಗಿನಂತೆ ನಿರ್ಮಲವಾಗಿದೆ, ಹೊಸದಾಗಿದೆ, ಮಧುರವಾಗಿದೆ, ಪ್ರೇಮದ ಹೊಂಬಿಸಿಲಿಗೆ ಅರಳುತ್ತಿದೆ. ನಾಚಿಕೆ, ಹೆದರಿಕೆಗಳಿಲ್ಲದೆ ಕುಯ್ದು ಸಮರ್ಪಿಸಬಲ್ಲಳು.

ಈ ಬಳ್ಳಿಯ ಸಾರ್ಥಕದ ಬಾಳಿಗೆ ಬದಲು ಇಲ್ಲಿರುವುದೇನು ? ಬರಿಯ ವ್ಯಾಪಾರ ವ್ಯವಹಾರ-ಎಲ್ಲೆಲ್ಲು. ರಂಗದ ಕುಣಿತ, ಪ್ರತಿಷ್ಠೆಯ ಕುಡಿತ,

ಹೊರ ವೈ ನೆರೆತ–ಎಲ್ಲ. ಒಟ್ಟು ಜೀವನವೇ ಹೊಗೆ–ಗಂಧದ ಹೊಗೆ, ನಿಜ. ಆದರೇನು ಹೊಗೆಯೇ. ಹೆಣ್ಣಿನ ಸ್ಥಾನಮಾನ ಇಲ್ಲಿ ಬರಿಯ ಗಗನ ಕುಸುಮ. ಹೆಚ್ಚು ಕೇಳುವ ಧೈರ್ಯವೂ ಇಲ್ಲ, ಕೊಡುವ ಯೋಚನೆಯೂ ಇಲ್ಲ. ಈ ಹಸಿವಿನ ನಿವಾರಣೆಗೆ ಬೇಕಾದರೆ ಖ್ಯಾತಿಯ ಗಾಳಿ. ದಿನದ ಬೆಳಕಿನ ಬದಲು ರಾತ್ರಿಯ ಆಕಾಶದ ಬಾಣಬಿರುಸು. ಗುಲಾಮನಿಗೆ ಸ್ವಾತಂತ್ರ್ಯ ಕೊಡದೆ ಪಟ್ಟಕ್ಕೇರಿಸಿದ ಹಾಗೆ. ಮಕ್ಕಳಿಗೆ ಬದಲು ಬೊಂಬೆಗಳನ್ನು ಕೊಟ್ಟ ಹಾಗೆ......ಮಕ್ಕಳು ! ತನ್ನ ಮಕ್ಕಳು ! ತನ್ನವೇ ಮುದ್ದು ಮಕ್ಕಳು ! ಎಷ್ಟು ಚೆನ್ನ ! ಹೆತ್ತು ಹೊತ್ತು, ಲಾಲಿಸಿ, ಪಾಲಿಸಿ,....ಆಹಾ ! ಅಪ್ಪ–ಶಾಮಣ್ಣ ನನ್ನು ಹಾಗೇ ಸಂಬೋಧಿಸುತ್ತಿದ್ದಳು–ಅಪ್ಪ ಎಷ್ಟು ವಿರೋಧವಾಗಿದ್ದಾನೆ ! ಮಕ್ಕಳಾದರೆ ವೈ ಕೆಡುವುದಂತೆ! ಹುಂ, ತನಗೆಷ್ಟು ನಿರ್ಬಂಧ! ಇವನಿಗೇನು? ಇವನಿಗೆ ಹೇಗೆ ಗೊತ್ತಾಗಬೇಕು, ಹೆಣ್ಣಿನ ತಾಯ್ತನದ ಹಂಬಲು? ಕಟುಕ! ಕೋಮಟಿ ! ಹೂಂ ! ಈಗ ಕಂಡಿದೆ ಈ ಸುಖದ ಹೆದ್ದಾರಿ. ಇವನಿಂದ ತಪ್ಪಿಸಿಕೊಳ್ಳದೆ ಇರುವವಳೆ .ಇನ್ನು ? ಉಹೂಂ ! ಕಂಪನಿಗೆ ನಷ್ಟವಾಗುತ್ತೆಂದು ಕೂಗಾಡುತ್ತಾನೆ ನಿಜ. ಆದರೆ ಅದಕ್ಕೆ ತಾನು ಹೊಣೆಯೆ ? ಒಂದು ಕಾಲಕ್ಕೆ ತಾನೂ ಬೇಡವಾಗುವವಳೆ–ಎಷ್ಟೋ ಹೆಂಗಸರು ಆಗಲೇ ಆಗಿ ಹೋಗಿದ್ದ ಹಾಗೆ. ಅಲ್ಲಿಯವರೆಗೆ ಈ ಅವಕಾಶ ಕಾದಿರುತ್ತದೆಯೆ ? ಹ್ಞ !ತಾನು ಬೇರೆ ಅವನಮಾತಿಗೆ ಮರುಳಾಗುವವಳಲ್ಲ, ಬಲವಂತಕ್ಕೆ ಬಗ್ಗುವವಳಲ್ಲ. ಉಹುಂ ! ಬೇಕಾದದ್ದು ಆಗಲಿ. ಯಾವ ದೌರ್ಭಾಗ್ಯ ಕಾದಿದ್ದಾಳೋ ಅವಳಿಗಿರಲಿ ತನ್ನ ಈಗಿನ ಸೌಭಾಗ್ಯ. ಛೆ ಬೇಡ ! ಅವಳೂ ಎಷ್ಟಾದರೂ ಹೆಂಗಸು. ಗಂಡಸರೇ ಇದ್ದಾರಲ್ಲ–ಎಲ್ಲಕ್ಕೂ ಸಿದ್ಧರಾದವರು !

ಗಂಡಸರು, ತಾನು ಕಂಡ ಗಂಡಸರು ! ಈತ ಅವರೆಲ್ಲರಿಗೂ ಎಷ್ಟು ಹೊರಗು ! ಅಯ್ಯೊ, ತನ್ನ ವಿಷಯವನ್ನೇ ಯೋಚಿಸಿಕೊಳ್ಳುತ್ತಿರುವಳಲ್ಲ. ಅವನ ಪಾಡೇನೋ, ತನ್ನ ಕೈ ಹಿಡಿದರೆ ? ಅಂಥ ವಂಶಸ್ಥ, ಸ್ಥಿತಿವಂತ–ಯಾರೋ ಹೇಳಿರಲಿಲ್ಲವೆ ? ಯಾವ ಯಾವುದನ್ನು, ಯಾರು ಯಾರನ್ನು ತೊರೆಯಬೇಕೋ ತನ್ನನ್ನು ಕರೆದು ? ಇದಕ್ಕೆಲ್ಲ ಸಿದ್ಧನೆ ? ಯೋಚಿಸಿದ್ದಾನೆಯೆ ? ಇಲ್ಲದೆ ಉಂಟೆ ? ಯಾರಿಗೆ ಗೊತ್ತು ? ಪರೀಕ್ಷೆಯ ಸಮಯದಲ್ಲಿ ಹೇಗೋ ? ಇದು ಆವೇಶದ ಹುಚ್ಚು ಮಾತ್ರವೊ ? ಉಹುಂ. ಅನುಮಾನ

ವಿಲ್ಲ. ಅವನ ಮಾತು ಎಷ್ಟು ಖಂಡಿತ! ಹಾಗೇ ಮನುಷ್ಯ-ಇರಬೇಕು. ಆದರೆ ಇದು ಅನ್ಯಾಯವಲ್ಲವೆ-ಅವನಿಗೆ? ಹುಂ. ಚರ್ಚಿಸಬೇಕು.

ಈ ಚರ್ಚೆ, ಈ ಕಡೆತದಲ್ಲೇ ಕಾಲ ಕಳೆಯಿತು. ಬೆಳಗಾದಾಗ ಆಯಾಸ, ಮೈ ನೋವು, ಕಣ್ಣುರಿ. ಆದರೆ ಎದೆ ಹಗುರ. ಹೊಸ ಉತ್ಸಾಹ, ಚೈತನ್ಯ, ದೃಷ್ಟಿ. ಒಳ ತಳಮಳದ ಮೇಲೆ ನಿರ್ಧರದ ಶಾಂತಿ ಹೊದಿಕೆ. ಇದನ್ನು ಆಗಾಗ ಸಡಿಲಿಸುವುದೆಂದರೆ ಆತುರದ ನಿರೀಕ್ಷೆ-ಅಷ್ಟೆ.

-೪-

ಕಡೆಯ ಮ್ಯಾಟನಿಯಲ್ಲಿ ಎಂದೂ ಇಲ್ಲದಷ್ಟು ಜನ. ನಾಟಕ ಮಾಳವಿಕಾಗ್ನಿಮಿತ್ರ. ಇಲ್ಲಿ ರಂಗನಾಯಕಿಯ ನಾಟ್ಯ, ಪ್ರೇಮಾಭಿನಯ ಗಳು ಪ್ರಸಿದ್ಧಿಯಾಗಿದ್ದುವು ಮಾಳವಿಕೆಯ ಬರುವಿಗಾಗಿ ಜನರು ಆತುರ ವಾಗಿದ್ದರು. ಮುಂದಿನ ಸೋಫದ ಮೇಲೆ ಕುಳಿತಿದ್ದ ನಾಗರಾಜನಿಗೆ ಆತುರ ಬೇರೆಯ ತರಹ. ನಾಟಕದ ನೋಟ ಅವನಿಗೆ ಬೇಕಿರಲಿಲ್ಲ. ರಂಗನಾಯಕಿ ಯನ್ನು ಕಂಡು ಮಾತಾಡಬೇಕೆಂಬ ಆತುರದ ಒತ್ತಡ, ಕಾತರ. ಆದರೆ ಆಗಲೇ ಹೋಗಿ ನೋಡುವುದಕ್ಕೂ ಮನಸ್ಸು ಒಪ್ಪದು. ಏನೆಂದುಬಿಡು ವಳೋ ಎಂಬ ದಿಗಿಲು. ಅವನಿಗೆ ಅನುಮಾನದ ಫಲಿತಾಂಶಕ್ಕಿಂತ ಆಸೆಯ ಕನಸೇ ಹಿತವಾಗಿತ್ತು. ಈ ಕನಸಿನಲ್ಲಿಯೇ ರಾತ್ರಿ ಹಗಲುಗಳನ್ನು ಕಳೆದಿದ್ದ. ಇನ್ನೂ ಕೆಲವು ಗಳಿಗೆಗಳನ್ನು ಚಪ್ಪರಿಸುತ್ತಿದ್ದ. ನಿಜ, ಕನಸಿನ ಸವಿಯೊಂ ದಿಗೆ ಸಂಶಯದ ಹುಳಿಯೂ ಸೇರಿತ್ತು. ಆದರೇನು? ಹುಳಿಸಿಹಿಯೇ ಹೆಚ್ಚು ರುಚಿಯಲ್ಲವೆ? ಅಂತೂ ಅವನು ಮೆತ್ತೆಯ ಮೇಲೆ ಕುಳಿತಿದ್ದರೂ ಆಸ ಅಧೈರ್ಯಗಳ ಮುಳ್ಳುಗಳು ಚುಚ್ಚುತ್ತಿದ್ದುವು.

ಆರು ಗಂಟೆಯ ಮ್ಯಾಟನಿ ಆರೂಕಾಲಾದರೂ ಮೊದಲಾಗಲಿಲ್ಲ ಜನರ ಗುಜುಗುಜು ಗಳಿಗೆ ಗಳಿಗೆಗೂ ಹೆಚ್ಚಾಗುತ್ತಿತ್ತು. ಚಾಪೆಯವರ ಕೂಗು, ಚಪ್ಪಾಳೆ, ಸಿಳ್ಳು, ಮೀರಿದ ತಾಳ್ಮೆಯನ್ನು ಸೂಚಿಸುತ್ತಿದ್ದುವು. ಇನ್ನೂ ಕಾಲು ಗಂಟೆ ಹೇಗೆಯೋ ಕಳೆಯಿತು. ಅಂಕದ ಪರದೆಯ ಹಿಂದೆ ಮಂಗಳಾರತಿಯ ಬೆಳಕು ಕಾಣಲಿಲ್ಲ, ಗಂಟೆಯ ಶಬ್ದ ಕೇಳಲಿಲ್ಲ. ಏರುತ್ತಿದ್ದ

ಗಲಭೆ ಕೈ ಮೀರುವಂತಾದಾಗ ಅಂಕದ ಪರದೆ ಏಳುವ ಬದಲು ಶಾಮಣ್ಣ ಪಕ್ಕದಿಂದ ಬಂದು ಕೈ ಜೋಡಿಸಿ ನಿಂತ. ಸಭೆ ನಿಶ್ಶಬ್ದವಾಯಿತು–ಕ್ಷಣಕಾಲ ಮಾತ್ರ. ಅವನು "ಮಹಾಜನರೆ, ನಾನು ಅರಿಕೆಮಾಡಿಕೊಳ್ಳಬೇಕಾಗಿಬಂದಿರುವ ಅತಿ ವಿಷಾದದ ಸಂಗತಿಯೆಂದರೆ ಈ ಹೊತ್ತು ತಮ್ಮ ಮೆಚ್ಚಿನ ನಟಿ ರಂಗನಾಯಕಿಗೆ ಮೈಯಲ್ಲಿ ಆಲಸ್ಯವಾಗಿರುವುದರಿಂದ ....." ಎಂದು ಪೂರ್ತಿ ಮಾಡುವುದಕ್ಕೆ ಮುಂಚೆಯೇ ಸಭೆಯಲ್ಲಿ ಕೋಲಾಹಲವೆದ್ದಿತು. "ಮೋಸ ! ದುಡ್ಡು ವಾಪಸು ! ಛಾರ್ಜು ವಾಪಸು !" ಮುಂತಾಗಿ ಕೂಗಾಟ ಎಲ್ಲೆಲ್ಲೂ. ಬಡ ಶಾಮಣ್ಣ ಕೈಯಾಡಿಸುತ್ತ ಹಲ್ಲು ಕಿರಿಯುತ್ತ ಶಾಂತಿ ಸಂಧಾನಕ್ಕೆ ಯತ್ನಿಸಿ "ಆದರೂ ನಾಟಕವನ್ನು ನಿಲ್ಲಿಸುವುದಿಲ್ಲ. ಮಾಳವಿಕೆಯ ಪಾತ್ರವನ್ನು ಬೇರೊಬ್ಬರು...." ಎಂಬೊಡನೆ "ಬೇಡ ! ಬೇಡ ! ರಂಗನಾಯಕಿಯೇ ಬೇಕು ! ಇಲ್ಲದಿದ್ದರೆ ದುಡ್ಡು ವಾಪಸ್ ! ಹೋಗು ! ತೊಲಗು ! ಕೊಡು ದುಡ್ಡು !" ಎಂದು ಕೊನೆಯಿಲ್ಲದೆ ಕಿರಿಚಾಟವಾಗಿ ಅನೇಕರು ಎದ್ದೇಬಿಟ್ಟರು. ಗೊಂದಲವಾಯಿತು. ಒಂದೆರಡು ಕಲ್ಲುಗಳ ಬೀರಾಟವೂ ಆಯಿತು. ಶಾಮಣ್ಣ ಇದ್ದ ಗಂಟಲನ್ನೆಲ್ಲ ಬಿಚ್ಚಿ ಕೂಗಿಕೊಂಡಿದ್ದು ಯಾರಿಗೂ ಕೇಳಿಸಲೇ ಇಲ್ಲ. ಹತಾಶನಾಗಿ ಒಳಗೆ ಸರಿದುಕೊಂಡ. ಎದ್ದ ಜನರು ಬುಕಿಂಗ್ ಆಫೀಸನ್ನು ಮುತ್ತಿಗೆ ಹಾಕಿ ಹಣವನ್ನು ಕೇಳಿದರು. ಕೊಡದಿದ್ದರೆ ನಾಟಕಮಂದಿರವನ್ನು ಸುಡುವುದಾಗಿ ಬೆದರಿಸಿದರು. ಅಲ್ಲಲ್ಲಿ ಓಡಾಡುತ್ತಿದ್ದ ನಾಲ್ಕಾರು ಪೋಲೀಸಿನವರ ಕೈ ಸಾಗುವಂತಿರಲಿಲ್ಲ. ಅಂತೂ ವಿಷಯ ತುಟಿಗಟ್ಟಕ್ಕೆ ಬಂದು ವಿಷಮಾವಸ್ಥೆಗೆ ಇಳಿಯುವಂತಿದ್ದಾಗ ಹಣವನ್ನು ಹಿಂದಿರುಗಿಸುವುದು ಮೊದಲಾಯಿತು.

ಶಾಮಣ್ಣನ ಮೊದಲ ಮಾತನ್ನು ಕೇಳಿದಾಗಲೇ ನಾಗರಾಜ ಇನ್ನೂ ಕೆಲವರಂತೆ ರಂಗಭೂಮಿಗೆ ಹತ್ತಿಹೋಗಿದ್ದ. ನಾಯಕಿ ಅಲ್ಲಿರಲಿಲ್ಲ. ಅವನ ಯತ್ನವಿಲ್ಲದೆಯೇ ಅವನಿಗೆ ನಟರು ಆಡಿಕೊಳ್ಳುತ್ತಿದ್ದ ಮಾತಿನಿಂದ ವಿಷಯ ತಿಳಿಯಿತು. ಅಗ್ನಿಮಿತ್ರನ ವೇಷ ಧರಿಸಿದ್ದ ರಾಮಯ್ಯ "ಅದೇನಾಗಿದೆಯೋ ಅವಳಿಗೆ ನಿನ್ನೆಯಿಂದ ನೋಡಲಿಲ್ಲವೇ-ನಿನ್ನೆ ಪಾರ್ಟುಮಾಡಿದ್ದು? ಯಾವತ್ತೂ ಅಷ್ಟು ಅಲಕ್ಷ್ಯವಾಗಿ ಮಾಡುತ್ತಿರಲಿಲ್ಲ" ಅಂದ. ಮಾಳವಿಕೆಯ ಪಾತ್ರದ ಲಿಂಗಪ್ಪ "ಹುಂ, ಹುಂ. ಮೊದಲು ದುಷ್ಯಂತನೇ–ನೀನೇ ಕಾರಣ, ಜನದ

ಗುಜುಗುಜುಗೆ ಅಂತಿದ್ದೆ. ಅವಳು ಎದುರಿಗಿದ್ದಾಗ ಜನ ಹೇಗಿರಬೇಕು, ಏನು ಕತೆ !" ಅಂದ. ಯಾರೋ ಹೊರಗಿನವರು "ಏನಂತೆ ಕಾರಣ ? ಏನು ಕಾಯಿಲೆ ?" ಎಂದು ಕೇಳಿದರು. ರಾಮಯ್ಯ "ನಿನ್ನೆಯೇನೋ ತಲೆನೋವು ಅಂದಳು. ಹೋಗಲಿ. ಇವತ್ತು 'ಪಾರ್ಟು ಮಾಡೋಕೆ ಮನಸ್ಸೇ ಇಲ್ಲ. ಕೆಟ್ಟು ಹೋಗುತ್ತೆ ಬೇಡ' ಅಂತ ಹಟ ಹಿಡಿದುಬಿಟ್ಟಳು. ಪಾಪ, ಶಾಮ ಣ್ಣೋರು ಎಷ್ಟೆಷ್ಟೋ ಹೇಳಿದರು. ಜುಂ ಅನ್ನಲಿಲ್ಲ. ಅವರೇನು ಮಾಡ್ತಾರೆ. ಲಿಂಗಪ್ಪನ್ನೇ 'ತಯಾರಾಗು' ಅಂದರು. ಹುಂ. ಕಡೇ ನಾಟಕ. ಎಷ್ಟು ಕಷ್ಟ. ಜನ ಹಣ ಕೇಳ್ತಾ ಇದಾರೆ–ಎಷ್ಟು ನಷ್ಟ. ಕಂಪನಿಯ ಹೆಸರೇ ಕೆಟ್ಟು ಹೋಗೋ ಹಾಗಾಯ್ತು," ಎಂದು ಪೇಚಾಡಿ "ಅವಳಿಗೆ ಯಾವುದೋ ದೆವ್ವ ಹಿಡಿದಿದೆ–ಹೊರಗಿಂದು. ಯಾವೋನ ಕಣ್ಣು ಬಿತ್ತೋ ಏನೋ," ಎಂದು ನಿಟ್ಟುಸಿರುಬಿಟ್ಟ. ವಿದೂಷಕನ ಪಾತ್ರ ವಹಿಸಿದ್ದ ಮೂರ್ತಿ "ಮಿತ್ರನೆ, ಅಷ್ಟೊಂದು ನಿರಾಶನಾಗಬೇಡ. ನನ್ನಂತಹ ಮಿತ್ರನಿರಬೇಕಾದರೆ ನಿನಗೇತಹ ಆತಂಕ, ಚಿಂತೆ. ವಿರಹವನ್ನು ಸ್ವಲ್ಪ ಸೈರಿಸಿಕೊ," ಎಂದು ನಗೆಯಾಡಿದ. ರಾಮಯ್ಯ "ಹೋಗೋ ಹೋಗೋ ನಿನ್ನ ನಾಟಕ ಸಂಗ ಯಾರಿಗೆ ಬೇಕಾ ಗಿದೆ," ಎಂದ ಬೇಸರದಿಂದ. ಸುತ್ತಿನವರು ಕಿಸಿಕಿಸಿ ನಕ್ಕರು. ನಾಗರಾಜನ ಮುಖ ಕಹಿಯಾಯಿತು. ಮಾತನ್ನು ಕೇಳಲಾರದೆ ಹೇಸಿ ಎರಡು ಹೆಜ್ಜೆ ದೂರವಾದ. ಅಲ್ಲಿಂದ ಹೋಗಲು ಹವಣಿಸಿದ. ಆಗ ಕೇಳಿಸಿತು ಯಾರದ್ದೋ ಪ್ರಶ್ನೆ "ಈಗ ಅವಳು ಎಲ್ಲಿ ? ಇಲ್ಲಿ ಬಂದೇ ಇಲ್ಲವೆ ?" ಲಿಂಗಪ್ಪ "ಬಿಡಾರ ಬಿಟ್ಟೇ ಇಲ್ಲ," ಎಂದುದು ನಾಗರಾಜನಿಗೆ ಕೇಳಿಸಿತು.

ಕೇಳಿದ ಮಾತುಗಳು ನಾಗರಾಜನಲ್ಲಿ ಹಲವು ಭಾವನೆಗಳ ಅಲೆಗಳನ್ನೆ ಬ್ಬಿಸಿದುವು. ಮೊದ ಮೊದಲು ದೇಹಾಲಸ್ಯವೇ ಕಾರಣವೆಂದುಕೊಂಡಿದ್ದ ವನು ಈಗ 'ಇರಬಹುದೆ ? ಅದೇ ಕಾರಣವಿದ್ದೀತೆ ? ತನ್ನ ಪ್ರಸ್ತಾಪವೇನಾ ದರೂ....' ಎಂದು ಯೋಚಿಸಿಕೊಂಡ. ಪೂರ್ತಿಮಾಡಿಕೊಳ್ಳುವ ನಂಬಿಕೆ ಯಿರಲಿಲ್ಲ. ಮನಸ್ಸಿನ ಗೊಂದಲ ಭಾವಾವೇಶಕ್ಕೆಡೆಗೊಟ್ಟಿತು. ಅವಳು ತನ್ನ ಬಿಡಾರದಲ್ಲೇ ಇದ್ದ ಮಾತು ಕಿವಿಗೆ ಬಿದ್ದೊಡನೆ ಅಲ್ಲಿ ನಿಲ್ಲದೆ ಬಿಡಾರದ ಕಡೆಗೆ ಆತುರದಿಂದ ಹೊರಟುಬಿಟ್ಟ. ಔಚಿತ್ಯ ಅನೌಚಿತ್ಯಗಳ ಚಿಂತೆಯೇ ಮನಸ್ಸಿಗೆ ಬರಲಿಲ್ಲ.

ತಟ್ಟಿದ ಬಾಗಿಲನ್ನು ತೆಗೆದವಳು ಅವಳೇ. ನೋಡಿದೊಡನೆ ನಾಗರಾಜ ಚಕಿತನಾದ. ಒಂದೇ ಒಂದು ದಿನ ಅವಳಲ್ಲಿ ಮಾಡಿದ್ದ ಮಾರ್ಪಾಟು ಅಚ್ಚರಿಗೊಳಿಸಿದ್ದಿತು. ಮರದಲ್ಲಿ ತೂಗುತ್ತ, ಗಾಳಿಯಲ್ಲಿ ಓಲಾಡುತ್ತ, ಬಿಸಿಲು ಮಳೆಗಳಲ್ಲಿ ಮಿಂದು ಬಣ್ಣಗೂಡಿದ ಕಸಿ ಮಾವು ಈಗ ಚಿಂತೆಯ ಹುಲ್ಲಿನಲ್ಲಿ ಅಡೆಯಾಗಿ ಬಾಡಿದಂತೆ ಕಂಡಿತು; ಹಾಗೂ ಹೆಚ್ಚು ಬಣ್ಣಗೂಡಿ, ಪಕ್ವವಾಗಿ, ಮಧುರವಾದಂತೆಯೂ ಕಂಡಿತು. ಅವಳಿಗಾದರೋ ಅವನ ಮಿಂಚು ಮುಖ, ಹೊಳಪುಗಣ್ಣು, ಮೇಲುಸಿರು ಇವೇ ಅವನ ಗುಟ್ಟನ್ನೆಲ್ಲ ಒಡೆದು ತೋರಿಸಿದುವು. ಮಾತೇ ಅವಶ್ಯಕವೆನಿಸಲಿಲ್ಲ. ಆದರೂ ಅವಳು ಅವನನ್ನು ಅಷ್ಟು ಬೇಗ, ಆಗಲೇ ಹಾಗೆ ನಿರೀಕ್ಷಿಸಿರಲಿಲ್ಲ. ಸ್ವಲ್ಪ ಬೆರಗಾದಳು. ಅವನನ್ನು ಒಳಕ್ಕೆ ಕರೆಯಬೇಕೋ ಬಾರದೋ ತೋರಲಿಲ್ಲ. ಅವನಿಗೆ ಅದರ ಯೋಚನೆಯೇ ಬರಲಿಲ್ಲ.

"ಬರಲಿಲ್ಲ ಅಂತ ಕೇಳಿದೆ. ಅಲ್ಲಿ ಕೋಲಾಹಲವಾಗಿದೆ. ಕಾರಣ..... ಮೈಯಲ್ಲಿ...." ಅವನು ಏದುತ್ತಲೇ ಹರಕು ಮುರುಕಾಗಿ ತಡಬಡಿಸುತ್ತ ಹೇಳಿದ.

"ಏನೋ ಮನಸ್ಸಿಲ್ಲ.....ಅಷ್ಟೆ...."

"ಅಷ್ಟೇಯೆ ?__ಅಥವ....ಅಥವ....."

ಅವನು ಪೂರ್ತಿಮಾಡಲಿಲ್ಲ. ಅವಳು ಉತ್ತರವನ್ನೂ ಕೊಡಲಿಲ್ಲ. ಅವಳ ದೃಷ್ಟಿ ಅವನ ಕಣ್ಣನ್ನು ಮುಟ್ಟಿ ಅಲ್ಲಲ್ಲಿ ಹರಿದು ಕೆಳಗಾಯಿತು. ಅವಳ ಮೌನ ಅರ್ಥಗರ್ಭಿತವಾಗಿತ್ತು.

"ನಾನು ಹೇಳಿದ್ದ....ಮಾತು ಯೋಚಿಸಿ ಆಯ್ತೆ ?" ಅವನು ನೇರವಾಗಿ ಆತುರದಿಂದ ವಿಷಯಕ್ಕೆ ಬಂದ.

ಆಯಿತು ಎನ್ನುವಂತೆ ಅವಳು ತಲೆಯನ್ನು ವಾರೆಮಾಡಿದಳು.

"ಮತ್ತೆ....ನಿರ್ಧಾರಕ್ಕೂ...."

ಅದೇ ಅಭಿನಯ, ಉತ್ತರವಾಗಿ.

"ಏನು....ಏನು ಅಂತ....ಅಂದರೆ ಒಪ್ಪಿಗೆಯೆ ಅಂತ...."

ಅವಳು ತಲೆಯೆತ್ತಿ ಮತ್ತೊಮ್ಮೆ ಅವನ ಕಡೆಗೆ ನೋಡಿ ನೋಟವನ್ನಿಳಿಸಿದಳು. ಹರ್ಷದ ಛಾಯೆ ಮುಖದ ಮೇಲೆ ಸುಳಿದು ಮಾಯವಾಯಿತು.

ಆದರೆ ಪ್ರಣಯಿಯ ಕಣ್ಣಿಗೆ ಹೆಚ್ಚೇನು ಬೇಕು ? ತುಂಬಿದ್ದ ಆವೇಶ ಹೊರ ಚಿಮ್ಮಿತು.

"ಒಪ್ಪಿಗೆ ಅಂತ ತಿಳಿದುಕೊಳ್ಳಲೆ–ನಿಜವಾಗಿ !"

"ಯಾಕೆ–ಆಶ್ಚರ್ಯ ?"

"ಓ .....ಏನು ಹೇಳಬೇಕು ಅಂತಲೇ ಗೊತ್ತಿಲ್ಲ ನಂಗೆ–ಅಷ್ಟು ತೃಪ್ತಿ, ಸಂತೋಷ.... ನೀವರೆ ! ... ಆಶ್ಚರ್ಯ ಯಾಕೆ ಅಂತ ಹೇಳಬೇಕೆ-ಎಷ್ಟೆಷ್ಟೋ ಆತಂಕ ಯೋಚಿಸಬಹುದಾದಾಗ ....."

"ಯಾವ ಯಾವ ನಷ್ಟ ಯೋಚಿಸಿಕೊಂಡು ಆತಂಕಪಡಲಿ–ನಂದೆಲ್ಲ ಲಾಭವೇ ಆಗಿರೋವಾಗ ? ಅದರ ಚಿಂತೆ ನಿಮಗಿರಬೇಕು."

"ಛಿ ! ಛಿ ! ಏನು ಮಾತು! ಆತಂಕವೆ! ನಾನೆಷ್ಟು ಸುಖಿಯಾಗಿದೀನಿ ಅನ್ನೋದನ್ನು ನಿಂಗೆ ಹೇಗೆ ತೋರಿಸಲಿ ?"

"ನಾನಂತೂ.... ಪುನರ್ಜನ್ಮ ಅಂದುಕೋತೀನಿ."

"ಅದು ಸರಿಯಲ್ಲ. ದೊಡ್ಡ ಮಾತು. ಬದಲಾವಣೆ ಅಂದುಕೊಳ್ಳೋಣ-ಇಬ್ಬರಿಗೂ."

ಕ್ಷಣಕಾಲ ಮಾತು ನಿಂತಿತು.

"ಇದಕ್ಕೆ ಬಾಕಿಯೋರದ್ದು-ತಂದೆ, ತಾಯಿ ಅವರ–ಒಪ್ಪಿಗೆ ಆಗಿದೆಯೆ ?.... ಆಗುತ್ತೆಯೆ ?" ಅವಳ ಅನುಮಾನ ಮುಂದೆ ಬಂದಿತು.

"ಅದು ನಂಗಿರಲಿ. ಆದರೆ ಸರಿಯೇ ಸರಿ. ಆಗದಿದ್ದರೂ...."

"ಹಾಗಲ್ಲ. ಮುಂದೆ ಕಷ್ಟಗಳು ಬಹಳ.... ನಿಮ್ಮ ಹೆಸರು, ಮನೆತನ.... ಎಲ್ಲ ಯೋಚಿಸಬೇಕು."

"ಹುಂ ! ಅದೆಲ್ಲ ಏನು ದೊಡ್ಡದು. ನೀನೊಬ್ಬಳಿದ್ದರೆ ಯಾವುದೂ ಕಷ್ಟವಲ್ಲ. ಎಲ್ಲ ನಿಭಾಯಿಸೋದು ಹೇಗೋ. ನಂಗಂತೂ ಹೆದರಿಕೆಯಿಲ್ಲ. ನೀನು ಇದನ್ನೆಲ್ಲ ಚೆನ್ನಾಗಿ ....."

"ಕೈ ಹಿಡಿದು ನಡೆಸೋರು ಇರುವಾಗ ಯಾವ ನೆಲವಾದರೇನು, ನಡೆಯೋದಕ್ಕೆ, ಯಾವ ಊರಿಯಾದರೇನು ಹಾಯೋದಕ್ಕೆ. ನನ್ನ ಯೋಚನೆ ನನಗಾಗಲ್ಲ."

"ಓ, ಅಷ್ಟು ಧೈರ್ಯಕೊಟ್ಟರೆ ಸಾಕು. ನನ್ನ ವಿಚಾರ ಬಿಡು."

ಮತ್ತೆ ಅರ್ಧಕ್ಷಣ ಮಾತಿಲ್ಲ.

"ಒಂದು ಮಾತು ಕೇಳೋದಿದೆ." ಅವಳು ಹೆದರುತ್ತ ಹೇಳಿದಳು.

"ಅ ! ಏನು ... ಅದು ?" ಆತಂಕದಿಂದ ಕೇಳಿದ.

"ನನ್ನ ವಿಷಯವೆಲ್ಲ ಚೆನ್ನಾಗಿ ತಿಳಿದಿದೆಯೋ ಅಥವ ಆತುರದಲ್ಲಿ....."

"ಹ್ಹ ! ಅಷ್ಟೇಯೆ ? ನಾನು ಏನೋ ಅಂತ ಬೆದರಿದೆ. ನೀನು ಕೇಳಲೇ ಬೇಕಾಗಿಲ್ಲ."

"ಅಲ್ಲ, ನನ್ನ ತಪ್ಪು....."

"ತಪ್ಪು ಅನ್ನೋದೆಲ್ಲ ತಿಳಿವಳಿಕೆ ಬಂದಮೇಲೇ, ಬೇರೆ ಅವಕಾಶ ಇರುವಾಗಲೇ ಮಾತ್ರ ಗಣನೆ–ಅದಕ್ಕೆ ಮುಂಚೆ ಅಲ್ಲ. ಆ ಯೋಚನೆ ನಿಂಗೆ ಬೇಡ."

"ಈ ದೊಡ್ಡ ಮನಸ್ಸಿನ ಮುಂದೆ ನಾನು ಧನ್ಯಳು ಅಂತ ಮಾತ್ರ ಹೇಳಬಲ್ಲೆ ಅಷ್ಟೆ."

"ಉಹುಂ, ಉಹುಂ. ಅಂಥ ರೂಢಿ ಮಾತೆಲ್ಲ ಯಾಕೆ–ನಮ್ಮಿಬ್ಬರಲ್ಲಿ. ನೀನು ಕೊಟ್ಟಿರೋ ಬೆಲೆ, ಮಾಡಿರೋ ಬಲಿದಾನ ನಂಗೆ ತಿಳಿಯದೆ ಇಲ್ಲ."

"ಅದು ಯಾವುದೂ ನಿಜವಲ್ಲ. ನಂದು ಕೇವಲ ಸ್ವಾರ್ಥ–ನಿಜವಾಗಿ."

"ಹ್ಹ ! ಇದಕ್ಕೆ ಯಾಕೆ ವಾಗ್ವಾದ–ಹಾಗೇ ಆಗಲಿ ತಪ್ಪೇನಿಲ್ಲ." ನಾಗ ರಾಜ ನಕ್ಕ. ಅವಳ ಮುಖದಲ್ಲೂ ಮುಗುಳುನಗೆ ಹಾಯ್ದಿತು.

ಈವರೆಗಾಗಲೇ ಯಾರೋ ಒಬ್ಬಿಬ್ಬರು ಬೀದಿಯಲ್ಲಿ ಅತ್ತಿತ್ತ ಹೋಗಿದ್ದುದು ಅವರ ಗಮನವನ್ನು ಅಷ್ಟಾಗಿ ಸೆಳೆದಿರಲಿಲ್ಲ. ಆದರೆ ಈಗ ಬೀದಿಯ ಕೊನೆಯಲ್ಲಿ ಕೋಲಾಹಲದ ಒಂದು ಗುಂಪೇ ಕಾಣಿಸಿಕೊಂಡುದುದು ಅವರನ್ನು ಎಚ್ಚರಿಸಿತು.

"ಮತ್ತೆ ಬರುತ್ತೀನಿ ಎಲ್ಲ ಸಿದ್ಧಮಾಡಿಕೊಂಡು. ಕಂಪನಿ ನಾಳೆ ಸಂಜೆ ಹೊರಡುತ್ತೆ, ಅಲ್ಲವೆ ?" ನಾಗರಾಜ ಹೆಜ್ಜೆ ಸಡಲಿಸುತ್ತ ಕೇಳಿದ.

"ಹುಂ." ಅವಳೂ ಹೆಜ್ಜೆ ಸರಿಸಿದಳು.

ರಾಜ ಕನಸಿನ ಮೇಲೆ ತೇಲುತ್ತ ಸರಸರನೆ ಹೊರಟುಹೋದ. ಅವಳು ಸ್ವಲ್ಪ ಹೊತ್ತು ಅವನ ಕಡೆಯೇ ನೋಡುತ್ತಿದ್ದಳು. ಅವನು ಒಂದು ಬಾರಿ ಹಿಂದಿರುಗಿದಾಗ ಬಾಗಿಲು ಮುಚ್ಚಿದ್ದಿತು.

ರಂಗನಾಯಕಿ ಮಂಚದ ಮೇಲೆ ಉರುಳಿಕೊಂಡಾಗ ಬಹುದೂರ ತೊಳಲಿ ಬಳಲಿ ನಡೆದಿದ್ದ ಯಾತ್ರಿಕ ತಂಗಿದಂತೆ ಅವಳ ತಳಮಳ ಕಳೆದು ಶಾಂತಿ ಮೂಡಿತ್ತು. ಹಾಗೆಯೇ ತಂಗಾಳಿಯಲೆಗಳು ಸೋಕಿದಂತೆ ಹೊಸ ಜೀವನದ ತೆರೆಗಳು ಕಣ್ಣಿನ ಮುಂದೆ ಸುಳಿಸುಳಿದು ಹೋಗುತ್ತಿದ್ದುವು. ಈ ದೃಶ್ಯಗಳ ಹಿಂಭಾಗದಲ್ಲಿ ಎಲ್ಲೋ ಕನಸಿನ ಕೂಗಿನಂತೆ ಬೀದಿಯಲ್ಲಿ ಹಲವು ಕೊರಳುಗಳ ಗೊಜಬಿಜಿ ಶಬ್ದ ಕೇಳಿತು. ಮಧ್ಯೆ ಕೆಲವು ಪುಂಡ ಭಂಡ ಮಾತುಗಳು ಅಸ್ಪಷ್ಟವಾಗಿ, ಗಹಗಹಿಸಿದ ನಗೆ ಆಗಾಗ. ಆದರೆ ಇವು ಅವಳು ಇಟ್ಟಿಗೆಯ ಮೇಲೆ ಇಟ್ಟಿಗೆಯನ್ನಿಟ್ಟು ಕಟ್ಟುತ್ತಿದ್ದ ಸುಂದರ ಸೌಧದ ಬೆಳ ವಣಿಗೆಗೆ ಅಡ್ಡಿ ಬರಲಿಲ್ಲ.

ಇದು ನಿಂತದ್ದು ಮತ್ತೊಮ್ಮೆ ಬಾಗಿಲಿನ ಶಬ್ದ ಕೇಳಿದಾಗಲೇ. ಆಗ ಅವಳಿಗೆ ಅತ್ಯಾಶ್ಚರ್ಯವಾಯಿತು. 'ಇದೇನು ಈಗಾಗಲೇ ಹಿಂದಿರುಗಿದರೇ ?' ಎಂದುಕೊಂಡಳು. ಆವೇಶ ನುಗ್ಗಿತು. ಆದರೆ ಮತ್ತೆ ಮತ್ತೆ ತಟ್ಟಿದ ಜೋರಿನಿಂದ ಶಾಮಣ್ಣನೇ ಬಂದಿರಬೇಕೆಂದು ಗೊತ್ತಾಗಿ ಅವಳ ಉತ್ಸಾಹ ಇಳಿಯಿತು. ಬಾಗಿಲನ್ನು ತೆರೆದ ಕೂಡಲೆ ಶಾಮಣ್ಣ ಕೂಗಾಡುತ್ತಲೇ ಪ್ರವೇಶಿಸಿದ.

"ನೋಡು, ಏನು ಗತಿಯಾಗಿದೆ–ನೀನು ಸ್ವಲ್ಪ ಮನಸ್ಸು ಮಾಡದೆ. ನಾಟಕಮಂದಿರ ಪುಂಡರ ಪಾಳ್ಯ ಆಗಿದೆ. ಎಂದೂ ಇಲ್ಲದಷ್ಟು ದುಡ್ಡು ಬಂದಿತ್ತು. ಈಗ ಅರ್ಧ ಮುಕ್ಕಾಲೆಲ್ಲ ಹೋಗುತ್ತಿದೆ. ಈಗಲಾದರೂ ನೀನು ಬಂದು ರಂಗದ ಮೇಲೆ ಸುಳಿದಾಡಿದರೆ ಸಾಕು. ಎಲ್ಲರೂ ಹಿಂತಿರಿಗಿ ಬರು ತ್ತಾರೆ. ಬಾ, ರಂಗು. ಹಟ ಮಾಡಬೇಡ," ಒಳಗಡೆಗೆ ಸರಿಯುತ್ತಿದ್ದವಳನ್ನು ಹಿಂಬಾಲಿಸುತ್ತ ಹೇಳಿದ. ಅವಳು ಹಜಾರದ ಬೆಂಚಿನ ಮೇಲೆ ಕುಳಿತಳು. ಅವನೂ ಪಕ್ಕದಲ್ಲಿ ಕುಕ್ಕರಿಸಿಕೊಂಡ.

"ಸಾಧ್ಯವಾಗಿದ್ದರೆ ಬರ್ತಾ ಇರಲಿಲ್ಲವೇನಪ್ಪ? ನಿನ್ನ ಕಷ್ಟ ನಷ್ಟ ನಂಗೆ ತಿಳಿದಿಲ್ಲವೆ? ನನ್ನ ಸ್ಥಿತಿಯಲ್ಲಿ ಪಾತ್ರ ವಹಿಸಿದರೆ ಖಂಡಿತವಾಗಿ ತೊಪ್ಪೆ ಎಸೀ ತಾರೆ. ಕಂಪನಿ ಹೆಸರು ಕೆಟ್ಟು ಹೋಗುತ್ತೆ."

"ಈಗಾಗಲೇ ಕೆಡುತ್ತ ಬಂದಿದೆ. ನಿನ್ನೆಯಿಂದ ನಿಂಗೇನಾಗಿದೆ–ಅದನ್ನಾ

ದರೂ ಹೇಳಬಾರದೆ? ಇನ್ನೆಷ್ಟು ದಿನ ಹೀಗೆ? ಹೋದ ಕಡೇಲೆಲ್ಲ ಏನಾದರೂ ಹೀಗೇ ಆದರೆ ಏನು ಗತಿ ಅಂತ ಭಯವಾಗುತ್ತೆ."

"ಅಪ್ಪ, ನಿಜ ಹೇಳಿಬಿಡುತ್ತೀನಿ. ಇನ್ನು ನನ್ನ ನೆಚ್ಚಿಕೋಬೇಡ. ಬೇರೆ ಯಾರನ್ನಾದರೂ ತಯಾರು...."

"ರಂಗು! ಇದೇನು ಹುಚ್ಚುಗಿಚ್ಚು ಹಿಡಿದಿದೆಯೋ ? ಇದೇನು ಯೋಚನೆ !"

"ಇಲ್ಲ, ಸರಿಯಾಗೇ ಹೇಳ್ತಾ ಇದೀನಿ. ನಾಟಕ ಜೀವನ ಸಾಕಾಯ್ತು."

"ಸಾಕಾಯ್ತು ! ಇನ್ನೇನು ಮಾಡ್ತಿ ? ಏನೋ ದೊಡ್ಡ ಅವಿವೇಕವೇ ಇರಬೇಕು ಅಂತ ನಿನ್ನೆಯೇ ಅಂದುಕೊಂಡೆ. ನೀನು ಎಂದೂ ಹಾಗೆ, ಯಂತ್ರದ ಹಾಗೆ, ಪಾರ್ಟು ಮಾಡಿದೋಳಲ್ಲ–ರಂಗಕ್ಕೆ ಕಾಲಿಟ್ಟ ಗಳಿಗೆಯಿಂದ. ಈಗ ನೋಡಿದರೆ ನಾನು ಎಣಿಸಿದ್ದಕ್ಕಿಂತ ಕ್ರೂರವಾಗಿದೆ ಜಾಡ್ಯ ಅನ್ನಿಸುತ್ತೆ. ಹಾಗಾದರೇನು ಯಾರ ಬಲೇಲೋ ಬಿದ್ದಿರ್ತೀಯ ?"

"ಅದೇನೋ, ಅಂತೂ ಬದಲಾವಣೆಗೆ ಮನಸ್ಸು ಮಾಡಿದೀನಿ."

"ಅಯ್ಯೊ ರಂಗು! ಹುಚ್ಚಿ! ನಿಂಗೆ ಸ್ವಲ್ಪವೂ ತಿಳಿವಳಿಕೆ ಇಲ್ಲ. ಅವರೆಲ್ಲ ಇವತ್ತು ಚೆನ್ನಾಗಿರ್ತಾರೆ. ನಾಳೆ ಹೊಸ ಬೇಟೆ ಹುಡುಕುತ್ತಾರೆ. ಅವರನ್ನು ನಂಬಿಕೋಬೇಡ."

"ಅದು ನಂಗಿರಲಿ, ಬಿಡಪ್ಪ."

"ಆ ! ಈ ದಿನ ನೀನು ದೊಡ್ಡೋಳು ಆದ ಹಾಗಿದೆ. ಈ ದಿನದವರೆಗೂ ಹೀಗೆ ಆಡಿರಲಿಲ್ಲ."

"ಆಡ್ತಾ ಇರಲಿಲ್ಲ, ನಿಜ. ಆದರೆ ಅನುಭವಿಸ್ತಾ ಇದ್ದೆ–ಹೆಣ್ಣಿನ ಆಸೆ ಗಳನ್ನೆಲ್ಲ ಹುದುಗಿಟ್ಟು."

"ಛಿ! ಛಿ! ನಿಂಗೆ ಖಂಡಿತವಾಗಿಯೂ ಬುದ್ಧಿಯಿಲ್ಲ. ಅದೇ ಮಕ್ಕಳಾಸೆ ತಾನೆ? ಎಷ್ಟೋ ಸಾರಿ ಚರ್ಚಿಸಿ ಆಗಿದೆಯಲ್ಲ. ನಿಮ್ಮಮ್ಮ ಹೀಗೇ ಹಟ ಹಿಡಿದು ನಿನ್ನ ನನ್ನ ಕೈಯಲ್ಲಿಟ್ಟು ಹೋದಳು. ಎಂಥ ನಟಿ! ಎಷ್ಟು ನಷ್ಟ!"

"ಅಪ್ಪ, ಆ ಮಾತೆಲ್ಲ ಯಾಕೆ ಮತ್ತೆ ಮತ್ತೆ ? ಹೆಣ್ಣಿಗೆ ಮನೆಯೂ ಮಕ್ಕಳೂ ಬೇಕು. ಏನೇನೋ ಆಸೆ ಇರುತ್ತೆ. ಅವಳೇನು ಯಂತ್ರ

ವಲ್ಲ. ಗೊಂಬೆಯೂ ಅಲ್ಲ. ಬಾಳಲ್ಲೆಲ್ಲ ವೇಷ ಧರಿಸಿಕೊಂಡಿರೋದೂ ಸಾಧ್ಯವಿಲ್ಲ, ಸರಿಯೂ ಅಲ್ಲ—ಯಾರಿಗೂ."

"ಅಯ್ಯೊ ರಂಗು, ಅದೆಲ್ಲ ಮನೆಯ ಹೆಣ್ಣುಗಳಿಗೆ-ಹೆಗ್ಗಣಗಳಿಗೆ, ಬೇರೆ ದಾರಿಯಿಲ್ಲದ ಗುಗ್ಗುಗಳಿಗೆ. ನೀನು ಅಂದರೆ ಹುಟ್ಟುನಟಿ—ನಿಮ್ಮ ಅಮ್ಮನ ಹಾಗೆ. ಅಭಿನಯ ನಿನ್ನ ರಕ್ತದಲ್ಲಿ ಹರೀತಾ ಇದೆ—ಇರುತ್ತೆ. ಅದನ್ನು ಹೇಗೆ ತಪ್ಪಿಸಿಕೊಳ್ಳಬಲ್ಲೆ ? ಇವತ್ತಲ್ಲ ನಾಳೆ ಕರೆದೇ ಕರೆಯುತ್ತೆ."

"ಆಗ ನೋಡೋಣ. ಆಗಿನ ಕರೆಗೆ ಆಗ ; ಈಗಿನ ಕರೆಗೆ ಈಗ."

ಸ್ವಲ್ಪ ಹೊತ್ತು ಮಾತು ಮುಂದುವರೆಯಲಿಲ್ಲ.

"ಹುಂ! ಅಂತೂ ನೀನು ಇಂಥ ಮೂರ್ಖಳು ಅಂದುಕೊಂಡಿರಲಿಲ್ಲ. ಈ ಹೆಸರು, ಈ ಬೆಳಕು, ಈ ಹಣ, ಈ ಸ್ವತಂತ್ರ-ಇವನ್ನೆಲ್ಲ ಬಿಡ್ತೀಯಲ್ಲ—ಯಾತಕ್ಕಾಗಿ ? ಎಲ್ಲೋ ಕತ್ತಲೆಯಲ್ಲಿ ಅನಾಮಧೇಯಳಾಗಿ, ಪ್ರಾಯಶಃ ಕಾರ್ಪಣ್ಯದಲ್ಲಿ ಯಾವನಿಗೋ ಗುಲಾಮಳಾಗಿರೋದಕ್ಕೆ." ಶಾಮಣ್ಣ ಕಹಿಯಾಗಿ ಹೇಳಿದ.

"ಗೃಹಿಣಿಯ ಜೀವನ ಗುಲಾಮಗಿರಿಯಲ್ಲ. ಗೌರವದ ಬಾಳು. ಮನೆಯ ರಾಣಿ."

"ಇಲ್ಲಿ ಲಕ್ಷಾಂತರ ಜನರ ರಾಣಿಯ ಹಾಗಿರೋದು ಬಿಟ್ಟು."

"ಯಾಕಪ್ಪ ಈ ಚರ್ಚೆ. ಬೆಟ್ಟದಷ್ಟು ನಟನೆ ಸಾಸಿವೆಯಷ್ಟು ನಿಜಕ್ಕೆ ಸರಿಯಾದೀತೆ ? ಇದೆಲ್ಲ ಅರ್ಥವಿಲ್ಲದ ಆವೇಶ. ಈ ಗಾಳಿಯ ಬಾಳು ಬಿಟ್ಟು ಭೂಮಿಗೆ ಇಳಿಯಬೇಕು ಅನ್ನಿಸಿದೆ. ಚೆನ್ನಾಗಿ ಯೋಚಿಸಿ ನಿರ್ಧರಿಸಿದೀನಿ."

"ನಿರ್ಧರಿಸಿಬಿಟ್ಟಿದೀಯ ? ಬದಲಾಯಿಸೋ ಹಾಗೇ ಇಲ್ಲವೆ ? ನನ್ನ ಮಾತು-ನಿನ್ನ ತಾಯಿ ತಂದೆ ಎರಡೂ ಆಗಿ ಪ್ರೇಮ ಎರೆದು ಬೆಳೆಸಿ,ಕಲಿಸಿ—ಈ ನಿನ್ನ ಖ್ಯಾತಿಗೆ ದಾರಿಮಾಡಿದವನ ಮಾತು, ನಿನ್ನ ಹಿತೈಷಿಯ ಮಾತು, ಎಲ್ಲ ವ್ಯರ್ಥವೆ ? ಹಾಗೆ ಹಟ ಮಾಡಬೇಡ ಮಗು...." ಶಾಮಣ್ಣ ಸ್ವಲ್ಪ ಸುಮ್ಮನಾದ. ಅವಳು ಉತ್ತರವನ್ನು ಕೊಡಲಿಲ್ಲ. ಆದರೆ ಈ ಮೌನದ ಅರ್ಥ ಅವನಿಗೆ ಗೊತ್ತು.

"ರಂಗು, ನಮ್ಮನ್ನು ಬಿಡಬೇಡ-ಈ ಬಳಗ, ನಾನು...." ಈಗ ಅವನ ಧ್ವನಿ ನಡುಗುತ್ತಿತ್ತು. ಅವನು ಅಂಗಲಾಚುತ್ತಿದ್ದ.

"ಅಪ್ಪ, ಬಳಗವನ್ನು ನಾನು ಚೆನ್ನಾಗಿ ಬಲ್ಲೆ. ಬಿಡೋದಕ್ಕೆ ಏನೇನೂ ವ್ಯಸನವಿಲ್ಲ. ನೀನೂ ನನ್ನ ಜೊತೆ ಬಂದುಬಿಡು." ಅವಳು ಅವನಿಗಾಗಿ ಕರಗಿದಳು.

ಅವನು ಕೈ ಮೇಲೆ ತಲೆಯಿಟ್ಟು ತೀಕ್ಷ್ಣವಾಗಿ ಬಹಳ ಹೊತ್ತು ಯೋಚಿಸಿದ.

"ಇಲ್ಲ ಮಗು, ನಾನು ಬರೋದಿಲ್ಲ. ನಾಟಕವೇ ನನ್ನ ಬಾಳು. ಅದೇ ನನ್ನನ್ನು ಈವರೆಗೆ ಕಾಪಾಡಿದೆ. ಅದಕ್ಕೆ ದ್ರೋಹ ಮಾಡೋದಿಲ್ಲ. ಇದರಲ್ಲೇ ಉಳೀತೀನಿ....ಅಳೀತೀನಿ. ನಿನ್ನಿಂದ ಅಗಲಬೇಕಾದರೂ ಸರಿ. ಉಹುಂ, ಬಿಡೋದಿಲ್ಲ.....ಬರೋದಿಲ್ಲ. ಇದೇ ಹೋರಾಟ ಒದ್ದಾಟ ನೀನಿದ್ದರೂ ಬಿಟ್ಟರೂ— ಹುಂ," ಅವನು ನಿಧಾನವಾಗಿ ತಡೆ ತಡೆದು ಹೇಳಿದ. ಸಾಮಾನ್ಯವಾಗಿ ಕಠಿಣವಾಗಿದ್ದ ಅವನ ಮುಖ ಸಪ್ಪೆಯಾಯಿತು, ಮೃದುವಾಯಿತು. ಚಿಂತೆಯ ಮುದ್ರೆ ಆವರಿಸಿತು. ನಟ್ಟ ನೋಟ ಎಲ್ಲಿಗೋ ತಿರುಗಿತ್ತು, ಖಾಲಿಯಾಗಿ. ಕಣ್ಣುಗಳು ಒದ್ದೆಯೂ ಆದುವು. ಆದರೆ ತನ್ನ ದೌರ್ಬಲ್ಯವನ್ನು ತೋರಿಸಿಕೊಳ್ಳಲು ಇಷ್ಟಪಡದೆ ದೊಡ್ಡ ಪ್ರಯತ್ನಮಾಡಿ "ಹಾಗಾದರೆ ಈ ನಿರ್ಧಾರವೇ ಕಡೇದೋ ? ಎಂದು ಅಸ್ಪಷ್ಟವಾಗಿ ಗಂಟಲಿನಿಂದಲೇ ಕೇಳಿದ.

"ನಂಗೆ ಇದೊಂದು ಅವಕಾಶ ಬೇಕಪ್ಪ. ಇದರಿಂದ ನಿಂಗೆ ಎಷ್ಟು ನೋವಾಗುತ್ತೆ ಅಂತ ಗೊತ್ತು. ನಂಗಾದರೂ ಸ್ವಲ್ಪವಲ್ಲ." ಅವಳು ತಪ್ಪಿತಸ್ಥಳಂತೆ ಕತ್ತೆತ್ತದೆ ಹೇಳಿದಳು.

ಕೊಂಚ ಕಾಲ ಮೌನ ನೆಲೆಸಿತ್ತು. ಇಬ್ಬರಲ್ಲಿಯೂ ಒಳಗೊಳಗೇ ಹೋರಾಟ ಇನ್ನೂ ನಡೆಯುತ್ತಿತ್ತು. ಒಂದು ಸ್ಥಿಮಿತಕ್ಕೆ ಬರಲು ಒದ್ದಾಡುತ್ತಿದ್ದರು.

"ಹುಂ, ಅದೆಲ್ಲ ಹೋಗಲಿ. ಇವನು ಯಾರು-ನೀನು ಆರಿಸಿಕೊಂಡಿರೋದು ?"

"ರಾಮುಸೆಟ್ಟರ....."

"ಏನು, ನಾಗರಾಜನೆ ? [ಅ ? ಅವನಿಗೂ ನಿನಗೂ ಪರಿಚಯ ಇದೆ ಅಂತಲೇ ನನಗೆ ಗೊತ್ತಿರಲಿಲ್ಲ.... ವಿಚಿತ್ರ— ಹುಂ. ಅವನೇನೋ ಒಳ್ಳೆಯೋನ

ಹಾಗೆ ಕಾಣ್ತಾನೆ. ಆದರೆ ಅವನ ಮನೆಯೋರು—ಅಂಥ ಮನೆತನಸ್ಥರು ಒಪ್ಪಿಕೊಂಡಿದಾರೇ ?" ಅವನು ಅನುಮಾನಿಸುತ್ತ ಕೇಳಿದ.

"ಗೊತ್ತಿಲ್ಲ." ಅವಳನ್ನೂ ಈ ಯೋಚನೆ ಬಾಧಿಸುತ್ತಿತ್ತು.

"ಮತ್ತೆ ನಂಗೇಕೋ ಸಂಶಯ....ಹುಂ. ನೋಡೋಣ. ಇಲ್ಲದೆ ಇದ್ದರೆ ಏನೇನಾಗುತ್ತೋ, ಎಷ್ಟೆಷ್ಟು ಕಷ್ಟಪಡಬೇಕಾಗುತ್ತೋ—ಅವನ ಮನಸ್ಸು ಹಾಗೇ ಇದ್ದರೂ." ಅವನು ತನ್ನಷ್ಟಕ್ಕೇ ಹೇಳಿಕೊಂಡ.

ಇನ್ನೂ ಸ್ವಲ್ಪ ಹೊತ್ತು ಮಾತಿಲ್ಲ.

"ಅಂತೂ ಆತುರಪಡಬೇಡ, ಮಗು. ಚೆನ್ನಾಗಿ ಯೋಚಿಸು. ನಂಗೇನೋ ನೀನು ಕತ್ತಲೇಲಿ ಧುಮುಕುತ್ತಿದೀಯೋ ಏನೋ ಅನ್ನಿಸುತ್ತೆ. ನಿನ್ನ ಚಟುವಟಿಕೆಗೆ ಶಕ್ತಿಗಳಿಗೆ ಯಾವುದೊಂದು ಸಣ್ಣ ಸಂಸಾರವೂ ಸಾಲದು ಅನ್ನಿಸುತ್ತೆ. ಈ ನಿರ್ಧರಕ್ಕಾಗಿ ಮುಂದೆ ವ್ಯಥೆಪಡಬೇಕಾದೀತು...."

ಅವಳೇನನ್ನೂ ಹೇಳಲಿಲ್ಲ. ಅವನೇ ಮತ್ತೆ "ಹುಂ, ಇನ್ನು ನಾನು ಇಲ್ಲಿದ್ದು ಪ್ರಯೋಜನವಿಲ್ಲವಲ್ಲ, ಅಲ್ಲವೆ ?" ಎಂದು ಸ್ವಲ್ಪ ತಡೆದು ಆಶಾ ಭಂಗದಿಂದ ಹೊರಟುಹೋದ. ಅವಳು ಅಲ್ಲಿಯೇ ಚಿತ್ರದಂತೆ ಕುಳಿತಿದ್ದು ಆಸೆ ಭಯಗಳ ಇಕ್ಕಳಕ್ಕೆ ಸಿಕ್ಕಿದ್ದಳು. ಕಟ್ಟಡದ ಒಂದು ಭಾಗ ಎದ್ದಂತೆ ಇನ್ನೊಂದು ಕುಸಿದು ಬೀಳುತ್ತಿತ್ತು. ನಾಗರಾಜನ ಬರವನ್ನು ಅತ್ಯಾತುರ ದಿಂದ ನಿರೀಕ್ಷಿಸುತ್ತಿದ್ದಳು.

ಇದೇ ಸಮಯದಲ್ಲಿ ನಾಗರಾಜ ತಂದೆ ತಾಯಿಗಳ ಮೇಲೆ ದೊಡ್ಡ ಬಾಂಬನ್ನೇ ಎಸೆದಿದ್ದ. ಊರಲ್ಲೆಲ್ಲ ಅತ್ಯಂತ ಧನಿಕರಾದ, ಶ್ರೇಷ್ಠ ವಂಶಸ್ಥ ರಾದ ರಾಮಸೆಟ್ಟರೇ ಈ ಹುಡುಗಬುದ್ಧಿಗೆ ಒಪ್ಪುವರು ? ಪ್ರಸ್ತಾಪದ ಸಿಡಿತದಿಂದ ಎಚ್ಚೆತ್ತುಕೊಂಡ ಕೂಡಲೆ "ಇದೇನು ಭ್ರಾಂತಿ. ತೀರ ಅವಿವೇಕದ ಮೇರೆ. ನಾನೆಂದಿಗಾದರೂ ಇದಕ್ಕೆ ಮನಸ್ಸು ಕೊಟ್ಟೇನೆ— ಒಪ್ಪುವುದಿರಲಿ. ಸಲ್ಲದ ಮಾತು. ಇದರ ಯೋಚನೆಯೇ ಆಗದು— ಖಂಡಿತವಾಗಿ," ಎಂದು ಸ್ಪಷ್ಟವಾಗಿ ನಿಷ್ಠುರವಾಗಿ ಹೇಳಿಬಿಟ್ಟರು. ತಾಯಿ ಚೇತರಿಸಿಕೊ[illegible]ಷ್ಟೋ ಹೊತ್ತಾದ ಮೇಲೆ. ಈ ಮಧ್ಯೆ ತಂದೆ ಮಕ್ಕಳ ಮಧ್ಯೆ ವಾಗ್ಯುದ್ಧವೇ ನಡೆಯಿತು. ತಂದೆಯವರ ಬತ್ತಳಿಕೆಯಿಂದ ಕ್ರಮ ವಾಗಿ ವಂಶಾಸ್ತ್ರ, ಐಶ್ವರ್ಯಾಸ್ತ್ರ, ಮಾನಾಸ್ತ್ರ, ಪಿತೃ ಸ್ವರ್ಗಾಸ್ತ್ರ ಮೊದಲಾಗಿ

ಒಂದೊಂದೇ ಇಂತಹ ಸಂದರ್ಭದಲ್ಲಿ ಮಾಮೂಲಾದ ನೂರಾರು ಪುಂಖಾನು ಪುಂಖವಾಗಿ ಹೊರಟವು. ಆದರೆ ಅವಕ್ಕೆಲ್ಲ ಮಗನದು ಒಂದೇ ಅಸ್ತ್ರ- ಇಷ್ಟ ಬ್ರಹ್ಮಾಸ್ತ್ರ. ಹಿರಿಯರು ಈ ಕೀಳು ಸಂಪರ್ಕದಿಂದಾಗುವ ಕಷ್ಟ ನಷ್ಟಗಳನ್ನು ಭಯವಾಗುವಂತೆ, ಮನಕರಗುವಂತ ಹಾಡಿ ಹಾಡಿ ಬಣ್ಣಿಸಿ ಹುಡುಗುತನದ ಹುಚ್ಚು ಸಾಕೆಂದರೆ ಅವನು ಅದೇ ಸಂಬಂಧಕ್ಕಾಗಿ ತನ್ನ ಬಾಳನ್ನೇ ಒತ್ತೆ ಇಡಲು ಸಿದ್ಧನೆಂದೂ. ತನ್ನ ಪಟ್ಟನ್ನು ಸಡಲಿಸುವುದಿಲ್ಲ ವೆಂದೂ ಹಟ ಹಿಡಿದ. ಅವರ ಮಧ್ಯೆ ಬಹಳ ಕಾಲ ಘೋರವಾದ ಯುದ್ಧ ನಡೆಯಿತು. ಮಧ್ಯೆ ಮಧ್ಯೆ ತಾಯಿ ಮಾಡಿದ ಸಂಧಾನ ಯತ್ನಗಳೆಲ್ಲ ವಿಫಲವಾದುವು. ಆಕೆಯ ಕೋಡಿ ಕಣ್ಣೀರು ಪರಿಣಾಮಕಾರಿಯಾಗಲಿಲ್ಲ. ತಂದೆಗೆ ವಿಷಯ ಒಗ್ಗಲಿಲ್ಲ; ಮಗ ತಂದೆಗೆ ಬಗ್ಗಲಿಲ್ಲ. ಗಾಳಿ, ಗುಡುಗು, ಸಿಡಿಲು ಮಳೆಯ ಮುಂಗಾರು ಮಧ್ಯ ರಾತ್ರಿಯಾದ ಮೇಲೆ ಒಂದು ಹಂತಕ್ಕೆ ಬಂದಾಗ ತಂದೆ "ನಿನ್ನ ಹಟವನ್ನೇ ಸಾಧಿಸಿಕೊಂಡರೆ ನೀನು ಮಗನೂ ಅಲ್ಲ, ನಾನು ತಂದೆಯೂ ಅಲ್ಲ. ನಮ್ಮ ಸಂಬಂಧ ಅಂದಿಗೆ ಕತ್ತರಿಸಿಹೋಯ್ತು ಅಂದುಕೊ. ನಂದೆಲ್ಲ ಸ್ವಯಾರ್ಜಿತದ ಆಸ್ತಿ. ಮನಸ್ಸಿನಲ್ಲಿರಲಿ," ಎಂದರು. ಅವನು "ನಾನು ಆಸ್ತಿಪಾಸ್ತಿಗೆ ಆಸೆ ಪಡೋದಿಲ್ಲ. ನನ್ನ ಅನ್ನವನ್ನು ನಾನು ದುಡಿದುಕೊಳ್ಳಬಲ್ಲೆ," ಎಂದು ಒರಟಾಗಿಯೇ ಹೇಳಿ ಮುಗಿಸಿದ. ತಾಯಿ "ಹೀಗೆಲ್ಲಾದರೂ ಉಂಟೆ. ಇಂಥ ಸಂಬಂಧ ಅಂದರೇನು. ಅದಕ್ಕಾಗಿ ನಾವು ನಾವು ತೊರೆಯೋದು ಅಂದರೇನು. ಸ್ವಲ್ಪ ವಿವೇಕವಾಗಿ ತೀರ್ಮಾ ನಿಸಬಾರದೆ," ಎಂದ ಪ್ರಲಾಪವನ್ನು ಅವರಿಬ್ಬರೂ ಕಿವಿಯಮೇಲೆಯೇ ಹಾಕಿಕೊಳ್ಳಲಿಲ್ಲ.

ಆ ರಾತ್ರಿ ಊಟದ ಕಟ್ಟಳೆಯ ಯೋಚನೆಯೇ ಯಾರಿಗೂ ಹುಟ್ಟಲಿಲ್ಲ. ಮಲಗಲು ಹೋದದ್ದೇನೋ ನಿಜ. ಆದರೆ ತಂದೆ 'ಉಸ್ ಉಸ್' ಎನ್ನುತ್ತ ಕ್ಷಣ ಕ್ಷಣಕ್ಕೂ ಹೊರಳಾಡುತ್ತಿದ್ದರು. ಮಗ ಬಿರಿಗಣ್ಣು ಬಿಟ್ಟುಕೊಂಡು ಚಾವಣಿಯನ್ನು ನೋಡುತ್ತಿದ್ದ. ತಾಯಿ ಕುಳಿತೇ ತಮ್ಮ ಗುಳುಗುಳು ಗೋಳಿನ ತಪಸ್ಸನ್ನು ಮುಂದುವರಿಸಿದರು. ಬೆಳಗು ಬಿಕ್ಕಟ್ಟಿನಲ್ಲಿ ಯಾವ ಬದಲಾವಣೆಯನ್ನೂ ಮಾಡಲಿಲ್ಲ. ತಂದೆ ಮಕ್ಕಳು ಮಾತಾಡಲೇ ಇಲ್ಲ. ತಾಯಿ ಮಗನಿಗೆ "ಅಪ್ಪ, ಹೀಗೆ ಮಾಡಬೇಡ. ಅವರು ಹಟವಾದಿ,

ಮುರಿದಾರೇ ಹೊರತು ಬಗ್ಗುವರಲ್ಲ. ನಿನ್ನ ತೊರೆದು ನಮ್ಮದೆಂಥ ಬಾಳು. ಈ ಕೊರಗಿನಲ್ಲಿ ನಾವು ಎಷ್ಟುಕಾಲ ಇರಬಹುದು," ಎಂದು ಅಂಗಲಾಚಿದರು. ಅವನು "ಅಮ್ಮ, ಆದಕ್ಕೆ ನಾನು ಇಷ್ಟಪಡುತ್ತೀನೇ? ನಂಗೂ ಅಷ್ಟೇ ಕಷ್ಟವಲ್ಲವೆ? ಆದರೆ ಈ ವಿಷಯದಲ್ಲಿ ತಪ್ಪೇನೂ ಇಲ್ಲ. ನಮ್ಮದು ಉತ್ತಮ ವರ್ಗದವರ ಮಂಜು ದೃಷ್ಟಿ. ನ್ಯಾಯಾನ್ಯಾಯ ಚೆನ್ನಾಗಿ ಕಾಣಿಸೋದಿಲ್ಲ. ರೂಢಿಯಲ್ಲಿಲ್ಲದ್ದೆಲ್ಲ ವಿಚಿತ್ರವಾಗಿ ಹೀನಾಯವಾಗಿ ಕಾಣಿಸುತ್ತೆ. ನಂಗಂತೂ ಅವಳನ್ನು ಕಳೆದುಕೊಂಡರೆ ಎಳ್ಳಷ್ಟೂ ಸುಖವಿರೋದಿಲ್ಲ ಬಾಳಿನಲ್ಲಿ ಇದು ನಿಮಗಾದರೂ ಇಷ್ಟವೆ? ನಿಮಗೆ ಒಂದು ಕೊರಗು ಹೋಗಿ ಇನ್ನೊಂದು ಅಂಟಿಕೊಳ್ಳುತ್ತೆ, ಅಷ್ಟೆ. ಖಂಡಿತ. ಏನು ಪ್ರಯೋಜನ? ಅವಳನ್ನು ಬಿಟ್ಟರೆ ಅವಳನ್ನೂ ನನ್ನೂ ಇಬ್ಬರನ್ನೂ ವಂಚಿಸಿದಹಾಗಾಗುತ್ತೆ. ಈಗ ಧರ್ಮವೂ ಅಲ್ಲ. ಪರಿಣಾಮ ಯಾರಿಗೂ ಹಿತವಾಗೋದಿಲ್ಲ. ನಾನು ಬಲ್ಲೆ. ಒತ್ತಾಯ ಮಾಡಬೇಡ ಅಮ್ಮ," ಎಂದ. ಗಂಡನೊಡನೆ "ಅಯ್ಯೋ, ಅವನ ಸುಖಕ್ಕಿಂತ ನಮಗೆ ಇನ್ನು ಯಾವುದು ಹೆಚ್ಚು? ಅದಕ್ಕೆ ಭಂಗ ತಂದು ನಾವೇನು ಸುಖ ಉಂಡೇವು? ಅವಿವೇಕದ ವಿಷಯ; ನಂಗೂ ಗೊತ್ತು. ಆಚಾರವಂತೂ ಹೇಳೋಹಾಗೇ ಇಲ್ಲ. ನಾವು ಹೇಳಿದ್ದೆಲ್ಲ ಹಾಳಾಯ್ತಲ್ಲ. ಅವನಿಗೆ ತಿಳೀದೇ ಏನಿಲ್ಲ. ಇನ್ನು ಅವನಿಷ್ಟ ಬಂದಹಾಗೆ ಮಾಡಿದರೆ ನಾವೇನು ಮಾಡೋದಕ್ಕೆ ಸಾಧ್ಯವಾಗುತ್ತೆ? ನಮ್ಮದೇನು ತಪ್ಪು. ಹಾಗೆ ಅಂತ ಅವನ ಹಾಗೇ ನಾವೂ ಹಟಹಿಡಿಯೋದೆ? ಎಲ್ಲಾದರೂ ಸುಖವಾಗಿರಲಿ. ತೊರೆಯೋದು ಸಂಬಂಧ ಬಿಡೋದು ಆ ಮಾತುಗಳು ಬೇಡ. ಸಮಾಧಾನವಾಗಿದ್ದುಬಿಡೋಣ," ಎಂದು ಹೇಳಿದಾಗ ಆತ ಉರಿದೆದ್ದು "ಏನಂದೆ–ನಮ್ಮ ಹೊಟ್ಟೇಲಿ ಹುಟ್ಟಿ ನಮ್ಮ ಮಾತು ಕೇಳೋದಿಲ್ಲವೆ? ಯಾರಿಗೋಸ್ಕರ ಹೇಳ್ತೀವಿ ಅನ್ನೋ ಜ್ಞಾನ ಅವನಿಗೆ ಬೇಡವೆ? ಈ ಸೂಳೆ ಸಂಬಂಧಕ್ಕೆ ಒಪ್ಪಿಕೊಂಡು ಪಿತೃಗಳಿಗೆಲ್ಲ ಅನ್ಯಾಯಮಾಡಿ ಸುಮ್ಮನಿರಲೆ? ಊರಿಗೇ ಗಣ್ಯರಾದೋರು ನಾವು ಕುಲ ಕೆಡಿಸಿಕೊಂಡು ಹೇಗೆ ಮುಖ ತೋರಿ[illegible] ಚೆನ್ನಾಗಿ [illegible] ಸಮಾಧಾನವಾಗಿರೋದಂತೆ! ನಿಂಗೆ ತಿಳೀದು. ಈ ಮಾತಿಗೆ ಬರಬೇಡ. ಏನೇ ಆದರೂ ನಾವಂತೂ ಇದಕ್ಕೆ ಒಪ್ಪೋ ಹಾಗೂ ಇಲ್ಲ, ಆ ಸಂಬಂಧ ಇಟ್ಕೊಳ್ಳೋ ಹಾಗೂ ಇಲ್ಲ.

ಅದೇ ಕಡೆಯ ತೀರ್ಮಾನ," ಎಂದು ಗರ್ಜಿಸಿದರು. ಗಂಡನಿಗೆ ಅರ್ಧ ಮಗ ನಿಗೆ ಅರ್ಧ ಹಂಚಿಕೊಂಡಿದ್ದ ಹೆಣ್ಣುಜೀವ ಗರಗಸದಿಂದ ಕುಯ್ಯಿಸಿ ಕೊಂಡ ದೇಹದಂತೆ ಒದ್ದಾಡಿತು.

ಗಳಿಗೆ ಗಳಿಗೆಯನ್ನು ಲೆಕ್ಕಹಾಕುತ್ತ ನಾಗರಾಜನಿಗಾಗಿಯೇ ಕಾಯು ತ್ತಿದ್ದ ರಂಗನಾಯಕಿ ಮಾರನೆಯ ದಿನ ಅವನ ಮುಖವನ್ನು ಕಂಡು ಬೆದರಿ ದಳು. ಈಗಾಗಲೇ ಶಾಮಣ್ಣ ಹುಟ್ಟಿಹಾಕಿದ್ದ ಭಯ ಬೇರುಬಿಟ್ಟಿದ್ದು ಅವಳು ನಾಗರಾಜನ ಇಳಿದ ಮುಖದ ಕಾರಣವನ್ನು ಊಹಿಸಿದಳು. ಇದರ ಪರಿಣಾಮವೇನೋ ಎಂದು ಅವಳ ಎದೆ ಇಳಿಯಿತು. ಅವನು ಕಲೆಯಿಲ್ಲದೆ ನೇರವಾಗಿ ನಡೆದ ಸಂಗತಿಯನ್ನೆಲ್ಲ ವರದಿಮಾಡಿದ. ಅವಳು ತುಟಿ ಎರಡು ಮಾಡದೆ ಕೇಳಿದಳು.

" ನೋಡಿದೆಯಾ, ನಾನೀಗ ನಿನ್ನೆಯ ಧನಿಕನ ಮಗನಲ್ಲ–ಸಾಮಾನ್ಯ. ಹೊಟ್ಟೆಗಾಗಿ ಹೋರಾಡೋನು. ನಿನ್ನ ನಿರ್ಧಾರವನ್ನು ಬದಲಾಯಿಸಿದರೆ ನಾನು ತಪ್ಪು ಅನ್ನೋದಿಲ್ಲ. ನ್ಯಾಯವೇ," ಅವನು ಕತೆಯನ್ನು ಪೂರ್ತಿ ಮಾಡುತ್ತ ಖಿನ್ನನಾಗಿ ಹೇಳಿದ.

" ಅ? ಬದಲಾವಣೆಯೆ? ಯಾತಕ್ಕೋಸ್ಕರ? ನಂಗೇನೂ ವ್ಯತ್ಯಾಸ ವಾಗಿಲ್ಲ–ಇದರಿಂದ. ಅದನ್ನು ಯೋಚಿಸಬೇಕಾದೋರು ನೀವು–ನಂಗಾಗಿ ಅಷ್ಟೊಂದು ಕಳೆದುಕೊಳ್ಳಬೇಕಾದೋರು. ಈ ಐಶ್ವರ್ಯವಿಲ್ಲದೆಯೂ ನಂಗೆ ತೃಪ್ತಿಯೇ. ನಿಜವಾದ ಬಲಿದಾನ ನಿಮ್ಮದು."

" ಹುಂ, ನನ್ನ ವಿಷಯ ಯಾಕೆ. ಇದಕ್ಕೆ ಹತ್ತರಷ್ಟು, ನೂರರಷ್ಟನ್ನೂ ಕಳೆದುಕೋಬೇಕಾಗಿದ್ದರೆ ಇನ್ನೂ ಚೆನ್ನಾಗಿತ್ತು. ಆಗಲೂ ನಿನ್ನ ವಿಷಯ ದಲ್ಲಿ ನನ್ನ ಭಾವನೆ ಬೇರೆಯಾಗುತ್ತಿರಲಿಲ್ಲ. ನಿನಗಿಂತ ಹೆಚ್ಚಿನ ಸಿರಿ ನಂಗೇನು ಬೇಕು?"

ಹೀಗೆ ಪ್ರಣಯಿಗಳ ಮಾತು ಮುಂದುವರೆದು, ಮಾರನೆಯ ದಿನ ತಿಳಿದ ಜನರಿಲ್ಲದ ಬೆಂಗಳೂರಿಗೆ ಪ್ರಯಾಣಮಾಡಬೇಕೆಂದು ನಿಶ್ಚಯ ವಾಯಿತು.

ಮಗ ತಂದೆಯನ್ನು ಬೀಳ್ಕೊಂಡಾಗ ಅವರು " ಅಂತೂ ನಿನ್ನ ದಾರಿ ಯನ್ನೇ ಹಿಡಿದೆ. ಹುಡುಗತನ. ಹುಚ್ಚು. ಕಷ್ಟ ಸುಖ ಗೊತ್ತಿಲ್ಲ. ಸ್ವಲ್ಪ

ಕಾಲವೆಲ್ಲೇ ನಿನ್ನ ತಪ್ಪು ನಿಂಗೇ ಗೊತ್ತಾಗುತ್ತೆ. ಅವಳನ್ನು ಬಿಟ್ಟು ಬಂದಾಗ ನಾವು ಮತ್ತೆ ಸೇರಬಹುದು," ಎಂದರು. ಅವನಿಗೆ ಬೀಳ್ಕೊಳ್ಳಲು ಬಂದದ್ದೇ ತಪ್ಪೆನ್ನಿಸಿತು. ಮಾತಾಡದೆ ಹಿಂದಿರುಗಿದ. ತಾಯಿಯ ವಿಷಯ ಬೇರೆ. ವಯಸ್ಸು ಬಂದ ಮಗನನ್ನು ಎಂದೂ ಹೆಚ್ಚಾಗಿ ಮುಟ್ಟದೆಯೇ ಇದ್ದವರು ಇಂದು ಅವನು ಮುಂದೆ ನಿಂತಾಗ ಅವನ ಕೊರಳನ್ನು ಕೈಗಳಿಂದ ಬಳಸಿ ಅವನ ಎದೆಯ ಮೇಲೆ ತಲೆಯಿಟ್ಟು ತಡೆಯಿಲ್ಲದೆ ಗೋಳಾಡಿದರು. ಅವನ ಕಣ್ಣಿನಲ್ಲಿಯೂ ಧಾರೆ ಹರಿಯಿತು. ಕಂಠ ಬಿಗಿಯಿತು, ಮಾತು ಹೊರಡಲಿಲ್ಲ. ಎದೆಗೆ ಎದೆ ಮಾತಾಡಿ ದುಃಖವನ್ನು ತೋಡಿಕೊಂಡವು, ಒಂದನ್ನೊಂದು ಅರಿತುಕೊಂಡವು. ಕ್ಷಣಕಾಲ ಈ ಅಗಲುವಿಕೆಯ ಸುಳಿ ಯಲ್ಲಿ ಸಿಕ್ಕಿ ನಾಗರಾಜ ಅಧೀರನಾದ—ತನ್ನ ನಿರ್ಧಾರದ ಬೇರೇ ಸಡಲಿದಂತೆ ಮನಸ್ಸಿನಲ್ಲಿ ಅನಿರೀಕ್ಷಿತವಾದ ಗೊಂದಲವಾಯಿತು. ಆದರೆ ತಾಯಿಯೇ ಸಮಾಧಾನದ ಮಾತನ್ನಾಡಿ ಅವನಿಗೆ ಅಷ್ಟಿಷ್ಟು ಸಮಾಧಾನವನ್ನು ತಂದರು. "ಮಗು, ಅವರು ಏನೆಂದರೂ ನೊಂದು ಹಟ ತೊಡಬೇಡ. ಬರೆಯುತ್ತಿರಪ್ಪ, ಬರುತ್ತಿರು. ನೀನು ಹೇಗಿದ್ದರೂ ಇದು ನಿನ್ನ ಮನೆಯೇ. ನಾವು ನಿನ್ನೋರೇ," ಎಂದು ಹೇಳಿ ಸ್ವಲ್ಪ ತಡೆದು ಕತ್ತಿನಿಂದ ತನ್ನ ಜೋಮಾಲೆ ಯನ್ನು ತೆಗೆದು "ಅಪ್ಪ, ಇದು ನಮ್ಮ ಅತ್ತೆ ಕೊಟ್ಟಿದ್ದು. ಅವರಿಗೆ ಅವರ ಅತ್ತೆ ಕೊಟ್ಟಿದ್ದರಂತೆ. ನೀನು ಯಾರನ್ನು ಮದುವೆಮಾಡಿಕೊಂಡರೂ ಅವಳು ನನ್ನ ಸೊಸೆಯೇ ಕಣೊ. ಇದನ್ನು ಅವಳ ಕತ್ತಿಗೆ ಹಾಕಿಬಿಡಪ್ಪ," ಎಂದು ಅವನ ಷರಟಿನ ಜೇಬಿಗೆ ಹಾಕಿದಳು. ಅವನು ಏನನ್ನೂ ಹೇಳ ಲಾರದೆ ತೊದಲಿ ತೊದಲಿ ಕಡೆಗೆ "ಅಮ್ಮ, ಅಮ್ಮ, ನೀನು ದೇವರು," ಎಂದು ಹೇಳಿ ಅವಳಿಂದ ತನ್ನನ್ನು ಹರಿದುಕೊಂಡು ಹಿಂದಿರುಗಿ ನೋಡಲು ಧೈರ್ಯವಿಲ್ಲದೆ ಹೊರಟುಹೋದ.

ಹೀಗೆಯೇ ಹಲವು ಬಾರಿ ಶಾಮಣ್ಣನಿಗೂ ನಾಯಕಿಗೂ ಬೇಕಾದಷ್ಟು ಮಾತಾಯಿತು. ಅವನ ಚರ್ಚೆ, ಪುಸಲಾವಣೆ, ಸಿಟ್ಟು, ಬೇಡಿಕೆ ಯಾವುದೂ ಅವಳ ಮನಸ್ಸನ್ನು ಬದಲಾಯಿಸಲಿಲ್ಲ. ನಟವರ್ಗದವರೂ ತಮ್ಮ ತಮ್ಮ ಯತ್ನಗಳನ್ನು ಮಾಡಿ ಸೋತರು. ಅವಳ ಪ್ರಯಾಣದ ಸಿದ್ಧತೆಗಳೆಲ್ಲ ಮುಗಿದು ಹೊರಡುವ ಹೊತ್ತು ಬಂದಾಗ ಶಾಮಣ್ಣ ತನ್ನ ಒರಟು ಕೈಗಳಿಂದ

ಅವಳ ತಲೆಯನ್ನು ತಡವುತ್ತ "ಅಮ್ಮ, ರಂಗಭೂಮಿಗೆ ಬಹಳ ನಷ್ಟ
ವಾಯ್ತು. ನೀನು ತಪ್ಪು ಮಾಡುತ್ತಿದೀಯ ಅಂತ ಅನ್ನಿಸುತ್ತೆ. ನಿಂಗೂ
ಹಾಗೇ ಅನ್ನಿಸೀತು ಮುಂದೆ. ಆದರೆ ಅದಕ್ಕೆ ನಿಂಗೆ ಅಧಿಕಾರವಿದೆ ಅಂತ
ಗೊತ್ತು. ಹೀಗೆ ಮಾಡಿದೆ ಅಂತ ನನ್ನ ಹರಕೆಯೇನು ಕಡಿಮೆಯಿಲ್ಲ.
ಈಗ ನಿಂಗೆ ಇಷ್ಟವಾದ ಜೀವನ ಆರಿಸಿಕೊಂಡಿದೀಯೆ. ದೇವರು ಒಳ್ಳೇದು
ಮಾಡಲಿ," ಎಂದು ಇನ್ನೂರು ರೂಪಾಯಿನ ನೋಟುಗಳನ್ನು ಜೇಬಿನಿಂದ
ತೆಗೆದುಕೊಡುತ್ತ "ಇಗೊ, ಇದೇ ನನ್ನ ಬಳುವಳಿ—ನಿನ್ನ ಮದುವೇಲಿ.
ನಾಟಕದೋರ ಹತ್ತಿರ ಹೆಚ್ಚು ಉಳಿಯೋದಿಲ್ಲ ಅಂತ ನಿಂಗೆ ಗೊತ್ತೇ
ಇದೆ," ಎಂದು ಹೇಗೋ ಮುಗಿಸಿದ. ಅವಳು ಮಾತಾಡಲಾರದೆ ಸುಮ್ಮನೆ
ನಮಸ್ಕರಿಸಿ ಹೊರಟುಹೋದಾಗ ಅವನು ಗೋಡೆಗೆ ಮುಖಮಾಡಿ ನಿಂತು
ಮಗುವಿನಂತೆ ಬಿಕ್ಕಳಿಸಿ ಅತ್ತುಬಿಟ್ಟ.

ಒಬ್ಬಿಬ್ಬರನ್ನುಳಿದು ನಾಟಕದ ಬಳಗವೆಲ್ಲ ರೈಲ್ವೆ ನಿಲ್ದಾಣಕ್ಕೆ ಬಂದಿತ್ತು.
ಅದರ ನೆನಪಾಗಿ ಒಂದು ಕಲಾಪತ್ತಿನ ಸೀರೆಯೂ ಉಡುಗೊರೆಯಾಗಿ ಕೊಡ
ಲ್ಪಟ್ಟಿತ್ತು. ಊರಿನಲ್ಲೆಲ್ಲ ಸುದ್ದಿ ಹರಡಿದ್ದು ಯುವಕರ ದೊಡ್ಡ ತಂಡವೂ
ಇಲ್ಲಿ ನೆರೆದಿತ್ತು. ಗುಂಪಿನ ದೃಷ್ಟಿಯೆಲ್ಲ ಅವಳಿಗೆ, ಅಭಿನಂದನೆಯೆಲ್ಲ
ಅವನಿಗೆ.

ಬೆಂಗಳೂರಿನಲ್ಲಿ ಸಿವಿಲ್ ಮದುವೆಯಾಯಿತು. ಸಂಸಾರ ಮಾವಳ್ಳಿಯ
ಎರಡು ಕೋಣೆಯ ಮನೆಯೊಂದರಲ್ಲಿ ನೆಲಸಿತು.

-೨-

ಮೊದಲ ದಿನಗಳು ಕಷ್ಟದಿಂದ ಕೂಡಿದ್ದರೂ ಹೊಸ ಸಂಸಾರದ
ಸಂಭ್ರಮ ಅದನ್ನು ಮರೆಸಿದ್ದಿತು. ಇಬ್ಬರೂ ಬಹಳ ಅನುಭವಸ್ಥರೇ.
ಅವನಿಗೆ ದೊಡ್ಡ ಮನೆಯ ಸುಖ ಜೀವನದ ನ್ಯಾಯವಾದ ಅಜ್ಞಾನ. ಅವಳು
ಬೆಳೆದದ್ದಂತೂ ಹೋಟಲಿನ ಅನ್ನದಿಂದಲೇ. ಅಂದಮೇಲೆ ಯಾವುದರಿಂದ
[illegible] ಏನಾಗುತ್ತದೆ ಎಂಬುದೆಲ್ಲ ರಸಾಯನ ಸಂಶೋಧನೆ
ಯಂತೆಯೇ. ಎಷ್ಟೆಷ್ಟು ಯೋಚಿಸಿಕೊಂಡು ದೊಡ್ಡ ಪಟ್ಟಿ ಹಾಕಿಕೊಂಡು
ಪೇಟೆಯಲ್ಲಿ ಹತ್ತೆಂಟುಬಾರಿ ಹಿಂದೆ ಮುಂದೆ ಅಲೆದಾಡಿ, ತಮ್ಮಿಬ್ಬರಲ್ಲೇ

ವ್ಯರ್ಥವಾದ ಚರ್ಚೆಮಾಡಿ–ಹುಟ್ಟುಕುರುಡರು ಪದಾರ್ಥಗಳ ವರ್ಣನೆಯ ಬಗ್ಗೆ ಜಗಳವಾಡಿದಂತೆ–ಕಡೆಗೂ ಅತೃಪ್ತಿಯಿಂದಲೇ ಏನೆಲ್ಲ ಸಾಮಾನು ಗಳನ್ನು ಹೊತ್ತು ತಂದರೂ ಈ ಮನೆಯಾಟದಲ್ಲಿ ಎತ್ತ ತಿರುಗಿದರೂ ಇಲ್ಲ ದವುಗಳೇ ಗಮನಕ್ಕೆ ಬರುತ್ತಿದ್ದುವು. ಕಟ್ಟಿಗೆ ಸೀಮೆಯೆಣ್ಣೆಗಳನ್ನಿಟ್ಟು ಕೊಂಡು ಒಲೆ ಹತ್ತಿಸಲು ಕುಳಿತು ಕಣ್ಣಿಂಗಿಸಿಕೊಂಡಾಗ ಮಿಮುಳು ಮಿಂಚು ಹೊಡೆದು 'ಆಹಾ, ಬೆರಣಿ ತರಬೇಕಾಗಿತ್ತು' ಎಂದು ಕೈಕೈ ಮುರಿದು ಕೊಳ್ಳುವುದು ; ಕಾಯೊಡೆದಾಗ 'ಅಯ್ಯೋ, ಚಾಕೂವಿನಿಂದಲೇ ಕೆಲಸ ವಾಗೋದಿಲ್ಲ, ಈಳಿಗೆ ಮಣೇನೇ ತರಬೇಕಾಗಿತ್ತು ತುರಿಯೋದಕ್ಕೆ' ಎಂದು ಕಣ್ಣನ್ನು ಪಿಳಿಪಿಳಿಬಿಟ್ಟು ಕಾಯನ್ನು ಕತ್ತರಿಸಿಯೇ ಹಾಕುವುದು ; ಬೇಳೆ ಕಾಳುಕಾಳಾಗಿ ಸಾರು ನೀರಾದಾಗ 'ಓಹೋ, ಮೊಸರಿಗೆ ಬೇಡ ಅಂದು ಕೊಂಡರೂ ಇದಕ್ಕಾದರೂ ಒಂದು ಕಡಗೋಲು ಬೇಕು ಅಂತಲೇ ಕಾಣುತ್ತೆ' ಎಂದು ತೀರ್ಮಾನಿಸಿಕೊಳ್ಳುವುದು ; ಕೊಂಡ ಮೊಸರೆಲ್ಲವನ್ನೂ ಬೆಕ್ಕು ಉಂಡು ಹೋದಾಗ 'ಸರಿಸರಿ ಈ ಬೆಕ್ಕಿನಿಂದ ಉಳಿಬಾಳಿಲ್ಲ. ಇಲ್ಲಿ ಬೀರುವೂ ಇಲ್ಲ. ಒಂದು ನೆಲುವನ್ನಾದರೂ ತರದಿದ್ದರೆ ಹಾಲು ಮೊಸರು ತುಪ್ಪದ ಮುಖ ಕಾಣುವ ಹಾಗೇ ಇಲ್ಲ' ಎಂದು ಅರಿತುಕೊಳ್ಳುವುದು–ಹೀಗೇ ಒಂದೇ, ಎರಡೇ, ದಿನದಿನವೂ ಇಪ್ಪತ್ತೆಂಟು ಸಾಮಾನು 'ವಾಂಟೆಡ್' ಪಟ್ಟಿಗೆ ಸೇರುತ್ತಲೇ ಇದ್ದುವು. ಸಧ್ಯ ಈ ಕಡೆ 'ಪ್ಯಾಚ್' ಹಾಕಿದೆವು ಎನ್ನುವ ಹೊತ್ತಿಗಾಗಲೇ ಈ ಸಂಸಾರದ ಸೈಕಲ್ ಟ್ಯೂಬ್ ಇನ್ನೊಂದು ಕಡೆ 'ಫಸ್' ಎನ್ನುತ್ತಿತ್ತು. ಇದು ಸಾಲದೋ ಎನ್ನುವಂತೆ ಆ ಕುಡಿಯುವ ಲೋಟ ಗಳೂ, ಚಮಚಗಳೂ, ಬೋಸಿಗಳೂ ಏನಾಗುತ್ತಿದ್ದುವೋ ಪತ್ತೆಯೇ ಹತ್ತು ತ್ತಿರಲಿಲ್ಲ. ಸಮಯದಲ್ಲಿ ದೊಡ್ಡ ಬೇಟೆಯನ್ನೇ ನಡೆಸಬೇಕಾಗುತ್ತಿತ್ತು.

ಊಟಕ್ಕೆ ಕುಳಿತಾಗ ಇಬ್ಬರಿಗೂ ಭಯ, ತುತ್ತೆತ್ತುವುದಕ್ಕೆ. ಒಬ್ಬರ ಮುಖವನ್ನು ಒಬ್ಬರು ಕದ್ದುನೋಡುತ್ತ ದುಷ್ಪರಿಣಾಮವನ್ನು ಕಾಣು ತ್ತಿದ್ದರು. ಎರಡು ತುತ್ತಿಗೊಂದು ಬಾರಿ 'ಕಟಂ' ಎಂದು ಸಿಡಿಲು ಹೊಡೆದು ತಿಂದ ತುತ್ತು ಹೊರಗೆ ಬಂದಾಗ ಕಲ್ಲು ಅಕ್ಕಿಯಲ್ಲೋ ಬೇಳೆ ಯಲ್ಲೋ ಎಂದು ದೀರ್ಘವಾದ ಚರ್ಚೆಯಾಗಿ ಕಡೆಗೆ 'ಕಲ್ಲುಗಳು ಹಲ್ಲಿಗೆ ಬಹಳ ಅಪಾಯಕರ. ಈಗಲೇ ದಂತ ವೈದ್ಯರಿಗೆ ದಂಡ ತೆರುವುದು ಆಗದು.

ಆದುದರಿಂದ ಅಕ್ಕಿ ಬೇಳೆಗಳೆರಡನ್ನೂ ನಿತ್ಯವೂ ಆರಿಸಿಯೇ ಹಾಕತಕ್ಕದ್ದು ಎಂಬ ಠರಾವು ಸರ್ವಾನುಮತದಿಂದ ಅಂಗೀಕರಿಸಲ್ಪಡುತ್ತಿತ್ತು. ತುತ್ತನ್ನು ತುರುಕುವುದು ಕಷ್ಟವಾದಾಗ 'ಇದೇಕೆ ಬೋಳುಬೋಳಾಗಿ ಸಾರು ಸೀಗೆಯ ನೀರಿನಹಾಗಿದೆ' ಎಂದು ಮಾತು ಬಂದರೆ 'ಬೇಳೆ ಕಟ್ಟು ಬಿಟ್ಟಿಲ್ಲ, ಹೋಟೆಲಿನ ಮೆಣಸಿನಪುಡಿ' ಮುಂತಾಗಿ ಸಾಧ್ಯಾಸಾಧ್ಯಗಳೆಲ್ಲ ಚರ್ಚೆಯಾಗಿ ಸಾರನ್ನ ಹೇಗೋ ಮುಗಿಯುವ ಹೊತ್ತಿಗೆ 'ಒಗ್ಗರಣೆ ಹಾಕೋದು ಮರೆತು ಹೋಯ್ತು' ಎಂಬ 'ಡಿಸ್ಕವರಿ'ಯಾಗುತ್ತಿತ್ತು. 'ಪಲ್ಯಕ್ಕೆ ಸ್ವಲ್ಪ ಉಪ್ಪು ಹೆಚ್ಚಲ್ಲವೇ?' ಎಂದು ಒಬ್ಬರೂ 'ಇಲ್ಲವಲ್ಲ' ಎಂದು ಇನ್ನೊಬ್ಬರೂ ಹೇಳುತ್ತ ಇಬ್ಬರೂ ಪಲ್ಯವನ್ನ ಹಾಗೆಯೇ ಒತ್ತರಿಸುತ್ತಿದ್ದರು. ಇಂತಹ ದಿನದಲ್ಲೇ ಆ ಹಾಳು ಬೆಕ್ಕು ಕೈಕೊಟ್ಟು ಮೊಸರನ್ನಕ್ಕೆ ನಾಮ ಹಾಕುತ್ತಿದ್ದಿತು. ಸರದಿಯಲ್ಲಿ ಸೀಯದೆಯೋ ಬೇಯದೆಯೋ ತಿಂಡಿಯೇ ಆಗುತ್ತಿರಲಿಲ್ಲ. ಜೋಡಿಯತ್ನವಾದರೆ ಜೋಡಿತಪ್ಪು ಸಿದ್ಧ. ಅದೇನು ಸ್ತ್ರೀ ಸ್ವಭಾವದ ಜಾಡಿನಿಂದಲೋ ಹೇಗೋ ಅವನ ಕುರುಡುಗಣ್ಣಿಗೆ ಅವಳ ಮೆಳ್ಳಗಣ್ಣು ವಾಸಿಯಾಗಿತ್ತು. ಅವನು ತಿದ್ದಲು ತಪ್ಪುತ್ತಲೂ ಇರಲಿಲ್ಲ, ಹಾಗೇ ತಪ್ಪನ್ನು ಹೆಚ್ಚಿಸದೆ, ಗೊಂದಲವನ್ನೇ ಎಬ್ಬಿಸದೆ ಇರುತ್ತಲೂ ಇರಲಿಲ್ಲ. ಹೀಗಾಗಿ ಅವನ ಸಹಾಯವೆಂದರೆ ಅವಳಿಗೆ ಸಹಜವಾದ ಭಯ ಹುಟ್ಟಿತ್ತು. ಆದರೆ ಅವನ ವಿನೋದ ಸ್ವಲ್ಪ ಭಾರವನ್ನಿಳಿಸುತ್ತಿತ್ತು. ಕಾಯಕವಾದ ಕೆಲಸದಲ್ಲಿ ಅವನು ಬೇಕಾಗುತ್ತಿದ್ದ. ಹೀಗಾಗಿ ಕೆಲವು ದಿನಗಳಂತೂ ಪ್ರಣಯಿಗಳಿಗೆ 'ತಿಂಡಿಗೆ ಪ್ರಣಯ, ಊಟಕ್ಕೆ ಪ್ರಣಯ'ವೇ ಆಗಬೇಕಾಗಿತ್ತು. ಹುಂ, ಎಲ್ಲಕ್ಕೂ ಪ್ರಣಯದ ಹೊದಿಕೆ. ಇಬ್ಬರೂ ಒಡನಿದ್ದಾಗ ಎಡವು, ತಡವು, ಕಷ್ಟ ಕಾರ್ಪಣ್ಯಗಳನ್ನೆಲ್ಲ ಕಟ್ಟಿ ಪ್ರಣಯದ ಆಳವಲ್ಲಿ ಎಸೆದು ಮುಳುಗಿಸಿ ಹಗುರವಾದ ನಗೆಯಲೆಗಳನ್ನೆಬ್ಬಿಸುತ್ತಿದ್ದರು. ಅಲೆಯಳಿದ ಮೇಲೆ ಆಳದ ನೀರಿನ ಶಾಂತಿಯಿಂದಲೇ ಇರುತ್ತಿದ್ದರು. ದಿನದ ಗೊಂದಲ ಹೀಗಾದರೆ ರಾತ್ರಿಯಂತೂ ಹುಚ್ಚೇ. ನಿದ್ದೆಗಾಗಿ ಕಣ್ಣುಮುಚ್ಚುತ್ತಿದ್ದುದು ಗಲೋ, ಅರ್ಧರಾತ್ರಿಯಾದ ಮೇಲೇ. ಆಮೇಲೂ ಮಧ್ಯೆಮಧ್ಯೆ ಮತ್ತೆಮತ್ತೆ ಎಚ್ಚರ. ನಾಯಕಿಗೆ ಮೊದಮೊದಲು ಇದು ಪ್ರೇಮದ ಅಳತೆಯೆನ್ನಿಸುತ್ತಿತ್ತು. ವಿಶೇಷ ಆನಂದವನ್ನು ತರುತ್ತಿತ್ತು. ಸ್ವಲ್ಪ ದಿನಗಳಲ್ಲೇ

ಇದು ವಿಚಿತ್ರವಾಗಿ ಕಾಣಹತ್ತಿತು. ಒಂದೊಂದು ವೇಳೆ ಬೇಸರದ ಛಾಯೆಯೂ ಮೂಡಿ ಮಾಯವಾಗುತ್ತಿತ್ತು.

ಈ ಅನುಭವದಿಂದ ಸಹಜವಾಗಿಯೇ ಅವರ ಮುಖ ಬಾಡಿರುತ್ತಿತ್ತು, ಆಳದ ಅರೆಗೆಂಪು ಕಣ್ಣುಗಳ ಸುತ್ತ ಕಪ್ಪು ಗೆರೆ ನಿಂತಿತು. ಕಾದಿರುತ್ತಿದ್ದ ಮೈಯಲ್ಲೆಲ್ಲ ಮೂಗುನೋವು. ಸದಾ ನಿದ್ರಾಲಸ್ಯದ ಆಕಳಿಕೆ ತೂಕಡಿಕೆ. ಹಗಲಿನ ಕೆಲಸ ವಿಧಿಯಿಲ್ಲದೆ ಹೇಗೋ ಜೂಗರಿಸಿಕೊಂಡು ಎಡವಿಕೊಂಡು ಸಾಗುತ್ತಿತ್ತು. ಅಜ್ಞಾನದ ಜೊತೆಗೆ ಆಲಸ್ಯವೂ ಸೇರಿ ಕೆಲಸವು ಮತ್ತಷ್ಟು ಚೆನ್ನಾಯಿತು.

ಈ ಹೊಸ ಜೀವನದಲ್ಲಿ ನಾಯಕಿಗೆ ಕಾಣುತ್ತಿದ್ದುದು ಮಿತಿಯರಿಯದ ಆವೇಶ ನಿರ್ಲಕ್ಷ್ಯ–ಮನೆಗೆಲಸದ ಆಟದಲ್ಲಿ, ಪ್ರಣಯದ ಉತ್ಸಾಹದಲ್ಲಿ, ಕಾಮಾತಿರೇಕದಲ್ಲಿ. ಇಷ್ಟು ಒತ್ತಡದ ಬಾಳು ಎಷ್ಟು ಕಾಲ ಹೀಗೇ ಇದ್ದೀತು, ಇದ್ದರೂ ಹಳತಾಗದೆ ಎಂದು ನಾಯಕಿ ಅನುಮಾನಿಸಿದಳು. ಇದಾಗಲೇ ಮೈ ಮನಗಳ ಮೇಲೆ ಅಹಿತವಾದ ಬಿಗಿಯ ಸೂಚನೆ ಕೊಡುತ್ತಿತ್ತು. ಈ ರೀತಿಯು ಬದಲಾಯಿಸಲೇಬೇಕೆಂದು ಊಹಿಸಿ ಹೊಸರೀತಿ ಹೇಗಿರುವುದೋ ಎಂದುಕೊಳ್ಳುತ್ತಿದ್ದಳು.

ಅದಕ್ಕೆ ಬಹಳ ಕಾಲ ಬೇಕಾಗಲಿಲ್ಲ. ಶಾಮಣ್ಣ ಕೊಟ್ಟಿದ್ದ ಇನ್ನೂರು ರೂಪಾಯಿ, ರಾಜನ ಬಳಿಯಿದ್ದ ಪುಡಿಗಾಸು, ಎಲ್ಲವೂ ಕರ್ಚಾದುವು. ಹಿಂದೆಂದೂ ಯಾವುದೂ ಇಲ್ಲವೆಂಬುದನ್ನೇ ಕಾಣದಿದ್ದ ಹಸುಗೂಸುಗಳನ್ನು ತಾಪತ್ರಯಗಳು ಒಂದೊಂದಾಗಿ ಬೆನ್ನಂಟಿ ಒಟ್ಟುಗೂಡಿ ಬೇಟೆಯಾಡಿದುವು. ಆಗ ಚೆನ್ನಾಗಿ ಎಚ್ಚೆತ್ತು ರಾಜ ಕೆಲಸಕ್ಕಾಗಿ ದಿನದಿನವೂ ಬೀದಿಬೀದಿಯಲೆದು ರಾಜಾಮಿಲ್ಲಿನಲ್ಲಿ ಮೂವತ್ತು ರೂಪಾಯಿನ ಗುಮಾಸ್ತನಾಗಿ ಸೇರಿದ. ಹತ್ತು ರೂಪಾಯಿ ಬಾಡಿಗೆ ಕೊಟ್ಟಮೇಲೆ ಉಳಿದ ಇಪ್ಪತ್ತರಲ್ಲಿ ಹೊಟ್ಟೆಗೆ ತುತ್ತಾಗುವುದು ಕಷ್ಟವೇ ಆಗಿತ್ತು. ಹಳೆಯ ಬಟ್ಟೆಗಳು ಹರಿಯುತ್ತ ಬಂದಂತೆಲ್ಲ ಹಸಿವೂ ಚಳಿಯೂ ಚೆನ್ನಾಗಿಯೇ ಕಿತ್ತು ತಿನ್ನಲು ಪ್ರಾರಂಭಿಸಿದುವು. ಒಂದೊಂದು ವೇಳೆ ರಾಜನಿಗೆ ಊರಿಗೆ ಹಣಕ್ಕಾಗಿ ಬೇಡಿ ಕಾಗದ ಬರೆಯಬೇಕೆನ್ನಿಸುತ್ತಿತ್ತು. ಆದರೆ ಸೆಡಕು ಅಡ್ಡಿಬರುತ್ತಿತ್ತು. ತಂದೆ ಮಕ್ಕಳ ವಿಷಯವನ್ನು ತಿಳಿದಿದ್ದ ನಾಯಕಿಯೂ ಇದನ್ನು ನಿಷೇಧಿಸಿ ಅವನು ದೌರ್ಬ

ಲ್ಯದ ಗಳಿಗೆಗಳಲ್ಲಿ ಸೋಲದಂತೆ ನೋಡಿಕೊಂಡಳು. ರಾಜನ ಉಂಗುರ ಎಂದೋ ಹೋಗಿತ್ತು ಅಂಗಡಿಗೆ. ನಾಯಕಿ ತನ್ನ ಬೆಂಡೋಲೆ, ಬಳೆಗಳು, ಸರ, ಉಂಗುರ, ಇವನ್ನು ಮಾರಾಟ ಮಾಡಬೇಕೆಂದು ನಿತ್ಯವೂ ಹೇಳುತ್ತಿದ್ದಳು. ಮೊದಮೊದಲು ಅವನು 'ಆ ಮಾತನ್ನೇ ಎತ್ತಬೇಡ' ಎನ್ನುತ್ತಿದ್ದು ಕಡೆಕಡೆಗೆ ಸಂದರ್ಭದ ಒತ್ತಡವನ್ನರಿತು ಅವಳ ಒತ್ತಾಯಕ್ಕೆ ಒಡಂಬಟ್ಟು ಖಿನ್ನನಾಗಿ ಒಂದೊಂದನ್ನಾಗಿ ಒಡವೆಗಳನ್ನು ತೆಗೆದುಕೊಂಡು ಮಾರಿ ಅಪರಾಧಿಯ ಮುಖದಿಂದ ಮನೆಗೆ ಹಿಂದಿರುಗುತ್ತಿದ್ದ. ಹೀಗಷ್ಟು ಕಾಲ ಹೊಟ್ಟೆ ತುಂಬಿಕೊಂಡು ಮೈ ಮುಚ್ಚಿಕೊಂಡಾಯಿತು. ನಾಯಕಿ ನಾಟಕದ ಬಳಗ ಕೊಟ್ಟಿದ್ದ ಕಲಾಪತ್ತಿನ ಸೀರೆಯನ್ನೂ ಕೊಡಬೇಕೆಂದಳು. ರಾಜ "ಉಹುಂ. ನಿಂಗಷ್ಟು ಚೆನ್ನಾಗಿ ಒಪ್ಪೋ ಸೀರೇನ ಕೊಟ್ಟುಬಿಡೋದಕ್ಕೆ ನಾನೆಂದಿಗೂ ಒಪ್ಪೋದಿಲ್ಲ; ಆಗದು," ಎಂದು ಖಂಡಿತವಾಗಿ ಹೇಳಿ, "ಇಷ್ಟಕ್ಕೂ ಅದರಿಂದ ಎಷ್ಟು ದಿನ ತಳ್ಳೋದಕ್ಕಾಗುತ್ತೆ? ಬೇಡ," ಎಂದುಬಿಟ್ಟ. ಜೋಮಾಲೆಯ ಮಾತನ್ನು ಅವನು ಸೂಚಿಸಿದಾಗ ಅವಳು "ಆ ಮಾತನ್ನೇ ಎತ್ತಬೇಡಿ. ಅದು ನಮ್ಮದಲ್ಲ. ನಮ್ಮ ಸೊಸೇದು. ನಿಮ್ಮ ತಾಯಿಯ ದತ್ತಿ–ವಂಶಪಾರಂಪರ್ಯವಾಗಿ ಬಂದದ್ದು," ಎಂದು ಅವನ ಸಲಹೆಯನ್ನು ಒಪ್ಪಲಿಲ್ಲ. ಅವನು ನಸುನಗುತ್ತ "ಅಯ್ಯೋ ಹುಚ್ಚಿ, ನಮಗಿನ್ನೂ ಮಗುವಾಗಿ–ಗಂಡು, ಅವನಿಗೆ ಮದುವೆಯಾಗಿ ನಾವು ಬದುಕಿದ್ದು........" ಎಂದು ರಾಗವೆಳೆದ. ಅದಕ್ಕವಳು ತಟ್ಟನೆ "ಕಾಲ ಹೀಗೇ ಇರುತ್ಯೇ? ನಮ್ಮ ಅದೃಷ್ಟ ತೀರ ಯಾಕೆ ಕೆಟ್ಟಿರಬೇಕು? ಒಳ್ಳೇ ದಿನಗಳೂ ಬಂದಾವು. ಆಗ ಇದನ್ನು ಮತ್ತೆ ತರೋದಕ್ಕೆ ಆಗುತ್ಯೇ? ಅಲ್ಲಿಯವರೆಗೆ ಕಷ್ಟಪಟ್ಟುಬಿಡೋಣ. ಅದಕ್ಕೇನು. ಎರಡು ತುತ್ತಿನ ಕಡೆ ಒಂದನ್ನೇ ತಿಂದಿರೋಣ," ಎಂದು ಸಮಾಧಾನ ಹೇಳಿದಳು. ಅವನಿಗಾದರೂ ಇದು ನಿಜವಾದೀತೆಂದು ಆಸೆ. ತಾಯಿಯ ಪ್ರೇಮದ ಉಡುಗೊರೆಯನ್ನು ಪ್ರೇಮದ ಮಡದಿಯಿಂದ ಕಿತ್ತುಕೊಳ್ಳುವ ಇಷ್ಟವಿಲ್ಲ. ಸುಮ್ಮನಿದ್ದ. ದಿನದಿನಕ್ಕೆ ಬಾಳಿನ ತೊಂದರೆ ಹೆಚ್ಚಾಗುತ್ತಿತ್ತು–ಬೆಲೆಯೇರುತ್ತಿದ್ದಂತೆ.

ಈ ಬದಲಾವಣೆಯ ಹಿಂಸೆಯೇನು ಕಡಿಮೆಯಲ್ಲದಿದ್ದರೂ ನಾಯಕಿಯನ್ನು ಇದಕ್ಕಿಂತಲೂ ಹೆಚ್ಚಾಗಿ ಬಾಧಿಸಿದುದು ಬೇರೊಂದು ಬದಲಾವಣೆ–

ಅಲ್ಲ, ಬದಲಾವಣೆಯಿಲ್ಲದುದು. ರಾಜ ಗಿರಣಿಗೆ ಹೋಗಲು ಮೊದಲು ಮಾಡಿದಾಗಿನಿಂದ ಮನೆಗೆಲಸದ ಭಾರವೆಲ್ಲ ಅವಳ ಮೇಲೆ ಆಗತುಕೊಂಡಿತು. ಹೀಗೆಂದರೆ ರಾಜ ಮನೆಗೆಲಸದಲ್ಲಿ ಬಹಳ ಸಹಾಯವಾಗುತ್ತಿದ್ದನೆಂದಲ್ಲ. ಅನೇಕ ವೇಳೆ ಅವನ ಸಹಾಯವೆಂದರೆ ಕೆಲಸವನ್ನು ಹೆಚ್ಚಿಸುವುದೇ ಆಗಿತ್ತು. ಆದರೂ ಹಿಂದೆ ಮುಂದೆ ಸುತ್ತಿಕೊಂಡು, ಕಷ್ಟ ಸುಖಗಳನ್ನು ಆಡುತ್ತ ಕೆಲಸದ ದಣಿವಿನಿಂದ, ಒಂದೇ ರೀತಿಯ ಬೇಸರದಿಂದ ಮನಸ್ಸನ್ನು ತಿರುಗಿಸುತ್ತಿದ್ದ. ಇಬ್ಬರು ನಡೆದ ದಾರಿಯಂತೆ ಕೆಲಸದ ಭಾರ ಅಷ್ಟಾಗಿ ಕಾಣುತ್ತಿರಲಿಲ್ಲ. ಈಗೆಂದರೆ ಅದೇ ಕೆಲಸ, ಒಬ್ಬಳೇ, ದಿನದಿನವೂ.

ರಾಜನ ಆಫೀಸು ಕೆಲಸ ಹತ್ತರಿಂದ ಆರರವರೆಗೆ. ಮೂರು ಮೈಲಿಯ ಮೇಲೆ ನಡೆದು ಹೋಗಬೇಕಾಗಿತ್ತು. ಎಂಟೂವರೆಗೇ ಊಟ. ನಾಯಕಿಯ ಸ್ವಭಾವ ನಿದಾನ. ರಾಜನೇ ಅವಳನ್ನು ಶಂಖದ ಹುಳು, ಹೇನು ಎಂದು ಆಗಾಗ ರೇಗಿಸುತ್ತಿದ್ದ. ನೀವು ಭೂಕಂಪ, ಬರಸಿಡಿಲು ಎಂದು ಅವಳು ಹಾಸ್ಯಮಾಡುತ್ತಿದ್ದಳು. ಹೀಗಿದ್ದು ಅವನಿಗೆ ಎರಡು ತುತ್ತು ಹಾಕಬೇಕಾದರೆ ಅವಳು ನಾಲ್ಕು ನಾಲ್ಕೂವರೆಗೇ ಏಳಬೇಕಾಗಿತ್ತು. ಈ ಮನಸ್ಸಿನ ಆತಂಕದಿಂದ ಬಹಳ ದಿನ ಮೂರು ಮೂರೂವರೆಯಿಂದಲೇ–ಒಂದೊಂದು ದಿನ ಇನ್ನೂ ಮುಂಚೆಯೇ–ಎಚ್ಚರವಾಗಿರುತ್ತಿತ್ತು. ಮುಂದೆ ಮಲಗಲು ಧೈರ್ಯವಿಲ್ಲ. ರೈಲಿನ ನಿದ್ದೆಯ ಹಾಗೆ ಕೆಲಕೆಲವು ನಿಮಿಷಗಳ ಜೊಂಪು ಹತ್ತಿ ಒಡೆಯುತ್ತಿತ್ತು. ಒಲೆ ಹತ್ತಿಸುವುದು ಇನ್ನೂ ಅವಳಿಗೆ ಸಾಧಿಸಿರಲಿಲ್ಲ. ನಿದ್ದೆಗಣ್ಣು ಬೇರೆ. ಏನೇನೋ ಆಗುತ್ತಿತ್ತು. ಒಂದೊಂದು ದಿನವಂತೂ ಒಲೆಯ ಮುಂದೆ ಕುಳಿತು ಅತ್ತೇಬಿಡುತ್ತಿದ್ದಳು. ದೀಪದ ಬೆಳಕಿನಲ್ಲಿ ಉರಿಯುವ ಕಣ್ಣಿಗೆ ತಣ್ಣೀರೆರಚಿಕೊಂಡು ಮುಖ ಒರಸಿಕೊಂಡು ಅಡಿಗೆಯ ಸಿದ್ಧತೆ. ಗಂಡ ಏಳದಂತೆ ಎಚ್ಚರಿಕೆಯಿಂದ ನಡೆಸಲು ಇನ್ನೂ ನಿದಾನವಾಗುತ್ತಿತ್ತು. ಹಾಗೂ ಅಷ್ಟಿಷ್ಟು ದಡಬಡವಾಗಿ ಪಾತ್ರೆ, ಸೌಟು, ಬುಟ್ಟಿಗಳು ಬಿದ್ದು ಅವನಿಗೆ ನಿದ್ರಾಭಂಗವಾಯಿತೇನೋ ಎಂಬ ಮುಜುಗರ. [illegible] ಹಾಗೇನೂ ಆಗುತ್ತಿರಲಿಲ್ಲ. ಅವನನ್ನು ಅವಳೇ ಏಳಕ್ಕೆ ಏಳಿಸಬೇಕಾಗಿತ್ತು. ಈ ಅಡಿಗೆಯ ಆತುರದಲ್ಲಿ ಮಧ್ಯೆ ಕಾಫಿಯ ಪ್ರಕರಣ ಬೇರೆ–ಶಿವಪೂಜೆಯಲ್ಲಿ ಕರಡಿ ಬಿಟ್ಟ ಹಾಗೆ. ಗಂಜಿಗಿಲ್ಲದಿದ್ದರೂ ಕಾಫಿ

ಯಿಲ್ಲದ ವೈಸೂರಿನವರುಂಟೆ? ಅಡಿಗೆಯ ಮನೆಯ ಗೋಡೆಯನ್ನೊರಗಿ ಕಾಲ ಮೇಲೆ ಕುಳಿತು ಬಿಸಿಬಿಸಿ ಕಾಫಿಯನ್ನು ಸೊರ್ರೆಂದು ಹೀರುತ್ತ ರಾಜ ಇನ್ನೂ ನಿದ್ರೆಯ ದಪ್ಪ ಧ್ವನಿಯಲ್ಲೇ "ಇದೇಕೆ ಹೀಗಿದೀಯ-ಹುಚ್ಚಿಯ ಹಾಗೆ ತಲೆ ಕೆದರಿಕೊಂಡು. ಸ್ವಲ್ಪ ಹಾಗೆ ಹಾಗೇ ಬಾಚಿಕೊಂಡಾದರೂ ಕುಂಕುಮ ಇಟ್ಟುಕೊಳ್ಳಬಾರದೆ?" ಎಂದು ಕೇಳುತ್ತಿದ್ದ. ಅದಕ್ಕೆ ಅವಳು ಏನು ಹೇಳಬೇಕು? ಬಡುವಿಗೆ ಕೈ ಹಾಕಿದ್ದವಳೋ, ಒಲೆಯನ್ನು ಊದು ತ್ತಿದ್ದವಳೋ, ಪಾತ್ರೆ ಇಳಿಸುತ್ತಿದ್ದವಳೋ ಸ್ವಲ್ಪ ಅವನ ಕಡೆಗೆ ತಿರುಗಿ ನಸು ನಗುತ್ತಿದ್ದಳು, ಅಷ್ಟೆ.

ಹೇಗೆ ಹೇಗೆ ಮುಖ ಕ್ಷೌರ ಸ್ನಾನಗಳನ್ನು ಮುಗಿಸುತ್ತಿದ್ದನೋ, ತಲೆಗೆ ಬಾಚಣಿಗೆ ಹಾಕುತ್ತಲೇ "ಎಲ್ಲಿ, ಅಡಿಗೆಯಾಯ್ತೆ? ಎಲೆ ಹಾಕು ಮತ್ತೆ. ಹೊತ್ತಾಯ್ತು," ಎಂದು ಒತ್ತಾಯಕ್ಕೆ ಮೊದಲು ಮಾಡುತ್ತಿದ್ದ. ಅವಳಿಗೆ ಇನ್ನೂ ಹೆಚ್ಚು ಕೈಕಾಲು ಕೆಟ್ಟುಹೋಗುತ್ತಿತ್ತು. ಅವಳೇ ನಾದರೂ "ಇನ್ನೂ ಎಂಟು ಗಂಟೆಯಲ್ಲ, ಹಾಕ್ತೀನಿ, ಆಗಿಹೋಯ್ತು," ಎಂದರೆ "ನಿಂಗೇನು ಗೊತ್ತಾಗುತ್ತೆ-ಈ ನೆರಳಿನಲ್ಲಿರೋಳಿಗೆ. ಬಿಸಿಲಿನಲ್ಲಿ ನಡೀಬೇಕು ನಡೀಬೇಕು-ಬಿಸಿಲಿನಲ್ಲಿ, ಊಟಮಾಡಿದ ಕೂಡಲೆ. ಪಕ್ಕೆ ನೋವು ಬರುತ್ತೆ. ಮೈ ಬೆವರಿ ಸೋರುತ್ತೆ. ದಾರಿ ಸವೆಯೋದಿಲ್ಲ. ಅಲ್ಲೇ ಎಲ್ಲಾದರೂ ಶೇಷಾದ್ರಿಪುರ, ಮಲ್ಲೇಶ್ವರಕ್ಕೆ ಹೋಗೋಣ ಅಂದರೆ ಹಾಳು ಮನೆ ಸಿಕ್ಕೋದಿಲ್ಲ. ಒಂದಲ್ಲ ಒಂದು ಫಜೀತಿ," ಎಂದು ಗೊಣಗಿ ಕೊಳ್ಳುತ್ತಿದ್ದ. ಅವಳಿಗೆ ತನ್ನ ಕಷ್ಟದಲ್ಲೂ ಅವನ ಸಂಕಟದ ಮಾತನ್ನು ಕೇಳಿ 'ಅಯ್ಯೋ ಪಾಪ!' ಎನ್ನಿಸುತ್ತಿತ್ತು. ಅಂತೂ ಇಂತೂ ಅಷ್ಟಿಷ್ಟು ಅರ್ಧ ವಿನೋದ, ಅರ್ಧ ನಿಜದ ಅಂತರ್ಯುದ್ಧ ನಡೆದು, ಕುದಿಯನ್ನವೋ, ಒಗ್ಗರಣೆಯಿಲ್ಲದ ಸಾರೋ, ಬೇಯದ ತರಕಾರಿಯೋ, ಏನೋ ಒಂದು ಊಟದ ಭಂಡಾಟ ಕಳೆದು, ಅವನು ಆಫೀಸಿಗೆ ಹೊರಟಾಗ ಅವನೊಡನೆ ಬಾಗಿಲಿಗೆ ಹೋಗಿ, ಅವನು ಬೀದಿ ತಿರುಗುವಾಗ ಹಿಂದಿರುಗಿ ನೋಡುವ ವರೆಗೂ ಜಗಲಿಯ ಮೇಲೆ ನಿಂತಿದ್ದು, ಕೂಡಲೇ ಒಳಗೆ ಸರಿದು ಬಾಗಿಲನ್ನು ನೂಕಿ, ಹರದ ಹರಡಿದ ಅಡಿಗೆಯ ಮನೆ ಹೊಕ್ಕು, ಕುಕ್ಕರಿಸಿಕೊಂಡು ಗೋಡೆಯೊರಗಿ ಸಮಾಧಿಗಿಳಿಯುತ್ತಿದ್ದಳು. ಒಂದೊಂದು ದಿನವಂತೂ

ಮಲಗುವ ಮನೆಯಲ್ಲಿ ಹಾಸಿಗೆಯ ಸುರುಳಿಯನ್ನು ಕಾಲಿನಿಂದ ನೂಕಿ ಬಿಚ್ಚಿ ಉರುಡಿಕೊಳ್ಳುತ್ತಿದ್ದಳು. ಒಂದೊಂದು ದಿನ ಒಲೆಯಾರಿಸದಿದ್ದು ಕೆಂಡ ಬೂದಿಯಾಗುತ್ತಿದೆಯೆಂದು ನೆನಪಿಗೆ ಬಂದರೂ ಅವಳು ಅಲುಗಾಡುತ್ತಿರಲಿಲ್ಲ. ನಿತ್ಯವೂ ಹೀಗಷ್ಟು ಉಸಿರು ಬಂದ ಮೇಲೇ ಮುಂದಿನ ಕೆಲಸ—ತನ್ನ ಕೆಲಸ. ಅವಳೆದ್ದಾಗ ಹತ್ತು ಗಂಟೆಯಷ್ಟೇ ಆಗಿಬಿಟ್ಟಿರುತ್ತಿತ್ತು.

ಮೇಲೆದ್ದು ಕಾಲೆಳೆದುಕೊಂಡು ಅಡಿಗೆಯ ಮನೆಯ ಹರದವನ್ನು ಗುಡ್ಡೆಹಾಕಿ, ಮನೆಯ ಕಸ ಗುಡಿಸಿ ಅಲ್ಲಿಲ್ಲಿ ಬಿದಿದ್ದ ಬಟ್ಟೆಗಳನ್ನು ಒಪ್ಪವಾಗಿರಿಸಿ—ಹುಂ, ರಾಜನ ಆತುರದಲ್ಲಿ ಎಷ್ಟೊ ಅವ್ಯವಸ್ಥೆ ನಡೆದಿರುತ್ತಿತ್ತು—ಹಲ್ಲುಜ್ಜುವುದಕ್ಕೆ ಹೋಗುತ್ತಿದ್ದಳು. ಮುಖ ತೊಳೆದು ಮಡಿಯುಡುವುದು ಅವಳದೇ ಕೆಲಸ. ಆತುರವಿಲ್ಲದೆ ನಿದಾನವಾಗಿ ನಡೆಯುತ್ತಿತ್ತು. ಅಭ್ಯಾಸ ಬಲದಿಂದಲೋ ಅಥವ ಪರಿಹಾರವಾಗಿಯೋ ಅವಳಿಗೆ ತಿಳಿಯದಂತೆಯೇ ನಾಟಕದ ಮಟ್ಟು ಒಂದೊಂದು ಅವಳು ಬಚ್ಚಲಿನಲ್ಲಿದ್ದಾಗ ಅವಳಿಂದ ಹೊರಟುಬಿಡುತ್ತಿತ್ತು. ಆಗ ಅವಳಿಗೆ ಯಾವುದೋ ಮೋಹ ಮುಸುಕಿದಂತಾಗಿ ನೀರು ಹುಯ್ದುಕೊಳ್ಳುತ್ತಿದ್ದರೆ ಹಾಗೇ, ಸೀರೆಯುಡುತ್ತಿದ್ದರೆ ಹಾಗೇ ಕೆಲಸ ನಿಂತುಹೋಗುತ್ತಿತ್ತು. ಮೈಗೆ ಚಳಿಯಾದಾಗಲೇ ಅವಳು ಎಚ್ಚೆತ್ತು ಪೂರ್ತಿಮಾಡುತ್ತಿದ್ದಳು. ಇದಾದ ಮೇಲೆ ತಲೆ ಬಾಚುವುದು. ನಾಟಕದ ದಿನಗಳಲ್ಲಿ ಅವಳು ಇದಕ್ಕೆ ಕೊಟ್ಟ ಪ್ರಾಧಾನ್ಯ ಅಷ್ಟಿಷ್ಟಲ್ಲ. ಕನ್ನಡಿಯ ಮುಂದೆ ಅದೆಷ್ಟು ಹೊತ್ತನ್ನು ಕಳೆಯುತ್ತಿದ್ದಳೋ ಏನೋ. ಅದೇ ಸುಲಭವಾಗಿ ಮೆಚ್ಚಿಕೆಯಾಗದ ಸ್ವಭಾವ ಈಗಲೂ. ಕನ್ನಡಿಯ ಮುಂದೆ ಕುಳಿತು ತನ್ನ ಕೇಶರಾಶಿಗೆ ಬರಿಯ ಕೊಬ್ಬರಿ ಎಣ್ಣೆಯನ್ನು ತೊಡೆದು—ವಾಸನೆಯ ಎಣ್ಣೆಯನ್ನು ಕಂಡು ಯಾವುದೋ ಕಾಲವಾಗಿತ್ತು—ತಲೆಯನ್ನು ಬಾಚುತ್ತ ಬಾಚುತ್ತ ಇದ್ದಂತೆಯೇ ಅವಳ ದೃಷ್ಟಿ ಮುಖದ ಪ್ರತಿಬಿಂಬದ ಮೇಲೆ ನಟ್ಟು, ಬಾಚಣಿಗೆಯ ಕೈ ನಿಂತೇ ಹೋಗುತ್ತಿತ್ತು. ಆ ಗುಳಿಗಣ್ಣುಗಳು, ಬಿಳಿಚು ಕೆನ್ನೆಗಳು, ಚೂಪುಗಲ್ಲ, ತೆಳುಗೊರಳು ತನ್ನವೇ, ಇಂತಹವಳನ್ನು ರಾಜ ಇನ್ನೂ ಪ್ರೀತಿಸುತ್ತಿದ್ದಾನೆಯೇ, ಹೀಗೇ ಆದರೆ ಇನ್ನೂ ಎಷ್ಟು ಕಾಲ ಆಕರ್ಷಣೆ ಇದ್ದೀತು, ಎಂಬ ಅನುಮಾನವೇ ಬಂದುಬಿಡುತ್ತಿತ್ತು. ಗಂಡಸರು ಹೆಂಗಸರಿಗಿಂತಲೂ ಚಂಚಲ ಸ್ವಭಾವದವರೆಂಬ

ಅವಳ ನಂಬಿಕೆ ಭಯವನ್ನುಂಟುಮಾಡುತ್ತಿತ್ತು. ಈ ಭ್ರಾಂತಿಯಿಂದ ಬಿಡಿಸಿ ಕೊಂಡ ಮೇಲೆಯೇ ಮತ್ತೆ ತಲೆ ಬಾಚುತ್ತಿದ್ದದು. ಎಷ್ಟೆಷ್ಟು ಬಾಚಿದರೂ ಕೂದಲು ಹಿಂದಿನಂತೆ ಕಪ್ಪಗೆ ಮಿಂಚುತ್ತಿರಲಿಲ್ಲ. ಬಾಚಿ ಬಾಚಿ ಸೋತು ಅವಳು 'ವಯಸ್ಸಾಗುತ್ತಿದೆಯೇನೊ, ಆ ಮಿಂಚು ಮಾಸುತ್ತ ಬಂದಿರ ಬಹುದು' ಎಂದುಕೊಂಡು ಹೆಣೆಯಲುಪಕ್ರಮಿಸುತ್ತಿದ್ದಳು. ಆದರೆ ಈ ಸಮಾಧಾನದ ಹಿಂದೇ 'ಈಗೆಷ್ಟು ಕಾಲ ಕಳೆದಿದೆ? ಮೂರೇ ವರ್ಷವಲ್ಲ!' ಎಂದು ನಿಟ್ಟುಸಿರೂ ಬರುತ್ತಿದ್ದಿತು. ಇದನ್ನೆಲ್ಲ ಮರೆಸುವ ಆಕರ್ಷಣೆಯೋ ಎನ್ನುವಂತೆ ದುಂಡು ಕುಂಕುಮವನ್ನು ಬಹಳ ಎಚ್ಚರಿಕೆಯಿಂದ ಇಟ್ಟು ಕೊಳ್ಳುತ್ತಿದ್ದಳು. ಆದರೂ ಮತ್ತೆ ಮತ್ತೆ ನೋಡಿಕೊಂಡು ಮುನಿಸಾಗು ತ್ತಿದ್ದಳು. 'ಏನೋ ಸ್ವಲ್ಪ ಮುಖ ಹೀಗಿರಬಹುದು. ಸ್ವಲ್ಪ ವಿಶ್ರಾಂತಿ ಸರಿಯಾಗಿ ಸಿಕ್ಕಿದರೆ ಸರಿಹೋದೀತು. ಬಾಕಿಯದೆಲ್ಲ....' ಎಂದುಕೊಳ್ಳುತ್ತ ಸಮಾಧಾನಕ್ಕೆ ಯತ್ನಿಸಿ, ಯಾಕೋ ಬೇಸರವಾಗಿ ಕನ್ನಡಿಯನ್ನು ಮಗುಚು ತ್ತಿದ್ದಳು. ಆದರೆ ಮರುಕ್ಷಣದಲ್ಲಿಯೇ ಮತ್ತೆ ಮುಖಕ್ಕೆ ತಿರಿಗಿಸುತ್ತಿದ್ದಳು. ಆಯಾಸದಿಂದ ಮೇಲೆದ್ದು ರಾಜನ, ತನ್ನ ಬಟ್ಟೆಗಳನ್ನು ಹಿಂಡಿಹಾಕು ತ್ತಿದ್ದಳು. ಆಗ ಅಲ್ಲಲ್ಲಿ ಕಾಣುತ್ತಿದ್ದ ಅಡ್ಡ ಹೊಲಿಗೆಗಳು ಅವಳ ಕಣ್ಣನ್ನು ತಿವಿಯುತ್ತಿದ್ದುವು. ಬಟ್ಟೆಯನ್ನು ಹರವಿದ ಮೇಲೆ ಊಟ-ಒಂಟಿಯಾಗಿ ಕುಳಿತು ಊಟ, ತಾನೇ ತಯಾರಿಸಿದ್ದ ಊಟ. ಊಟವನ್ನು ಏತಕ್ಕೆ ಮಾಡಬೇಕೆಂಬುದೇ ಅವಳಿಗೆ ಗೊತ್ತಾಗುತ್ತಿರಲಿಲ್ಲ-ಅನೇಕ ವೇಳೆ. ಮುಖ ತೊಳೆದಂತೆ, ಮಡಿಯುಟ್ಟಂತೆ ಅದೂ ಒಂದು ಪದ್ಧತಿ, ಆಚಾರವಾಗಿ ಬಿಟ್ಟಿತ್ತು; ನಡೆಯುತ್ತಿತ್ತು. ಈ ಸಾಗದ ಊಟ ಮುಗಿದು ಕೈ ತೊಳೆಯುವ ಹೊತ್ತಿಗೆ ಹನ್ನೆರಡೂವರೆ ಒಂದು ಗಂಟೆಯ ಸಮಯ. ಮುಂದಿನ ಅಡಿಗೆಗೆ ಅಕ್ಕಿ ಆರಿಸುವ ನಿತ್ಯ ಕೆಲಸ, ಜತೆಗೆ ಬಟ್ಟೆಗಳಿಗೆ ಹೊಲಿಗೆ ತೇಪೆಗಳನ್ನು ಹಾಕುವ ಕೆಲಸ, ಹಾಸಿಗೆ ಬಟ್ಟೆಗಳನ್ನು ಬಿಸಿಲಿಗೆ ಹಾಕಿ ತೆಗೆದಿಡುವ ಕೆಲಸ, ಮನೆಯ ಇಲ್ಲಣವನ್ನು ತೆಗೆದುಹಾಕುವ ಕೆಲಸ, ಮನೆಗೆ ಬೇಕಾದ ಸಾಮಾನು ಗಳನ್ನು ತರುವ ಕೆಲಸ, ಏನಾದರೊಂದು ಇದ್ದೇ ಇರುತ್ತಿತ್ತು. ಅಕ್ಕಿ ಯನ್ನು ಆರಿಸುವಾಗ ಬೆನ್ನು ನೋವು ಬರುತ್ತಿತ್ತು, ಬಟ್ಟೆ ಹೊಲಿಯುವಾಗ ಕಣ್ಣಿಗೆ ಆಯಾಸವಾಗುತ್ತಿತ್ತು. ಎರಡಕ್ಕೂ ಹೆಚ್ಚಾಗಿ ತಡೆಯಲಾರದ

ಜೊಂಪು ಹತ್ತುತ್ತಿತ್ತು. ದಿನವೆಲ್ಲ ದುಡಿತ, ರಾತ್ರಿಹೊತ್ತು ಗೊತ್ತಿಲ್ಲದ ಹುಚ್ಚು–ಯಾವಯಾವುದು ಕಡಿಮೆಯಾಗಿದ್ದರೂ ತಾನು ಕಡಿಮೆಯಾಗ ದಿದ್ದ ಕಾಮ ಕೇಳಿ–ಮುಂಚೆ ಏಳುವ ಆತಂಕ, ಇನ್ನು ಯಾವಾಗಲೂ ಕಣ್ಣೆಳೆಯದೆ ಇರುತ್ತವೆಯೆ ? ಒಂದೊಂದು ದಿನ ಅಕ್ಕಿಯನ್ನು ಬೆಳಿಗ್ಗೆ ದೀಪ ದಲ್ಲೇ ಆರಿಸಿಕೊಂಡರಾಯಿತೆಂದು ಹಾಗೇ ಬಿಟ್ಟೋ ಹೊಲಿಯುತ್ತಿದ್ದ ಬಟ್ಟೆ ಯನ್ನು ಅತ್ತ ಕಡೆಗೆ ಎಸೆದೋ, ಬಾಕಿಯ ಕೆಲಸವನ್ನು ಮುಂದುಹಾಕಿ ಮಲಗೇಬಿಡುತ್ತಿದ್ದಳು. ಎರಡು ಗಂಟೆಯೊಳಗೇ ಎದ್ದರೂ ಆಯ್ಯೋ, ಮಲಗಿದ್ದೆನಲ್ಲ, ಅದು ಮಾಡಿದ್ದರಾಗಿತ್ತು, ಇದು ಮಾಡಿದ್ದರಾಗಿತ್ತು ಎನ್ನುವ ಪರಿತಾಪ. ಆದರೆ ಎರಡೂವರೆ, ಮೂರಕ್ಕೇ ಎದ್ದುಬಿಟ್ಟರಂತೂ ಅವಳಿಗೆ ಅಪರಾಧ ಮಾಡಿದಂತೇ ಭಾವನೆ ಬರುತ್ತಿದ್ದಿತು. ರಾಜ ಅಷ್ಟೊಂದು ದುಡಿದು, ಹಸಿದು, ದಣಿದು ಏಳು ಏಳೂವರೆ ಗಂಟೆಗೆ ಹಿಂದಿರುಗಿ ದಾಗ ಅಡಿಗೆ ಸಿದ್ಧವಾಗಿರಬೇಡವೆ? ತನಗೆ ಅದೇನು ಸ್ವಲ್ಪಹೊತ್ತು ಹಿಡಿಯುತ್ತಿತ್ತೆ? ಅದೇ ಒಲೆ ಹತ್ತಿಸಿ, ಅಕ್ಕಿ ಬೇಳೆ ಆರಿಸಿ ತೊಳೆದು, ಕಾಯಿ ಪಲ್ಯ ಹೆಚ್ಚಿ, ಅದೇ ದಡಬಡ–ಛಿ, ಛೀ ! ಮಲಗಬಾರದಾಗಿತ್ತು. ದುರ ಭ್ಯಾಸ ! ನಾಳೆಯಿಂದ ಎಂದೆಂದಿಗೂ ಮಧ್ಯಾಹ್ನ ಮಲಗುವಂತಿಲ್ಲ. ಆದರೆ ಈ ಶಪಥ ಮಾಡಿಕೊಂಡಿದ್ದೆಷ್ಟು ಬಾರಿಯೋ ಮುರಿದದ್ದೂ ಸುಮಾರು ಅಷ್ಟೇ ಬಾರಿ ಎನ್ನಿಸುತ್ತಿತ್ತು.

ಅಂತೂ ಆರು ಗಂಟೆಗೆ ಅಡಿಗೆಯನ್ನು ಮುಗಿಸಿ, ಮಣೆ, ತಟ್ಟೆ ಬಟ್ಟಲು ಗಳನ್ನಿಟ್ಟು, ಬೆವರಿದ ಮುಖವನ್ನು ಮತ್ತೊಮ್ಮೆ ಚೆನ್ನಾಗಿ ತೊಳೆದು, ಕುರುಳನ್ನು ಮತ್ತೊಮ್ಮೆ ಸ್ವಲ್ಪ ಬಾಚಿ ಮುಂಗುರುಳನ್ನು ತಿದ್ದಿ, ಮುದ್ದಾಗಿ ಕುಂಕುಮವಿಟ್ಟು, ಸೀರೆ ರವಿಕೆಗಳನ್ನು ಹರಕು ಹೊಲಿಗೆಗಳು ಕಾಣದಂತೆ ಮಡಿಸಿ ಸ್ವಲ್ಪ ಠೀವಿಯಾಗಿಯೇ ಸರಿಪಡಿಸಿಕೊಂಡು, ದಣಿವನ್ನೂ, ಬೇಸರ ವನ್ನೂ ಮರೆಸುವ ಮುಗುಳುನಗೆಯನ್ನೇ ಮುಖಕ್ಕೆ ಹೊದಿಸಿಕೊಂಡು, ಆಗಾಗ ಜಗಲಿಗೆ ಹೋಗಿ ಬರುತ್ತಲೋ, ಅಲ್ಲೇ ಕುಳಿತೋ, ರಾಜನ ಸ್ವಾಗತ ಕ್ಕಾಗಿ ಕಾದಿರುತ್ತಿದ್ದಳು. ದಾರಿಯಲ್ಲಿ ಹೋಗುವ ಜನರು ಇವಳನ್ನು ಜಗಲಿಯ ಮೇಲೆ ಕಂಡಾಗ ತಪ್ಪದೆ ದಿಟ್ಟಿಸಿ ನೋಡುತ್ತಿದ್ದರು. ಅವಳ ಮುಖದಲ್ಲಿ ಇನ್ನೂ ಆ ಮೋಡಿಯಿತ್ತು. ಅಲ್ಲಿನ ಸುತ್ತುಮುತ್ತಿನ ಜನಕ್ಕೆಲ್ಲ

ಇವರ ಕತೆ ಗೊತ್ತಾಗಿತ್ತು. ಇವಳನ್ನು ಕಂಡಾಗ ಪಿಸಿಗುಟ್ಟಿಕೊಳ್ಳುತ್ತಿದ್ದರು. ಕೆಲವರು 'ಒಳ್ಳೆ ಗರತಿ, ಅಹಹ!' ಎಂದು ಹಂಗಿಸಿಕೊಂಡರೆ ಇನ್ನು ಕೆಲ ವರು 'ಎಂಥ ಚಲುವೆ. ಒಳ್ಳೆಯ ನಟಿ ಬೇರೆ. ಇವಳಿಗೇನು ಬಂದಿತ್ತು ಹುಚ್ಚು, ಇವನೊಡನೆ ಈ ಪಾಡು ಪಡೋದಕ್ಕೆ. ತನಗೂ ನಷ್ಟ, ರಂಗ ಭೂಮಿಗೂ' ಎಂದುಕೊಳ್ಳುತ್ತಿದ್ದರು. ರಾಜನೂ ಎಷ್ಟು ಸೋತಿದ್ದರೂ ಇವಳ ಮುಖವನ್ನು ನೋಡಿ ಪರಿಹಾರ ಹೊಂದಿ ಹರ್ಷನಗೆಯನ್ನೇ ತೋರಿಸುತ್ತಿದ್ದ. ಆದರೆ ಅದು ಪ್ರಯತ್ನದ ಫಲವೆಂದು ಅವಳಿಗೆ ಆಗಾಗ ಅನ್ನಿಸುತ್ತಿತ್ತು. ಒಳಗೆ ಬಂದೊಡನೆ ಒಂದೊಂದು ದಿನ ಮುತ್ತಿನ ಮಳೆಯೋ ಸುರಿಯುತ್ತಿತ್ತು; ತಬ್ಬಿಕೊಂಡೇ ಸೆಳೆದುಕೊಂಡೇ ಒಳಗೊಯ್ಯು ತ್ತಿದ್ದ. ಆದರೆ ಒಂದೊಂದು ದಿನ ಒಂದು ಕೆನ್ನೆಯ ಮುತ್ತೋ, ಅಥವ ಬೆರಳಿನ ಸೋಂಕೋ, ತಲೆದಡವೋ ಇಷ್ಟರಲ್ಲೇ ಮುಗಿಯುತ್ತಿತ್ತು. ಅವ ಳಿಗೆ ಪ್ರತಿಫಲ ಕಡಿಮೆಯಾದಾಗಲೂ, ಈಚೀಚೆಗೆ ಆಗುತ್ತಿದ್ದಂತೆ ಏನೊಂದೂ ಇಲ್ಲದೆಯೇ ಹೋದಾಗಲೂ ಅವನ ಸ್ಥಿತಿಯನ್ನು ನೆನೆದು ಅವಳು ಸಮಾ ಧಾನ ತಂದುಕೊಳ್ಳುತ್ತಿದ್ದಳು.

ಮಣಕು ಕೋಟು ಟೋಪಿಗಳನ್ನು ಗೂಟಕ್ಕೆ ಹಾಕಿ ಕೈಕಾಲು ತೊಳೆದು ನೇರವಾಗಿ ಊಟಕ್ಕೆ ಕುಳಿತಾಗ ಅವಳು ಅವನ ಬಳಿಯೇ ಕುಳಿತು ಬಡಿಸುತ್ತಿದ್ದಳು. ಮಾತೆಂದರೆ ಆಫೀಸಿನ ಕಷ್ಟ, ಏರುತ್ತಿದ್ದ ಬೆಲೆ, ಇಲ್ಲದ ಸಾಮಾನು ಇವೇ ಹೆಚ್ಚಾಗಿರುತ್ತಿದ್ದುವು. ಅವಳೇನೋ ಅಭಾವದ ವಿಷಯ ವನ್ನು ಆ ಹೊತ್ತಿನಲ್ಲಿ ಹೇಳಲೇಬಾರದೆಂದಿದ್ದರೂ ಅಡಿಗೆಯಲ್ಲಿ ಆದ ಯಾವುದೋ ಕುಂದು–ತರಕಾರಿಯಿಲ್ಲದುದು, ಬೇಳೆಯಿಲ್ಲದೆ ಹುಣಿಸೆ ನೀರು ಮಾಡಿದ್ದು ಹೀಗೆ–ಈ ವಿಷಯವನ್ನು ಹೇಗೋ ಮಾತಿಗೆ ಎಳೆದುಬಿಡುತ್ತಿತ್ತು. ಆಫೀಸಿನಲ್ಲಿ ಯಾರೋ ಏನೋ ಅಂದ ಸಣ್ಣ ಮಾತು, ಈವರೆಗೂ ದೊರಕಿರ ದಿದ್ದ ಬಡ್ತಿ–ಎಂತಹದೋ ಒಂದು ಆಫೀಸಿನ ದುಃಖವನ್ನೋ; ಹರಿದ ಎಕ್ಕಡದ ಮಾತೋ; ವಿಚಾರಿಸಿಯೂ ಕೊಳ್ಳಲಾಗದಿದ್ದ ಜಾಕೀಟು ಬಟ್ಟೆಯೋ, ಹೊಸ ಟೋಪಿಯೋ, ಹೂವೋ, ಹುರುಳಿಕಾಯೋ, ಇಂತಹ ಯಾವುದೋ ಒಂದು–ಇವೇ ಮಾತಿನ ವಿಷಯಗಳಾಗಿದ್ದುವು. ಇವು ಸಹಜ ವಾಗಿಯೇ ಧನಿಕ, ದರಿದ್ರರ ವಿಷಯವನ್ನು ತಂದು ಅವನಿಂದ ವಿಷವನ್ನು

ಕಾರಿಸುತ್ತಿದ್ದುವು--ಸಂಕಟವನ್ನು ಹೆಚ್ಚಿಸುತ್ತಿದ್ದುವು. ಮೊದಮೊದಲು ಅವನು ಅವಳು ಮಾಡಿದ್ದ ಚಟ್ನಿಯನ್ನೋ, ಪಲ್ಯವನ್ನೋ, ಸಾರಿನ ವಾಸನೆಯನ್ನೋ, ಕಡೆಗೆ ಅನ್ನದ ಹದವನ್ನೋ ಹೊಗಳಿ ಹೊಗಳಿ ಅಟ್ಟಕ್ಕೇರಿಸುತ್ತಿದ್ದ. ಅವಳು ಸಂತೋಷದಿಂದ ಉಬ್ಬುತ್ತಿದ್ದಳು. ಕ್ರಮೇಣ ಇದು ಸಣ್ಣಸಣ್ಣ ಆಕ್ಷೇಪಣೆಗಳಿಗೆ ಎಡೆಕೊಡುತ್ತ ಬಂದಿತು. 'ಈ ದಿನ ಸಾರು ಹಿಂದಿನಂತಿಲ್ಲ' 'ಹುಳಿ ಯಾಕೆ ಹೀಗಿದೆ. ಏನೋ ಆಗಿದೆ' ಎನ್ನುತ್ತಿದ್ದಾಗ ಅವಳು ಮೊದಮೊದಲು ವಿನೋದದಿಂದ 'ನಿಮ್ಮ ನಾಲಿಗೆಗೆ ಏನೋ ಆಗಿದೆ ಅಷ್ಟೆ', 'ಯಾಕೋ ಕುಸುಬಷ್ಟೆ ಜಾಸ್ತಿ ಆಯ್ತು', 'ನಿಮ್ಮನ್ನು ತೃಪ್ತಿಗೊಳಿಸೋದಕ್ಕೆ ಆಗೋದಿಲ್ಲ ಬಿಡಿ' ಎಂದು ತನ್ನ ಅಡಿಗೆಯನ್ನು ಸಾಧಿಸಿಕೊಳ್ಳುತ್ತಿದ್ದಳು. ಅದಷ್ಟು ಮಾತು ಕತೆಗಾದರೂ ಎಡೆಕೊಡುತ್ತಿತ್ತು. ಆದರೆ ಇತ್ತೀಚೆಗೆ ಉಭವೂ ಇಲ್ಲ ಶುಭವೂ ಇಲ್ಲ. ಅಡಿಗೆ ಹೇಗಿದ್ದರೂ ಅವನು ಮಾತಾಡುತ್ತಿದ್ದುದೇ ಕಡಿಮೆ. ಈ ಮೌನ ಅವಳಿಗೆ ಹಿಂಸೆಯಾಗಿತ್ತು. ಸ್ಪಷ್ಟವಾಗಿ ಕೇಳಿದರೂ ತಲೆಯಾಡಿಸುವುದೇ ಬಹಳ. ಅವಳಿಗೆ ನಿರುತ್ಸಾಹವಾಗುತ್ತಿತ್ತು. ಈಚೀಚೆಗೆ ಕೆದಕಿ ಕೇಳುವುದನ್ನೇ ಬಿಟ್ಟಿದ್ದಳು. ಬಾಕಿಯ ಮಾತಾಡುವಾಗಲೂ ಸ್ವಲ್ಪ ಭಯವೇ. ಹಿಂದೆಂದರೆ ಎಷ್ಟು ಹರಟೆ ಕೊಚ್ಚಿದರೂ ತಾನೂ ಸೇರಿಕೊಳ್ಳುತ್ತಿದ್ದ. ಇತ್ತೀಚೆಗೆ ಒಂದು ಆಡಿದರೆ ಕಡಿಮೆಯೇನೋ ಎರಡು ಆಡಿದರೆ ಹೆಚ್ಚೇನೋ ಎನ್ನುವಂತೆ ಅವಳಿಗೆ ಅನ್ನಿಸುತ್ತಿತ್ತು—ಅವನ ಮುಖವನ್ನು ನೋಡುತ್ತಿದ್ದಾಗ. ಕೇಳಿದಷ್ಟಕ್ಕೆ ಉತ್ತರ ಕೊಡುವುದನ್ನು ಅಭ್ಯಾಸ ಮಾಡುತ್ತಿದ್ದಳು. ಆದರೂ ಅವನು ಮಾತಿಗೆಳೆಯುದ ಇರುತ್ತಿರಲಿಲ್ಲ. ಆಗೀಗ ವಿನೋದವೂ ನಡೆಯುತ್ತಿತ್ತು. ಆಡುತ್ತ ಆಡುತ್ತಲೇ ಅವನಿಗೆ ಯಾವಾಗ ಬೇಸರ ಬರುತ್ತಿದ್ದಿತೋ ಅವಳಿಗೆ ತಿಳಿಯುವುದೇ ಕಷ್ಟವಾಗಿತ್ತು. ಎಚ್ಚರಿಕೆಯೇ ಹಿಂಸೆಯಾಗಿತ್ತು. ಒಂದೊಂದು ವೇಳೆ 'ಇದೇನು ನಾನು ಬೇಡವಾಗುತ್ತಿದೀನೇ? ಹೆಂಡತಿ ಎನ್ನುವ ಅಸಡ್ಡೆಗೆ ಒಳಗಾಗಿದೀನೇ? ಈ ಸಂಬಂಧದ ರೀತಿಯೇ ಹೀಗೋ. ಹೊಸ ಹುಮ್ಮಸು ಕಳೆದ ಮೇಲೆ ಎಲ್ಲರೂ ಹೀಗೇ ಆಗಬೇಕೋ. ಹಾಗಾದರೆ ಸಂಸಾರವೇ ತಪ್ಪಾಯಿತಲ್ಲ. ಹೊರ ಮರ್ಯಾದೆಯಿಂದ ಏನು ಫಲ—ಒಳ ತೃಪ್ತಿಯಿಲ್ಲದ? ಅಥವ ಅವರ ಸ್ವಭಾ

ವವೇ ಬದಲಾಯಿಸುತ್ತಿದೆಯೇ? ಛಿ, ಛಿ, ಅವರ ಕಷ್ಟ, ಹೊರ ಬೇಸರ ಅವರ ನಯ, ದಯಗಳನ್ನು ಆಗಾಗ ಮಾರ್ಪಡಿಸುತ್ತಿರಬೇಕು. ಏನೋ ಸ್ವಲ್ಪ ಬದುಕಿನ ಸ್ಥಿತಿ ಬದಲಾಯಿಸಿದರೆ ತಿಳಿದುಕೊಳ್ಳಬಹುದಲ್ಲ. ಈಗ ನಿಷ್ಠುರ ಮಾಡಿದರೆ ತಪ್ಪಾದೀತು. ಪಾಪ, ಯಾವಾಗಲೂ ದಣಿದ ಮನಸ್ಸು ವೈ ಅವರದ್ದೂ' ಎಂದುಕೊಂಡು ಸೈರಿಸಿಕೊಳ್ಳುತ್ತಿದ್ದಳು. ಆದರೂ ಆಗಾಗ ಎದೆ ಕಿವುಚುವುದು ತಪ್ಪುತ್ತಿರಲಿಲ್ಲ.

ಕೈ ತೊಳೆದೊಡನೆ ಹಾಸಿಗೆಯ ಮೇಲೆ ಕಾಲುಚಾಚಿ ಮೂರು ಕಾಸಿನ ಹಾಳೆಯನ್ನು ಹಿಡಿದುಕೊಳ್ಳುತ್ತಿದ್ದ. ಇವಳು ಊಟ ಮುಗಿಸಿ, ತೊಳೆದು, ಬಳಿದು, ಮುಚ್ಚಿರಿಸಿ ಒಪ್ಪ ಓರಣ ಮಾಡಿ, ಬಾಗಿಲನ್ನು ಮುಂದ ಕ್ಕೆಳೆದುಕೊಂಡು ಮಲಗುವ ಮನೆಯನ್ನು ಸೇರುವ ಹೊತ್ತಿಗೆ ಒಂಭತ್ತೂವರೆ, ಹತ್ತು. ಸಾಮಾನ್ಯವಾಗಿ ರಾಜನ ಮುಖದ ಮೇಲೋ, ಎದೆಯ ಮೇಲೋ ಪತ್ರಿಕೆಯಿರುತ್ತಿತ್ತು; ದೀಪ ಉರಿಯುತ್ತಿರುತ್ತಿತ್ತು. ಲಾಂದ್ರದ ದೀಪವನ್ನು ಸಣ್ಣದು ಮಾಡಿ ಮೂಲೆಗಿಟ್ಟು ಅವನ ಪಕ್ಕವನ್ನು ಸೇರಿದಾಗ ಅವನಿಗೆ ಒಂದು ನಿದ್ದೆಯಾಗಿದ್ದು ಸಾಮಾನ್ಯವಾಗಿ ಎಚ್ಚರವಾಗುವ ಅಭ್ಯಾಸವಾಗಿ ಹೋಗಿತ್ತು. ಹೀಗೆ ಆಗಲೇ ಆಗದಿದ್ದರೆ ಇನ್ನು ಸ್ವಲ್ಪ ಹೊತ್ತಿಗಾದರೂ ಎದ್ದು ಅವಳನ್ನು ತನ್ನ ಬಳಿಗೆ ಮೃದುವಾಗಿ ಎಳೆದುಕೊಳ್ಳುತ್ತಲೋ, ಮುಖ ಸವರಿಯೋ, ಮುತ್ತುಕೊಟ್ಟೋ ಆಗ ತಾನೆ ಹತ್ತಿದ್ದ ನಿದ್ದೆಯಿಂದ ಅವಳನ್ನು ಎಬ್ಬಿಸುತ್ತಿದ್ದ. ಒಂದೊಂದು ದಿನ ಮಾತ್ರ ಅವಳೇ ಅವನ ಮುಖದ ಪತ್ರಿಕೆಯನ್ನು ತೆಗೆಯುವಾಗಲೋ, ಹೊದಿಕೆ ಹೊದಿಸಿದಾಗಲೋ, ಕ್ರಾಪನ್ನು ನೇವರಿಸಿದಾಗಲೋ ಅವನ ಎಚ್ಚರಕ್ಕೆ ಕಾರಣಳಾಗುತ್ತಿದ್ದಳು. ಸರಿ, ಪ್ರಣಯಾಂಕ ಮೊದಲಾಗಿ ಕಾಮಾಂಕ ಮುಗಿಯಬೇಕಾದರೆ ಅದೆಷ್ಟೋ ಹೊತ್ತಾಗಿ ಹೋಗುತ್ತಿತ್ತು. ದಿನಗಳು ಕಳೆದಂತೆ ಮೊದಲನೆಯ ಅಂಕ ಹ್ರಸ್ವವಾಗುತ್ತಿದ್ದಂತೆ ಅವಳಿಗೆ ತೋರುತ್ತಿತ್ತು. ದಿನದ ದುಡಿತದಿಂದ ಎಷ್ಟು ದಣಿದಿದ್ದರೂ ಈ ನಿತ್ಯದ ಹುಚ್ಚು ಅವಳಿಗೆ ಅಷ್ಟಿಷ್ಟು ಹಿತವೇ. ಅವನ ಭಾವನೆಗಳ ಮೇಲೆ ದಿನದ ನಡೆವಳಿಕೆ ಅನುಮಾನ ತಂದಿದ್ದರೆ ರಾತ್ರಿ ಅವನ ಹುಚ್ಚಾಟ 'ತನ್ನ ಆಕರ್ಷಣೆ ಇನ್ನೂ ಇಷ್ಟೊಂದು ಇದೆಯಲ್ಲ' ಎಂಬ ಭರವಸೆಯನ್ನುಂಟುಮಾಡುತ್ತಿತ್ತು. ಆದರೆ ಹೊತ್ತು ಕಳೆದಂತೆ

ಅವಳಿಗೆ ಆಯಾಸ ಹೆಚ್ಚುತ್ತಿತ್ತು, ನಿದ್ದೆ ಎಳೆಯುತ್ತಿತ್ತು, ಆಗಾಗ ಬೇಸ
ರವೂ ಆಗುತ್ತಿತ್ತು. ಆಗ ಅವಳು ಅದನ್ನೆಲ್ಲ ಮರೆಸಿಕೊಂಡು ಮೃದುವಾಗಿ
"ಹೊತ್ತಾಗಲಿಲ್ಲವೆ? ಬೆಳಿಗ್ಗೆ ಏಳಬೇಕಲ್ಲ, ದಿನವೆಲ್ಲ ದಣಿಯೋದಕ್ಕೆ,"
ಎಂದರೆ ಅವನು "ನಂಗೇನು, ಏಳಕ್ಕೆ ಏಳೋನು. ನೀನು ತಾನೆ ಮುಂಚೆ
ಏಳಬೇಕು. ಮುಂಚೆ ಮಲಗಿಕೋಬೇಕೇ?" ಎಂದು ಅರ್ಧ ಅಪರಾಧಿ
ಯಂತೆ, ಅರ್ಧ ನೊಂದವನಂತೆ ಹೇಳಿದರೆ ಅವಳು ಏನು ಉತ್ತರವನ್ನು
ಕೊಡಬೇಕು? ಅವನ ಆಳದ ಕಣ್ಣಿನ ಉರಿಯನ್ನು ಮೆಲ್ಲಗೆ ನೋಡು
ತ್ತಿದ್ದಳು; ತನ್ನ ತೆಳುವಾದ ಕೈಬೆರಳನ್ನು ಅವನ ಬತ್ತಿದ ಕೆನ್ನೆಯ ಮೇಲೆ
ಸರಿಸಿ ಅವನ ಕ್ರಾಪಿನೊಳಕ್ಕೆ ಹೊಗಿಸಿ ಅವನ ತಲೆಯನ್ನು ಮೃದುವಾಗಿ
ಸೆಳೆದುಕೊಂಡು ತನ್ನ ಎದೆಯ ಮೇಲೆ ಒರಗಿಸಿಕೊಳ್ಳುತ್ತಿದ್ದಳು-ತನ್ನಂ
ತೆಯೇ ಬೇರೆ ಯಾವ ಸುಖವನ್ನೂ ಕಾಣದ ಪ್ರಾಣಿ, ಪಾಪ ಎಂದುಕೊಂಡು.
'ನಿಮಗಾಗಿ ಹೇಳಿದ್ದು' ಎಂದು ಪಿಸಿಗುಟ್ಟುತ್ತಿದ್ದಳು. ಇದು ಅವನ ಬತ್ತು
ತ್ತಿದ್ದ ಹುಚ್ಚಿಗೆ ಜೀವದಾನ ಮಾಡುತ್ತಿತ್ತು. ಎಂತಾದರೂ ಮತ್ತೆ ಮೊದಲು
ಮಲಗುತ್ತಿದ್ದವನು ಅವನೇ. ಇನ್ನೂ ಸ್ವಲ್ಪ ಕಾಲ ಅವಳು ಕಣ್ಣು ಬಿಟ್ಟು
ಕೊಂಡು ಯೋಚನೆ ಮಾಡುತ್ತ ಮಲಗಿರುತ್ತಿದ್ದಳು. ಆಗ ತನ್ನ ಹಿಂದಿನ
ಜೀವನ ಅವಳ ಮುಂದೆ ಹಾಯ್ದು ಹೋಗುತ್ತಿತ್ತು. ತನಗೆ ಗೊತ್ತಿಲ್ಲ
ದಂತೆಯೇ ನಿಟ್ಟುಸಿರು ತಪ್ಪಿಸಿಕೊಳ್ಳುತ್ತಿತ್ತು. ಆಗ ಅವಳು 'ಇದೇನು
ಜೀವನ! ಮರ್ಯಾದೆಯ ಸಂಬಂಧಕ್ಕೆ, ಗರತಿಯ ಜೀವನಕ್ಕೆ ಇಷ್ಟೊಂದು ಬೆಲೆ
ಕೊಡಬೇಕೆ? ಎಂದು ಚಿಂತಿಸುತ್ತಿದ್ದಳು. ಆದರೆ ಅವನ ಕಡೆ ತಿರಿಗಿದಾಗ
ಮಂಕು ದೀಪದ ಬೆಳಕಿನಲ್ಲಿ ಅವನ ಸೋತ ಸಪ್ಪೆಯ ಮುಖ ಕಂಡಾಗ
ಅದೆಲ್ಲ ಮರೆತಂತಾಗುತ್ತಿತ್ತು. ನಿದ್ದೆ ಹತ್ತಿದುದು ಗೊತ್ತಾಗುತ್ತಲೇ ಇರಲಿಲ್ಲ.
ಬೆಳಿಗ್ಗೆ ಎದ್ದಾಗ ಅದೇ ಕಣ್ಣುರಿ ಬಿಗಿತ. ಮಧ್ಯಾಹ್ನ ಅದೇ ಬೀಳುವ
ತೂಕಡಿಕೆ. ಶನಿವಾರ ರಾತ್ರಿಯಾದರೆ ಮುಂಚೆ ಏಳುವ ಆತಂಕವಿರುತ್ತಿರ
ಲಿಲ್ಲ. ಹಾಗೆಂದೇ ಮಲಗುವ ಹೊತ್ತಿಗೂ ಲೆಕ್ಕವೇ ಇರುತ್ತಿರಲಿಲ್ಲ. ಆದರೂ
ಪರವಾಗಿಲ್ಲ-ಈ ನಿರಾತಂಕವೊಂದು ಅವಳು ಕಾಯ್ದಿರುತ್ತಿದ್ದ ಸುಖವೇ.
ಹೀಗೆಂದ ಮೇಲೆ ಬೆಳಿಗ್ಗೆ ಹೊತ್ತಾಗಿ ಎದ್ದ ಗದ್ದಲ, ಭಾನುವಾರವಾದ
ಮೇಲೆ ಅಲ್ಪ ಸ್ವಲ್ಪ ವಿಶೇಷ ಕಟ್ಟಳೆಯ ಭಾರ, ಇವು ತಮ್ಮ ಬೆಲೆಯನ್ನು

ಸಿಳಿಯುವ ಇರುತ್ತಿರಲಿಲ್ಲ. ಎರಡು ಸಾರಿ ಕಾಫಿ, ಏನಾದರೂ ತಿಂಡಿ, ಎಂಟೂ ವರೆಯ ಊಟ ಒಂದು ಗಂಟೆಗೆ, ಮಧ್ಯಾಹ್ನ ಕಾಫಿ, ಮತ್ತೆ ಅದೇ ಅಡಿಗೆಯ ಸಡಗರ--ಇವೆಲ್ಲದರಿಂದ ಅವಳು ಒಂದೊಂದು ಭಾನುವಾರ 'ಸದ್ಯ ಜೇರೆ ದಿನವೇ ವಾಸಿ' ಎಂದುಕೊಳ್ಳುತ್ತಿದ್ದುದೂ ಉಂಟು. 'ಯಾವ ವಾರ ವಾದರೂ ಮುಂಚೆಯೇ ಎದ್ದುಬಿಡುವುದು ಸರಿ. ಹಾಗೇ ಮಾಡುತ್ತೀನಿ. ಈ ಆತುರ ಯಾರಿಂದ ಆಗುತ್ತೆ' ಎಂದು ನಿರ್ಧರಿಸುತ್ತಿದ್ದುದೂ ಉಂಟು. ಆನರೇನು-ಸರಿ ಕೆಕ್ಕೆಯ ಕಾಯಿ ತಿಂದ ಸಮಾಚಾರ-ಆ ಹೊತ್ತಿನ ಕಷ್ಟ ನಿವಾರಣೆಗಾಗಿ ಶಪಥ; ಮತ್ತೆ ಅದೇ ಪದ್ಧತಿಯೇ. ಈ ಸೋತು ಸೊರಗಿದ ಸುತ್ತು ಯಾಂತ್ರಿಕ ಜೀವನದಲ್ಲಿ ಇತರ ವಿನೋದ ಆಮೋದಗಳು ಹಾಗಿರಲಿ, ನಾಲ್ಕು ಹೆಜ್ಜೆಯ ದೂರದಲ್ಲಿದ್ದ ಲಾಲ್‌ಬಾಗಿಗೆ ಕೂಡ ಹೋಗಿಬರುವುದು ಅತಿ ಪ್ರಯಾಸವಾಗಿ ಅಪೂರ್ವವಾಗಿತ್ತು. ಅವನು ಒಂದು ವೇಳೆ ಹೋಗಲು ಕರೆದರೂ ಅವಳು 'ಅಯ್ಯೋ ಯಾರು ಹೋದಾರು. ಇಲ್ಲೇ ಆ ಹೊತ್ತು ಕೂತು ಕಳೆಯೋಣ' ಎನ್ನುತ್ತಿದ್ದಳು. ಅವಳು ಹೇಳದಿದ್ದರೂ ಇದಕ್ಕೆ ಇನ್ನೊಂದು ಕಾರಣವೆಂದರೆ ಅವರ ದರಿದ್ರಾವಸ್ಥೆ. ಒಂದೆರಡು ಬಾರಿ ಮೊಟ್ಟ ಮೊದಲಿನ ಕನಸಿನ ದಿನಗಳಲ್ಲಿ ಅಲ್ಲಿಗೆ ಹೋಗಿದ್ದಾಗ ಅಲ್ಲಿ ಸುಳಿದಾಡುವ ಜನರನ್ನು ಅವಳು ನೋಡಿದ್ದಳು. ಅವರ ಮುಂದೆ ನಡೆದಾಡಲು ಅವಳಿಗೆ ಈಗ ಕೊಂಚವೂ ಮನಸ್ಸಿರಲಿಲ್ಲ. ಅವನು ಅದನ್ನು ಯೋಚಿಸಿಕೊಂಡಿದ್ದನೋ ಇಲ್ಲವೋ ಅಂತೂ ಅವನಿಗೂ ಅವಳ ಸಲಹೆ 'ರೋಗಿಗೆ ಬೇಕಾದದ್ದೂ ಹಾಲು ಅನ್ನ: ವೈದ್ಯ ಹೇಳಿದ್ದೂ ಹಾಲು ಅನ್ನ' ಎಂದಂತೆಯೇ. ಅದು-ಆ ವಿಚಾರ-ಅವಳಿಗಾಗಿಯೇ ಅವನು ಕೊಟ್ಟ ಸೂಚನೆ. ಅಷ್ಟಕ್ಕಷ್ಟೇ. ಭಾನುವಾರ ಒಂದು ದಿನವೂ ಕಾಲೆಳೆದುಕೊಂಡು ಹೋಗುವುದು ಅವನಿಗೆ ..ತವಾಗಿರಲಿಲ್ಲ. ಅಲ್ಲದೆ ಹಿಂದೆ ಕೆಲವು ಬಾರಿ ಹೋಗಿದ್ದಾಗ ಲಾಲ್‌ಬಾಗ್‌ನಲ್ಲಿ ನಲಿದಾಡುತ್ತಿದ್ದ ಷೋಕಿ ಜನರು ಈ ಬೆಡಗಿಯ ಕಡೆಗೆ ದಿಟ್ಟಿಸಿ ನೋಡುತ್ತಿದ್ದುದನ್ನೂ, ಅವಳು ವಾರೆನೋಟದಿಂದ ತನ್ನ ಆಕರ್ಷಣೆಯನ್ನು ಕಂಡುಕೊಳ್ಳುತ್ತಿದ್ದುದನ್ನೂ ಅವನು ಸಹಿಸುತ್ತಿರಲಿಲ್ಲ-ಅಂಥ ವಿಚಿತ್ರ ಮನುಷ್ಯ. ಹೀಗಿದ್ದು ಭಾನುವಾರ ದಿನವೆಲ್ಲ ಮನೆಯಲ್ಲೇ; ಹೊಸಲು ದಾಟುತ್ತಿದ್ದುದೇ ಬಹಳ ವಿರಳ.

ಇಷ್ಟು ವರ್ಷ ಕಳೆದಿದ್ದರೂ ಮಕ್ಕಳಾಗಿರಲಿಲ್ಲ. ಗಂಡ, ಮನೆ, ಗೃಹಿಣಿಯ ಬಾಳು ಇವೆಲ್ಲವೂ ಒಂದು ತೂಕವಾದರೆ ಮಗುವೇ ಒಂದು ತೂಕವೆಂದು ಭಾವಿಸಿ ಆತುರದಿಂದಿದ್ದ ನಾಯಕಿಗೆ ಅದರ ಮುಖ ಕಾಣದಿದ್ದುದು, ಆ ಸೂಚನೆಯೂ ಇಲ್ಲದಿದ್ದುದು ಒಂದು ನಿತ್ಯದ ಕೊರತೆ. ಆಗಲಾದರೂ ಈ ನೀರಸವಾಗುತ್ತಿದ್ದ, ಈ ಬೇಸರಿಕೆಯ ಏಕರೀತಿಯಲ್ಲಿ ಏನಾದರೂ ಬದಲಾವಣೆಯಾದೀತು, ಹೊಸತನ ಹುಟ್ಟೀತು, ರಸಗೂಡೀತು ಎಂದು ಹಾತೊರೆಯುತ್ತಿದ್ದಳು, ಕನಸುಗಾಣುತ್ತಿದ್ದಳು, ನಿರಾಶಳಾಗುತ್ತಿದ್ದಳು. ನಿಜ, ಒಂದೊಂದು ಬಾರಿ 'ಈ ಜೀವನದಲ್ಲಿ ಅದೂ ಹುಟ್ಟಿ ಯಾವ ಸುಖ ಉಣ್ಣಬೇಕು. ಮಕ್ಕಳಿಲ್ಲದಿರೋದೂ ಒಂದು ಒಳ್ಳೇದೆ. ಕೊರತೆಯಾದರೂ, ಇಲ್ಲ ಅನ್ನೋದು ಒಂದೇ ಕೊರತೆ. ಮಗುವಾದಮೇಲೆ–ಅದಕ್ಕೆ ಮುಂಚೆ ಎಷ್ಟೆಷ್ಟು ಕಷ್ಟಗಳೋ, ನೋವುಗಳೋ–ಅದಕ್ಕೆ ಅದಿಲ್ಲ ಇದಿಲ್ಲ ಅನ್ನೋದು ನೂರೆಂಟು ಕೊರತೆ. ನಮಗಾದರೂ ಏನೊಂದು ಇಲ್ಲದೆ ಹೋದರೆ ಪರವಾಗಿಲ್ಲ. ಆದರೆ ಅದಕ್ಕೆ! ........ಉಹುಂ, ಆಗದಿರೋದೇ ಕ್ಷೇಮ, ಕಡಿಮೆ ದುಃಖ' ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದಳು. ಆದರೇನು ಅದು ಅಭಾವವೈರಾಗ್ಯವೆಂದು ಅವಳಿಗೇ ಗೊತ್ತು. ಏನಾದರೂ ತಾಯ್ತನದ ಹಂಬಲು ಬಿಡುತ್ತದೆಯೆ? ಹಿಂದೇ ಬರುತ್ತಿತ್ತು. 'ಅಯ್ಯೋ ಅದೇನು ಭಾರ. ಬೇಕಾದರೆ ಜೀವವನ್ನು ಕೊಟ್ಟಾದರೂ ಸಾಕೇನು. ಅದರೊಂದಿಗಿರುತ್ತ ನಾನೂ ಮಗುವಾದೇನು. ನಂಗೊಂದು ಜೀವದಾನವಾಗುತ್ತೆ. ಇಷ್ಟಕ್ಕೂ ನಾವು ಪಟ್ಟ ಕಷ್ಟಕ್ಕೆ ತಕ್ಕ ಸುಖ–ಇನ್ನೂ ಹೆಚ್ಚು, ನೂರು ಬಾರಿ ಹೆಚ್ಚು ಸುಖವನ್ನು ಕೊಟ್ಟೇ ಕೊಡುತ್ತೆ, ನಂಗೆ, ಅವರಿಗೆ' ಎಂದುಕೊಂಡು 'ಹುಂ, ಆ ಪುಣ್ಯ ಎಂದಿಗೋ' ಎಂದು ಹಲುಬುತ್ತಿದ್ದಳು, ಒದ್ದಾಡುತ್ತಿದ್ದಳು. ತನ್ನ ದಾಹವನ್ನು ತೀರಿಸಿಕೊಳ್ಳಲು ಅಕ್ಕಪಕ್ಕದ, ಎದುರು ಮನೆಗಳ ಮಕ್ಕಳು ಆಟಪಾಟದಲ್ಲಿದ್ದಾಗ ನೋಡುತ್ತ ತನ್ನನ್ನೇ ಮರೆಯುತ್ತಿದ್ದಳು. ಇಂತಹ ಒಂದೆರಡು ಸಂದರ್ಭಗಳಲ್ಲಿ ಎದುರು ಮನೆಯ ಸೀತಮ್ಮನ ಚಂದುವನ್ನೂ ಪಕ್ಕದ ಮನೆಯ ಸಾವಿತ್ರಮ್ಮನ ಪುಟಾಣಿಯನ್ನೂ ಕರೆತಂದು ತಿಂಡಿಕೊಟ್ಟು ಮುದ್ದಾಡಿದ್ದಳು. ಆದರೆ ಇನ್ನೊಂದು ಬಾರಿ ಕರೆದಾಗ ಆ ಮಕ್ಕಳು ಬರಲೇ ಇಲ್ಲ. ಚಂದು 'ಅಮ್ಮ ಬೈತಾಳೆ,

ಎಂದೇ ಹೇಳಿಬಿಟ್ಟ. ಆಗ ಅವಳಿಗೆ ತನ್ನ ದುಃಸ್ಥಿತಿ ಜೋರಾಗಿ ಮತ್ತೆ ತಾಕಿತು. ಸೀತೆ ಸಾವಿತ್ರಿಯರು ಯಾರೂ ಇವಳನ್ನು ಮಾತನಾಡಿಸದಿದ್ದುದು, ಕಂಡಾಗ ಇವಳೇನು ಸಂಕ್ರಾಮಿಕವೋ ಎನ್ನುವಂತೆ ವಿಚಿತ್ರವಾಗಿ ನೋಡುತ್ತಿದ್ದುದು, ಇವಳು ಜಗಲಿಗೆ ಬಂದಾಗ ಅವರು ಎದ್ದು ಒಳಗೆ ಹೋಗುತ್ತಿದ್ದುದು–ಇವೆಲ್ಲವೂ ಮತ್ತೆ ಮತ್ತೆ ಒತ್ತಿ ಬಂದುವು. 'ನಾನೇನು ಮಾಡಿದರೂ ನಂಗೆ ಇವರ ಮಧ್ಯೆ ಮರ್ಯಾದೆಯಿಲ್ಲ' ಎಂದು ನೊಂದುಕೊಂಡಳು. ಮುಂದೆ ಮಕ್ಕಳನ್ನು ಕರೆಯಲಿಲ್ಲ. ಆದರೆ ಅವು ಬೀದಿಯಲ್ಲಿ, ಜಗಲಿಯ ಮೇಲೆ ಆಟವಾಡುತ್ತಿದ್ದಾಗ ದಿಟ್ಟಿಸಿ ನೋಡುತ್ತಿರದೆ ಇರುವುದು ಸಾಧ್ಯವಾಗುತ್ತಿರಲಿಲ್ಲ. ಆ ಸಮಯಗಳಲ್ಲಿ 'ಹೋಗಲಿ, ಇವರು–ದೊಡ್ಡೋರು ಹೇಗಾದರೂ ಇರಲಿ; ಮಕ್ಕಳನ್ನಾದರೂ ತಡೆಯದಿದ್ದರೆ! ಅವನ್ನು ಮುಟ್ಟಲಾರದಷ್ಟು ಪಾಪಿಷ್ಠಳೆ? ನನ್ನದಾದರೂ ಒಂದು ನಂಗಿಲ್ಲವಲ್ಲ, ನಿರ್ಭಾಗ್ಯೆ!' ಎಂದುಕೊಂಡು ಕಣ್ಣೀರು ಹಾಕುತ್ತಿದ್ದಳು. ತನ್ನ ಎದೆಯನ್ನೇ ಕಿತ್ತು ತಿನ್ನುತ್ತಿದ್ದಳು.

ಮಕ್ಕಳೇಕೆ ಆಗಲಿಲ್ಲ? ಈ ಪ್ರಶ್ನೆ ಅವಳನ್ನು ಪದೇ ಪದೇ ಬಾಧಿಸುತ್ತಿತ್ತು. ಯಾಕೆ? ಹಿಂದೆ ಒಮ್ಮೆ ಶಾಮಣ್ಣ ಕೊಡಿಸಿದ್ದ ಔಷಧ ಕಾರಣವಾಗಿದ್ದಿರಬಹುದೆ? ಆಗ ಅದರ ಪರಿಣಾಮ ತಾತ್ಕಾಲಿಕ ಎಂದು ಅವನು ಹೇಳಿರಲಿಲ್ಲವೆ? ಇಲ್ಲದಿದ್ದರೆ ತಾನೇ ಒಪ್ಪುತ್ತಿದ್ದವಳು? ಅದಕ್ಕೂ ಎಷ್ಟೋ ಒಡಿದಾಟವಾಗಿತ್ತು. ಆಗ ನಾಟಕದ ಜೀವನದ ಮೇಲೆ ಅಷ್ಟೊಂದು ಅವಲಂಬಿಸಿಕೊಂಡಿರದಿದ್ದರೆ, ತನ್ನ ಪ್ರಖ್ಯಾತಿಗೆ ಅಷ್ಟೊಂದು ಮನಸ್ಸು ಕೊಡದಿದ್ದರೆ ಅವನ ಮಾತನ್ನೆಂದಿಗೂ ಕೇಳುತ್ತಿರಲಿಲ್ಲ. ಹಟವನ್ನೇ ಮಾಡಿಬಿಡುತ್ತಿದ್ದಳು. ಆಗಿನ ಸಂದರ್ಭದಲ್ಲಿ ಅವನ ಪುಸಲಾವಣೆಗೆ ಒಪ್ಪಿಬಿಟ್ಟಿದ್ದಳು. ತಾಯ್ತನವನ್ನು ಕಳೆದುಕೊಂಡಿದ್ದಳು. ಅದರ ಪರಿಣಾಮ ಸ್ಥಿರವಾಗಿಯೇ ನಿಂತುಬಿಟ್ಟಿತೋ? ಇರಲಾರದು. ಇರಲಾರದು. ಆದರೂ ಹೇಳುವಂತಿಲ್ಲ. ಛೆ, ರಾಜನನ್ನು ಅದಕ್ಕೆ ಮೊದಲೇ ಕಂಡಿದ್ದರೆ! ಈ ದಾರಿ ದೊರಕಿದ್ದರೆ! ....ಅಥವ ಈ ಕಾರ್ಪಣ್ಯದ ಜೀವನದಿಂದ ಶಕ್ತಿಯೇ ಉಡುಗಿ ಹೋಗಿದೆಯೋ? ಉಹುಂ, ನೆರೆಹೊರೆಯವರ ಸ್ಥಿತಿಗತಿಯೇನು ಬೇರೆಯೆ? ಸಾಲುಸಾಲಾಗಿ ಮಕ್ಕಳಾಗುತ್ತಿಲ್ಲವೆ? ಇಷ್ಟಕ್ಕೂ ಬಡವರಿಗೇ ಮಕ್ಕಳು

ಜಾಸ್ತಿ. ತಮ್ಮದೇನೋ ವಿಚಿತ್ರ. ಅಲ್ಲದೆ ಸಂಸಾರ ಹೂಡಿದ ಮೊದ ಮೊದಲಿನಲ್ಲಿ ತಮಗೆ ಯಾವುದಕ್ಕೆ ಕಡಿಮೆಯಾಗಿತ್ತು? ಮತ್ತೆ? ಏನಾದರೂ ರಾಜನ ಕಡೆಯಿಂದ....ಏನೋ ಯಾರು ಬಲ್ಲರು. ಮುಖ್ಯವಾಗಿ ತನ್ನ ದುರದೃಷ್ಟ–ಈ ಬಂಜೆತನ. ಇದು ಒಂದು ಕಾರಣವೋ ರಾಜನಲ್ಲಿ ಕಾಣಿಸಿಕೊಳ್ಳುತ್ತಿದ್ದ ಅಲಕ್ಷ್ಯಕ್ಕೆ, ಅಸಮಾಧಾನಕ್ಕೆ? ಅವನೇನೋ ಸ್ಪಷ್ಟಪಡಿಸಿರಲಿಲ್ಲ. ಆದರೆ ಆ ಮಕ್ಕಳು ಈ ಮಕ್ಕಳ ವಿಷಯ ಬಂದಾಗ ವಿಶೇಷ ಉತ್ಸಾಹದಿಂದ ಮಾತಾಡಿರಲಿಲ್ಲವೆ? ಆದರೂ ತಾನೊಂದು ಬಾರಿ ಮಾತಿಗೆ ಮಾತು ಬಂದಾಗ 'ಮಕ್ಕಳಿದ್ದರೆ ಮನೇಲಿ ಹೊತ್ತು ಹೋಗೋದು ಸುಲಭ' ಎಂದಾಗ 'ಸದ್ಯ ಸುಮ್ಮನಿರು. ಈಗೇನು ನಿಂಗೆ ಕತ್ತೆ ಚಾಕರಿ ಇಲ್ಲವೆ? ಹೊತ್ತು ಹೋಗೋಕೇನು. ನಮ್ಮ ಬಾಯಿಗೇ ಸಾಲದು, ಇನ್ನು ಹೊಸ ಬಾಯಿಗೆ ಏನನ್ನು ತಂದು ಹಾಕೋದು. ಇದೂ ಒಂದು ಪುಣ್ಯವೇ' ಎಂದಿರಲಿಲ್ಲವೆ? ಆ ಮಾತಿನಲ್ಲಿ ಜೀವನದ ಬಗ್ಗೆ ಉದ್ವೇಗ ಇದ್ದರೂ ಮಕ್ಕಳಿಲ್ಲವೆಂಬ ಕಹಿ ಛಾಯೆಯೂ ಇತ್ತೆ? ಇಲ್ಲ, ಇಲ್ಲ. ಆದರೆ ಈ ಮಾತು ತನ್ನ ಬಂಜೆತನದ ದುಃಖಕ್ಕೆ ಸಮಾಧಾನವಾಗಿದ್ದರೂ ಅವನು ತಮ್ಮ ಮಕ್ಕಳ ವಿಷಯದಲ್ಲಿ ತೋರಿಸಿದ ಅಲಕ್ಷ್ಯ, ಭಯ ತನಗೆ ನೋವನ್ನೂ, ಮಕ್ಕಳಾದರೆ ಹೇಗೋ, ಬೇಸರವೇನೋ ಎಂಬ ಭಯವನ್ನೂ ತಂದಿತ್ತು, ಭ್ರಾಂತಿಯನ್ನುಂಟುಮಾಡಿತ್ತು........ಮತ್ತೆ, ಈಗ ಜೀವನದಲ್ಲಿ ಅವರಿಗಿರುವ ನಿರುತ್ಸಾಹಕ್ಕೆ ಈ ಅಭಾವವೂ ಒಂದು ಕಾರಣವಲ್ಲವೆ–ನಿಜವಾಗಿ? ಏನೋ ಹೇಗೆ ಹೇಳೋದು? ಮೊದಮೊದಲಿಗೆ ಇಂಥ ಪ್ರಶ್ನೆಗಳನ್ನು ನಗೆಯಲ್ಲಿ ತೇಲಿಸಿಬಿಡುತ್ತಿದ್ದರು. ಈಚೀಚೆಗೆ ಎಲ್ಲ ಮಾತನ್ನೂ ಬಳಸಿ ಆಡುತ್ತಿದ್ದರು. ಹೆಚ್ಚು ಮಾತಾಡುವುದಕ್ಕೆ ತಮಗೇಕೋ ಹೆದರಿಕೆಯೇ ಆಗುತ್ತಿತ್ತು–ಸಮಾಧಾನ ಕೆಟ್ಟೀತೆಂದು........ಹೇಗಾದರೂ ಮಕ್ಕಳು ತಂದೆತಾಯಿಗಳ ಮಧ್ಯೆ ಹೆಚ್ಚಿನ ಕುಣಿಕೆಗಳಿದ್ದ ಹಾಗಲ್ಲವೆ? ಈ ಕಷ್ಟಕಾಲದಲ್ಲೂ ಒಂದಾದರೂ ಯಾವ ತಾಯಿಗೆ ಬೇಡ? ತಂದೆಗೂ ಹಾಗೇ ಇರಬೇಕಲ್ಲವೆ? ಮಗು, ಗಂಡು ಹೆಣ್ಣಿನ ಸಂಬಂಧದಲ್ಲಿ ಒಂದು ಸಮತೂಕವನ್ನು ತಂದೀತೋ ಅಥವ ಒಬ್ಬರಿಗೆ ಬೇಡದ ಮಗು ಸಂಸಾರವನ್ನು ಇನ್ನೂ ಹದಗೆಡಿಸೀತೋ ಉಹುಂ, ಉಹುಂ. ಹಾಗಿರಲಾರದು. ಏನೋ, ಯಾರಿಗೆ ಗೊತ್ತು?

ಹೀಗೆ ಅವಳಲ್ಲಿ ಗೊಂದಲನೇ ಆಗಿಬಿಡುತ್ತಿತ್ತು. ಆದರೂ ಕಡೆಗೆ 'ಆಹಾ, ನನಗೊಂದು ಪುಟ್ಟಾಣಿ ಚಂದು ಇದ್ದಿದ್ದರೇ' ಎಂದು ಒಳಕುದಿಯಾಗುತ್ತಿತ್ತು.

-೬-

ಮೊದಲಿನ ನಾಲ್ಕು ವರ್ಷಗಳು ಒಂದರಂತೆ ಒಂದು ಉರುಳಿದಂತೆ ಐದನೆಯದೂ ಮುಗಿಯಿತು.

ಎಂದಿನಂತೆ ಒಂದು ದಿನ ರಾಜ ಕೆಲಸಕ್ಕೆ ಹೋಗಿದ್ದು ನಾಯಕಿ ಮಡಿಯುಟ್ಟು ತಲೆಬಾಚಿಕೊಳ್ಳುತ್ತಿದ್ದಾಗ ಬಾಗಿಲು ತಟ್ಟಿದ ಶಬ್ದವಾಯಿತು. ಅವಳು ಬಾಚಿದ್ದ ಕೂದಲನ್ನು ಹಾಗೇ ಗಂಟುಹಾಕಿಕೊಂಡು ತಟ್ಟನೆ ಮೇಲೆದ್ದು ಹೋಗಿ ಬಾಗಿಲನ್ನು ತೆಗೆದಳು. ಓ, ಯಾರು ಕಾಣಬೇಕು ಅಲ್ಲಿ! ಶಾಮಣ್ಣ–ಹಲ್ಲು ಬಿಟ್ಟು ನಗುತ್ತ! ಆ 'ಕೀಚಕವಧೆ'ಯ ಭೀಮಸೇನನ ಮುಖ ಹಾಗೆಯೇ ಇತ್ತು ಇನ್ನೂ!

"ಮಗು!" ಆಶ್ಚರ್ಯದ ಧ್ವನಿಯಿಂದ ಗಟ್ಟಿಯಾಗಿ ಹೇಳಿದ.

ನಾಯಕಿಗೆ ಏನು ಹೇಳಲೂ ತೋಚಲಿಲ್ಲ. ಏನೇನೋ ಯೋಚನೆಗಳು ತಟ್ಟನೆ ಒಟ್ಟಿಗೆಯೇ ಬಂದು ತಲೆಯಲ್ಲಿ ಗೊಂದಲವಾಗಿತ್ತು. ಸುಮ್ಮನೆ ಪ್ರತಿಮೆಯಂತೆ ಕ್ಷಣಕಾಲ ನಿಂತಿದ್ದಳು.

"ಬಹಳ ಆಶ್ಚರ್ಯವೇನಮ್ಮ?"

"ಹುಂ. ಇಲ್ಲ. ಇದೇನಪ್ಪ ಆಕಾಶದಿಂದ ಬಿದ್ದ ಹಾಗೆ? ಬಾ, ಒಳಕ್ಕೆ" ಅವಳು ಈಗ ಚೇತರಿಸಿಕೊಂಡಿದ್ದಳು. ಬಾಗಿಲು ಹಾಕುವುದನ್ನು ಅವನಿಗೇ ಬಿಟ್ಟು ಮಲಗುವ ಮನೆಯಲ್ಲಿ ಹಾಸಿಗೆ ಸಾಮಾನುಗಳನ್ನು ಅತ್ತಿತ್ತ ಜರುಗಿಸಿ ಚಾಪೆ ಹಾಸುತ್ತಿದ್ದಳು.

ಅವನು ಬಂದು ಕುಳಿತಾಗ ಅವನ ನಗೆ ಹೋಗಿತ್ತು. ಒಳವೇದನೆಯ ಮೂಕತನ ಆವರಿಸಿಕೊಂಡಿತ್ತು.

"ಏನಮ್ಮ ಹೀಗಾಗಿ ಹೋಗಿದೀಯೆ? ಚೆನ್ನಾಗಿದೀಯ–ಸುಖ...." ಅವನು ಅವಳ ತಲೆದಡವುತ್ತ ಅವಳ ಮುಖವನ್ನೇ ದಿಟ್ಟಿಸುತ್ತ ಕೇಳಿದ. ಬಾಗಿಲನ್ನೊರಗಿ ನಿಂತಿದ್ದ ಅವಳ ಹರ್ಷದ ಮುಖ ಗಂಭೀರವಾಯಿತು.

"ಹುಂ" ಅವಳು ಮುಖವನ್ನು ಕೆಳಗುಮಾಡಿದಳು.

ಅವನು ಕೂತುಕೊಂಡ. ಕ್ಷಣಕಾಲದ ಮೌನದಲ್ಲಿ ಇಬ್ಬರಲ್ಲಿಯೂ ಹಲವಾರು ವರ್ಷಗಳೇ ಮಿಂಚಿಹೋದುವು.

"ಇಲ್ಲಿ ನಾವಿರೋದು--ಈ ಮನೆ...."

"ಆ! ಹುಂ. ಅದನ್ನೇ ಹೇಳಬೇಕು ಅಂತಿದ್ದೆ. ಕಂಪನಿ ಇಲ್ಲಿಗೇ ಬಂದಿದೆ ಈಗ. ಸ್ವಲ್ಪ ಹೊತ್ತಿನಲ್ಲಿ ಅಕಸ್ಮಾತ್ತಾಗಿ ನಿನ್ನ ಗಂಡ ಸಿಕ್ಕಿದ. ಎಷ್ಟು ಬದಲಾಯಿಸಿದಾನೆ! ಅಂತೂ ಹೇಗೋ ಗುರುತು ಹಿಡಿದೆ, ಮಾತಾಡಿ ಸಿದೆ. ಅವನಿಂದ ಎಲ್ಲ ತಿಳೀತು. ತಡೆಯೋದಕ್ಕಾಗುತ್ತೇ? ಈಗಲೆ ಹೊರಟುಬಂದೆ. ಎಷ್ಟು ಕಾಲವಾಗಿತ್ತು ಮಗು ನಿನ್ನ ನೋಡಿ, ನಿನ್ನ ವಿಷಯ ತಿಳಿದು! ನೀನು ಬರೆದು ತಿಳಿಸಲಿಲ್ಲ ಅಂತ ನಿನ್ನ ಆಕ್ಷೇಪಣೆ ಮಾಡೋ ಹಾಗೂ ಇಲ್ಲ. ನಿಂಗೆ ಅಭಿನಯ ಕಲಿಸಿದೆನೇ ಹೊರತು ಅಕ್ಷರಾಭ್ಯಾಸ ಮಾಡಿಸಲಿಲ್ಲ....ಹುಂ, ಈಗ ಶಹರಿಗೆ ಬಂದಿದೀ. ಸುಸಂಸ್ಕೃತಳಾಗಿದೀ - ನಮ್ಮ ಸಂಗ ಬಿಟ್ಟು. ಈಗಲಾದರೂ ಬರೆಯೋದು ಓದೋದು ಕಲಿತ ದೀಯೋ ಇಲ್ಲವೊ?"

"ಏನೋ ಓದೋ ಅಷ್ಟು...."

"ಅಷ್ಟೇಯ? ಯಾಕೆ? ಗೃಹಿಣಿಯ ಜೀವನದಲ್ಲಿ ಪುರುಸತ್ತು ಇಲ್ಲವೋ?"

"ಏನೋ ಹೆಚ್ಚು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ."

ನಿಜವಾದ ಸಂಗತಿಯೆಂದರೆ ಅವಳೇನೋ ರಾಜನನ್ನು ಕಲಿಸುವಂತೆ ಆಗಾಗ ಕೇಳಿದ್ದಳು. ಸಂಸಾರದ ಮೊದಲಿನಲ್ಲಿ ಪಾಠಕ್ರಮ ಮೊದಲಾಗಿಯೂ ಇತ್ತು. ಆದರೆ ನೆಪಮಾತ್ರದ ಪಾಠ ನಿತ್ಯವೂ ಪ್ರಣಯಕ್ಕಿಳಿದು ಪ್ರಣಯಪಾಠವಾಗಿದ್ದಿತೇ ಹೊರತು ಅಕ್ಷರ ಕ್ರಮ ಮುಂದುವರಿದಿರಲಿಲ್ಲ. ರಾಜ ಮತ್ತು ಇವಳು ಇಬ್ಬರೂ ಕೆಲಸದ ಗಾಣಕ್ಕೆ ಬಿದ್ದ ಮೇಲಂತೂ ಇದರ ಮಾತನ್ನೇ ಎತ್ತುವಂತಿರಲಿಲ್ಲ. ಕಾಲವೆಲ್ಲಿ, ತಾಳ್ಮೆಯೆಲ್ಲಿ? ಅಲ್ಲದೆ ಇದರ ಅತ್ಯಗತ್ಯ ಇಬ್ಬರಿಗೂ ಹತ್ತಿರಲಿಲ್ಲ.

"ಇಷ್ಟಕ್ಕೂ ಬರೆಯೋದು ಬಂದಿದ್ದರೇನಂತೆ. ಮೂರು ದಿನ ಇಲ್ಲಿ ಆರು ದಿನ ಅಲ್ಲಿ, ಊರೂರು ಅಲೆಯುವ ನಮ್ಮಂಥ ದೊಂಬರ ಸಂಬಂಧ

ಕೊಂಪ. ಇನ್ನೊ ಒಬ್ಬಳು ದೊಡ್ಡ ಆಕಾರದ ಮಗುವಿನಂತೇ ಇದ್ದಳು. ಗೊಂಬೆಯ ಸ್ವರದ್ರೂಪ. ಆದರೆ ಹಾಡಲು ಮೊದಲುಮಾಡಿದರೆ ಅವಳ ಧ್ವನಿ ಕೇಳಿಸದಂತೆ ಹಾರ್ಮೋನಿಯಂನವನು, ಪಿಟೀಲು ತಬಲ ತಾಳದವರೆಲ್ಲ ಬಹಳ ಶ್ರಮಪಡಬೇಕಾಗಿತ್ತು. ಅವಳಿಗೆ ಜಂಭ ಜೋರೆ. ತನ್ನ ಭಾಗವನ್ನು ಗಟ್ಟಿಮಾಡದೆ ಮಗುವಿನ ತೊದಲಿನಿಂದ ಅವೇನು ಕನ್ನಡವೋ ತಮಿಳೋ, ತೆಲುಗೋ, ಹಿಂದಿಯೋ ಗುಜರಾತಿಯೋ, ದೇವ ದಾನವ ಭಾಷೆ ಯಾವುದರಲ್ಲೋ ಅಥವ ಎಲ್ಲದರಲ್ಲೋ ಆಭಾಸಮಾಡುತ್ತಿದ್ದಳು. ತೆರೆಯ ಅಕ್ಕಪಕ್ಕ ಹಿಂದೆಲ್ಲ ಎಲ್ಲೆಲ್ಲೂ ಅಲಾಬಿ ಹಬ್ಬದ ಹುಲಿಯ ಬಾಲ ಹಿಡಿದವನಂತೆ ಪ್ರಾಂಪ್ಟರ್ ಮಹಾಶಯ ಅವಳನ್ನು ಹಿಂಬಾಲಿಸುತ್ತ ಪ್ರೇಕ್ಷಕರಿಗೇ ಕೇಳಿಸುವಷ್ಟು ಗಟ್ಟಿಯಾಗಿ ಹೇಳಿಕೊಡುತ್ತಿದ್ದುದೆಲ್ಲ ವ್ಯರ್ಥವಾಗುತ್ತಿತ್ತು. ರಂಗಭೂಮಿಯ ಮಧ್ಯದಲ್ಲೇ ನಿಂತು ಅವಳ ದರ್ಬಾರು-ಕಾರುಬಾರೆಲ್ಲ. ತಿದ್ದಿಕೊಳ್ಳಲು ಯತ್ನಿಸುತ್ತಲೇ ಇರಲಿಲ್ಲ. ಇನ್ನು ಅಭಿನಯದ ಮಾತೇ ಇಲ್ಲ. ಅವಳನ್ನು ನೋಡುವುದಕ್ಕಾದರೂ ಅಷ್ಟು ಜನ ಬರುತ್ತಾರೆಂದು ಇರಿಸಿಕೊಂಡಿದ್ದಾಗಿತ್ತು. ಆದರೆ ಅವಳು ಕಂಪನಿಯ ಅರ್ಧ ಆದಾಯವನ್ನೇ ಕೇಳಿದಳು. ಮಾತುಮಾತಿಗೂ ಜಗಳವನ್ನಾಡುತ್ತಿದ್ದಳು. ಸಮಯದಲ್ಲಿ ಮುನಿಸಿಕೊಳ್ಳುತ್ತಿದ್ದಳು. ಅವಳ ಕರಾರಿಗೆ ಒಪ್ಪಲು ಸಾಧ್ಯವಾಗಲಿಲ್ಲ. ಅವಳಿಗೆ ವೇಶ್ಯಾವೃತ್ತಿಯೇ ಹೆಚ್ಚು ಲಾಭದಾಯಕವಾಗಿ ಕಂಡು ಅದಕ್ಕೇ ಇಳಿದಳು. ರಂಗವನ್ನು ತೊರೆದಳು. ಯಾವ ಹೆಂಗಸೂ ಇಲ್ಲದಿದ್ದ ಕಾಲದಲ್ಲಿ, ಬಡಪಾಯಿಗಳು ಪ್ರೇಕ್ಷಕರು ಎಂತಹದಾದರೂ ಒಂದು ಹೆಣ್ಣು ಮುಖಕ್ಕೆ ಬಾಯಿಬಾಯಿ ಬಿಡುತ್ತಾರೆಂದು ತಿಳಿದು ತಾಯಿಯ ಪಾತ್ರಕ್ಕಾದರೂ ಇರಲಿ ಎಂದು ಒಬ್ಬಳನ್ನು ಕರೆತಂದರೆ ಅವಳು ತಾನು ಶಾಕುಂತಲ, ಮಾಳವಿಕೆ, ಉತ್ತರೆ ಇಂತಹ ಯುವತಿಯರ ಪಾತ್ರವನ್ನೇ ಮಾಡುವುದಾಗಿ ಹಟ ಹಿಡಿದಳು. ಅದಕ್ಕೂ ಒಪ್ಪಿ ಒಂದೆರಡು ಸಾರಿ ಗೂಂಡ ಜನರಿಂದ ಜೈಯಿಸಿಕೊಂಡ ಮೇಲೆ ಅವಳಿಗೆ ಮತ್ತೊಮ್ಮೆ ಅವಳ ಸ್ಥಾನ ಯೋಗ್ಯತೆಗಳನ್ನು ತಿಳಿಸಿ ಒಪ್ಪದಿರಲು ಅಪ್ಪಣೆ ಚೀಟಿಯನ್ನು ಕೊಟ್ಟಾಯಿತು. ಹೀಗೆ ಮಹಾಪತಿವ್ರತೆಯರ ಕತೆಗಳೆಷ್ಟೋ. ಶಾಮಣ್ಣ ಒಳ್ಳೆಯ ಕತೆಗಾರ. ಕೇಳುತ್ತ ಕೇಳುತ್ತ ನಾಯಕಿ ತನ್ನ ಸ್ಥಿತಿಯೆಲ್ಲವನ್ನೂ ಮರೆತು ಬೇಕಾದಷ್ಟು

ನಕ್ಕಳು. ಈ ಹೆಣ್ಣು ಹಾರುಕಪ್ಪೆಗಳು ಒಂದು ತಪ್ಪಿಸಿಕೊಂಡು ಹೋಗಿ ಇನ್ನೊಂದನ್ನು ಹಿಡಿದು ತರುವಷ್ಟರಲ್ಲಿ ಲಿಂಗಪ್ಪನೇ ಸಂಕಟವನ್ನು ಸರಿ ಮಾಡುತ್ತಿದ್ದನಂತೆ. ಈಗ ತಾನೆ ಹೊಸ ಪ್ರಯೋಗಕ್ಕಾಗಿ ಇನ್ನೊಬ್ಬಳು ಬಂದಿದ್ದಳಂತೆ–ಸಾಲ್ಕಾರು ಕಂಪನಿಯ ನೀರು ಕುಡಿದು–ಬಹುಶಃ ಕಂಪನಿಗಳಿಗೆ ಕುಡಿಸಿ ಎಂದ ಶಾಮಣ್ಣ–ಮಾಂಸ ತಿಂದು ಕೊಬ್ಬಿದ್ದ ನಟಿ. ಇವಳ ಗುಟ್ಟು ಇನ್ನೂ ರಟ್ಟಾಗಬೇಕಾಗಿದೆಯೆಂದು ಪೂರ್ತಿಮಾಡುತ್ತ ಅವನು 'ರಂಗು ನಿನ್ನ ಹಾಗೆ ನಾನು ಹುಟ್ಟಿದಾರಭ್ಯ ಕಾಣಲಿಲ್ಲ. ನಿಮ್ಮಮ್ಮನೂ ನಿಂಗೆ ಎಡಗೈಯೇ. ಬಹಳ ನಷ್ಟವಾಯ್ತು ಅನ್ನಿಸುತ್ತೆ' ಅಂದು ಸ್ವಲ್ಪ ಹೊತ್ತು ಸುಮ್ಮನಾದ. ಅವಳೂ ಏನನ್ನೂ ಹೇಳಲಿಲ್ಲ.

ಹಾಗೇ ಮಾತಾಡುತ್ತಿದ್ದಾಗ ಶಾಮಣ್ಣನ ಕಣ್ಣು ಎಲ್ಲ ಕಡೆಗೂ ಹೊರಳುತ್ತಿತ್ತು. ಆ ಸಣ್ಣ ಅಡಿಗೆಯ ಮನೆ, ಬೇರೆ ಬಚ್ಚಲಿಲ್ಲ, ಇಲ್ಲೇ ಇದ್ದ ಸ್ವಲ್ಪ ಸಾಮಾನು ಅಲ್ಲಲ್ಲಿ ಗುಡ್ಡೆಯಾಗಿ, ಉರಿಯಾರಿಸಿದ್ದ ಹಸಿಯ ಕಟ್ಟಿಗೆಯ ಎರಡು ಮೂರು ತುಂಡು, ನೀರು ಹರಿಯುತ್ತಿದ್ದ ತೂತು ಪಾತ್ರೆ, ನೆಗ್ಗಿದ ಅಲ್ಯೂಮಿನಂ ಊಟದ ತಟ್ಟೆಗಳು, ಕೈ ಮುರಿದ ಸೌಟು, ಮಸಿ ಹಿಡಿದ ಗೋಡೆ, ಗಳುವಿನ ಮೇಲೆ ಹರವಿದ್ದ ಹೂಲಿಗೆ ಕಂಡ ಸೀರೆ, ಅವಳುಟ್ಟಿದ್ದ ಮಾಸಲು, ಕಡೆಗೆ ಅವಳ ಬಾಡಿದ ಮುಖ, ಆಡಿದ ಮಾತು, ಎಲ್ಲವೂ ಅವನಿಗೆ ಒಂದೇ ಅಭಿಪ್ರಾಯವನ್ನು ಕೊಡುತ್ತಿದ್ದುವು. ಅವನಾಗಲೇ ಮಲಗುವ ಗೂಡನ್ನೂ ಹಳೆಯ ಪೆಟ್ಟಿಗೆ ಹಾಸಿಗೆಗಳನ್ನೂ ನೋಡಿದ್ದ. ಅವುಗಳ ಸಮರ್ಥನೆ ಬೇಕಾಗಿಯೇ ಇರಲಿಲ್ಲ. ಅವನು ಅವಳಿಗೆ ಒಂದಲ್ಲ ಎರಡು ಮೂರು ಸಾರಿ, ಎರಡು ಮೂರು ರೀತಿಯಲ್ಲಿ ಹೆಚ್ಚು ಮಾತಾಡಲು ಪ್ರೋತ್ಸಾಹದ ಸೂಚನೆಯನ್ನು ಕೊಟ್ಟು ಸೋತಿದ್ದ.

ಊಟವಾದ ಮೇಲೆ ತಾಂಬೂಲ ಬರದಿದ್ದಾಗ, "ಏನು ಎಲೆ ಅಡಿಕೆಯ ಅಭ್ಯಾಸವೋ ಇಲ್ಲವೋ?" ಎಂದು ಕೇಳಿದ. ಅವಳು "ಇಲ್ಲ. ಮನೆಯಲ್ಲಿ ಅಡಿಕೆ, ಸುಣ್ಣ ಇಲ್ಲ. ಅದಕ್ಕೆ ಎಲೆ ಕೊಡಲಿಲ್ಲ" ಅಂದಳು. ಅದಕ್ಕೆ ಅವನು "ನೀವು, ಪಟ್ಟಣವಾಸದವರು ಬಹಳ ಜಾಣರು. ನಮ್ಮ ಹಾಗೇ? ಹೋಗಲಿ ತಾ–ಸ್ವಲ್ಪ ಎಲೆ. ನಾನು ತರದೇ ಇರುತ್ತೇನೆಯೆ ಬಾಕೀದನ್ನ?" ಎಂದು ತನ್ನ ಕೋಟಿನ ಜೇಬಿನಿಂದ ಅಡಿಕೆ ಸುಣ್ಣಗಳನ್ನು ತಂದ.

ಅವಳಿಗೂ ಕೊಟ್ಟ. ತಾಂಬೂಲವನ್ನು ಜಗಿಯುತ್ತ ಕೋಟನ್ನು ಹಾಕಿಕೊಂಡ.

" ಏನು ಹೊರಟುಬಿಡಬೇಕೆ ? ಸ್ವಲ್ಪ ವಿಶ್ರಾಂ........" ಅವಳು ಉಪಚಾರ ಹೇಳಿದಳು.

" ನಮಗೆಲ್ಲಿ ವಿಶ್ರಾಂತಿ ಮಗು ? ನಾಡಿದ್ದು ಭಾನುವಾರ ಮ್ಯಾಟನಿಗೆ ಸಿದ್ಧಪಡಿಸಬೇಕಲ್ಲ. ಚಪ್ಪರ ಸರಿಮಾಡಿ, ಫರದೆ ಕಟ್ಟಿ, ಪ್ರಕಟನೆ ಹೊರಡಿಸಿ, ನಟವರ್ಗಕ್ಕೆ ಊದೋ ಶಂಖ ಊದಿ, ಕಾಣಬೇಕಾದೋರನ್ನೆಲ್ಲ ಕಂಡು, ಕೊಡಬೇಕಾದೋರಿಗೆಲ್ಲ ಕೊಟ್ಟು–ಇದೆಯಲ್ಲ ಒಂದೊಂದೇ. ಕಂಪನಿಯ ಮಾಲೀಕ ಅಂದರೆ ಸಾಮಾನ್ಯವೇ, ದೇವರಿಗಿಂತಲೂ ಹೆಚ್ಚು ಕೆಲಸವ. ಅವನು ಕಪಟ ನಾಟಕ ಸೂತ್ರಧಾರಿಯಾದರೆ ನಾನು ನಿಜ ನಾಟಕ ಸೂತ್ರಧಾರಿ–ಅಹ್ಹಹಾ ! ಗೊತ್ತಿದೆಯಲ್ಲ ನಿಂಗೆ, ಇಲ್ಲ ಮರೆತುಬಿಟ್ಟೆಯೋ ?" ಎಂದು ಕೇಳುತ್ತ " ಹುಂ, ಮರತಿದ್ದೆ. ಇಗೋ ನಿಮಗೆ ' ಪಾಸು ' ನಾವಿಲ್ಲಿರೋವರೆಗೂ. ತಪ್ಪದೆ ಬನ್ನಿ ಸಾಧ್ಯವಾದಾಗೆಲ್ಲ. ನೋಡೋವಂತೆ, ಸೀನಿಲ್ಲದೆ ನಮ್ಮ ಕಂಪನಿ ಯಾವ ಗತಿಗೆ ಇಳಿದಿದೆ ಅಂತ. ಭಾನುವಾರವಂತೂ ಬರಲೇಬೇಕು. ಆ ? ಕಳಾಸಿಪಾಳ್ಯದ ಧನಲಕ್ಷ್ಮೀ ಥಿಯೇಟರ್. ಐದು ಗಂಟೆಗೆ," ಎನ್ನುತ್ತ ಪಾಸನ್ನು ತೆಗೆದುಕೊಟ್ಟು ಹೊರಟ.

" ಅಪ್ಪ, ಬರ್ತಾ ಇರ್ತೀಯ–ಇರೋವರೆಗೆ ? "

" ಹಾಗೆಂದರೇನು ಮಗು ! ಇಷ್ಟೇ ಇಷ್ಟು ಪುರುಸತ್ತು ಸಿಕ್ಕಿದರೂ ಇಲ್ಲಲ್ಲದೆ ಎಲ್ಲಿರಲಿ ? "

ಅವನು ಹೊರಟುಹೋದ. ಆ ಮಧ್ಯಾಹ್ನ ಅವಳಿಗೆ ನಿದ್ದೆ ಬರಲೇ ಇಲ್ಲ. ತಲೆಯ ತುಂಬ ಶಾಮಣ್ಣನ ಭೇಟಿಯೇ. ಅವನೇನೇನು ಹೇಳಿದ, ಏನೇನು ತಿಳಿದುಕೊಂಡಿರಬಹುದು–ತಮ್ಮ ವಿಚಾರವಾಗಿ ? ಮನೆಯ ದೃಶ್ಯವನ್ನೆಲ್ಲ ನೆನೆಸಿಕೊಂಡು ಅವಳ ಎದೆ ಕಿವುಚಿತು, ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ನಾಚಿಕೆಯ ಕೆಂಪಾಯಿತು. ಹಾಗೂ ಹರ್ಷದ ಕೆಂಪೂ ಎನ್ನಿಸಿತು. ಕಂಪನಿಯೊಡನೆ ತನ್ನ ಸಂಬಂಧ, ಅವನು ಹೇಳಿದ್ದ ಕಷ್ಟನಷ್ಟಗಳು–ಅದರಲ್ಲಿಯೂ ನಟಿಯ ಬಗ್ಗೆ–ಅವುಗಳಲ್ಲಿ ತನ್ನ ಭಾಗ, ಇವೆಲ್ಲವೂ ಮತ್ತೆ ಮತ್ತೆ ಬಂದುವು. ಎಷ್ಟನೆಯ ಬಾರಿಗೋ ನಿಟ್ಟುಸಿರನ್ನು ಬಿಟ್ಟಳು,

ಕೈಯಲ್ಲಿ ಪಾಸನ್ನು ಕಂಡಾಗ ಕಂಪನಿಯ ಬಗ್ಗೆ ಕುತೂಹಲ ಹುಟ್ಟಿತು. ಹಳೆಯ ನಟರನ್ನೂ ಹೊಸ ನಟಿಯನ್ನೂ ನೋಡುವ, ಅವರೊಡನೆ ಮಾತ ನಾಡುವ ಆತುರವುಂಟಾಯಿತು. ಆದರೆ ತನ್ನ ಸೀರೆ ಕಂಡಾಗ 'ಉಹುಂ, ಹೋಗೋದು ಸರಿಯಿಲ್ಲ' ಎಂದುಕೊಂಡು ಪಾಸನ್ನು ಮೂಲೆಗೆ ಬಿಸಾಡಿ ದಳು. ಪೆಚ್ಚಾದಳು. ತಪಸ್ವಿನಿಯಂತಾದಳು.

ಅದೆಷ್ಟು ಹೊತ್ತು ಹಾಗೆ ಕುಳಿತಿದ್ದಳೋ. ಮತ್ತೆ ಮನೆಯ ಮುಂದೆ ಟಾಂಗ ನಿಂತ ಶಬ್ದ ಕೇಳಿದಾಗಲೇ ಎಚ್ಚರ. ಬಾಗಿಲು ತೆಗೆದರೆ ಅವನೇ ಮತ್ತೆ ಶಾಮಣ್ಣ! ಕಾಗದದ ಸುರುಳಿಯನ್ನು ಕಂಕುಳಿನಲ್ಲಿಟ್ಟುಕೊಂಡು ಗಾಡಿ ಯಿಂದ ಇಳಿಯುತ್ತಿದ್ದ.

"ಇದೇನಪ್ಪ, ಈಗ ತಾನೆ...."

"ಏನಿಲ್ಲ. ನೀನು ಹಸಿರು ಸೀರೆ ಉಟ್ಟಿದ್ದನ್ನು ಮತ್ತೆ ನೋಡಬೇಕು ಅಂತ ಚಪಲವಾಯ್ತು. ಎಷ್ಟೋ ಕಾಲವಾಗಿತ್ತು, ಉಡುಗೊರೆ ಕೊಟ್ಟು. ಅಷ್ಟೆ." ಒಳಗೆ ಬರುತ್ತ ಅವಳ ಕೈಗೆ ಸುರುಳಿಯನ್ನು ಕೊಟ್ಟು ಬಾಗಿಲನ್ನು ನೂಕಿದ. "ಮಗು, ಉಟ್ಟುಕೊಂಡು ಬಾ ಮತ್ತೆ."

ಅವಳು ಕಂಪನಿಯಲ್ಲಿದ್ದಾಗಲೂ ಅವನು ಹೀಗೆ ಅನೇಕ ಸಾರಿ ಮಾಡಿದ್ದ. ಸೀರೆ, ಜಾಕೀಟು ಬಟ್ಟೆ, ಬಳೆ, ಸರ, ಬ್ರೋಚು, ಬೆಂಡೋಲೆ ಒೀಗೆಯೇ ಏನೇನನ್ನೋ ತಾನೇ ಆರಿಸಿ ತಂದು ಅವಳು ಉಟ್ಟು ತೊಟ್ಟು ಇಟ್ಟು ಅಲಂಕರಿಸಿಕೊಂಡುದನ್ನು ನೋಡಿ ಆನಂದಿಸುತ್ತಿದ್ದ. ಹಾಗೆಯೇ ಅವನಿಗೆ ಹಣದ ಕಷ್ಟ ಒದಗಿದಾಗ ಅವಳೂ ಅವುಗಳಲ್ಲಿ ಕೆಲವನ್ನು ಹಿಂದಿರು ಗಿಸಿ ಸಹಾಯಮಾಡುತ್ತಿದ್ದಳು. ಈಗಲೂ ಅದೇ ರೀತಿ ಅಂದುಕೊಂಡರೂ ಅಷ್ಟು ವ್ಯತ್ಯಾಸವೂ ಕಾಣದಿರಲಿಲ್ಲ.

"ಅಪ್ಪ, ನಿಂಗೊಂದು ಹುಚ್ಚು–ಯಾವಾಗಲೂ, ಇಂಥಾದ್ದು ಏನಾ ದರೂ ಒಂದು. ನಿನ್ನ ಹಣಕಾಸಿನ ಸ್ಥಿತಿಯೋ...."

"ಅದು ಹಾಳಾಯ್ತು. ಇದ್ದೇ ಇರುತ್ತೆ. ಇರಲಿ...."

"ಇದು ತಪ್ಪಾಯ್ತಲ್ಲ...."

"ಓ, ನಾನು–ನಾವೆಲ್ಲ ತಪ್ಪುಮಾಡ್ತಾಲೇ ಇರ್ತೀವಿ. ತಪ್ಪು ಮಾಡೋದು ಮುಖ್ಯವಲ್ಲ–ತೃಪ್ತಿ ಮುಖ್ಯ....ಹುಂ, ನಂಗೆ ಕಣ್ಣು ಎಳೀತಾ

ಇದೆ. ಇಲ್ಲೇ ಒಂದು ಸಿದ್ದೆ ಬಿಗಿದು...." ಅವಳ ಸಂಕೋಚದ ಮಾತು ಅವನಿಗೆ ಹಿತವಾಗಿರಲಿಲ್ಲ.

"ತುಂಬ ಕೆಲಸ ಅಂದೆಯಲ್ಲ. ನಾಪಿದ್ದು...."

"ಓ, ಕಂಪನಿ ಕೆಲಸ ಇಷ್ಟೇ ಇರುತ್ತೆ–ಹೆಣ ಚಾಕರಿ. ಇದಾರಲ್ಲ, ಅವರೇ ಮಾಡಿಕೊಳ್ಳಲಿ, ಸ್ವಲ್ಪ ಕೆಲಸ. ನಾನೇ ಎಲ್ಲಕ್ಕೂ ಜವಾಬ್ದಾರನೆ? ನಂಗೂ ವಯಸ್ಸಾಗುತ್ತ ಬಂತು." ಕೋಟನ್ನು ತೆಗೆದ.

ಅವಳು ಅವನಿಗಾಗಿ ಮಲಗುವ ಮನೆಯಲ್ಲಿ ಚಾಪೆಯನ್ನು ಹಾಕಿ, ಮಣಕಿನ ದಿಂಬನ್ನು ತೆಗೆಯಲು ಹೆದರಿ ಹಾಸಿಗೆಯ ಸುರುಳಿಯನ್ನೇ ತಲೆ ಗಿಟ್ಟು, ಹೊಸ ಸೀರೆಯನ್ನುಡಲು ಅಡಿಗೆಯ ಮನೆಗೆ ಹೋದಳು. ಪಿಂಡಿ ಯಲ್ಲಿ ಹಸಿರು ಸೀರೆಯೊಂದೇ ಅಲ್ಲ, ರಕ್ತ ಬಣ್ಣದ ಸೀರೆಯೊಂದು, ಎರಡು ಬಗೆಯ ರವಿಕೆಯ ಬಟ್ಟೆಗಳೂ ಇದ್ದುವು. ಅವಳಿಗೆ ಬಂದಿದ್ದ ಅನುಮಾನ ಸ್ಪಷ್ಟವಾಯಿತು–ತನ್ನ ಸ್ಥಿತಿಯನ್ನು ತಿಳಿದೇ ತಂದನೆಂಬುದು. ಸೀರೆಗಳನ್ನು ಕಂಡು ಹರ್ಷವಾದರೆ, ತಂದ ಕಾರಣಕ್ಕಾಗಿ ನಾಚಿಕೆಯಾಯಿತು. ಎರಡು ಕಾರಣದಿಂದಲೂ ಮುಖ ಕೆಂಪೇರಿತು. ಅವಳು ಸೀರೆಯನ್ನುಟ್ಟು ಮುಗಿ ಸುವುದರೊಳಗಾಗಿ ಶಾಮಣ್ಣನ ಅದ್ಭುತ ಗೊರಕೆ ಕೇಳಿಸಿತು. ಅವಳು ಅಲ್ಲೇ ಕುಳಿತು ಎಂದಿಗಿಂತ ಹೆಚ್ಚು ಎಚ್ಚರಿಕೆಯಿಂದ ಜಡೆ ಹಾಕಿಕೊಂಡು ಮುಖ ತೊಳೆದು ಕುಂಕುಮವಿಟ್ಟು, ತಂದಿದ್ದ ಹೂವನ್ನೆಲ್ಲ ಮುಡಿದು, ಎಲೆಯಡಿಕೆ ಯನ್ನು ಹಾಕಿಕೊಂಡಳು. ಮತ್ತೆ ಮತ್ತೆ ಕನ್ನಡಿಯಲ್ಲಿ ನೋಡಿಕೊಂಡು ಅಲ್ಲಲ್ಲಿ ತಿದ್ದಿಕೊಂಡಳು.

ಗಂಟೆ ಎರಡಾಯಿತು, ಮೂರಾಯಿತು, ಮೂರೂವರೆ. ಶಾಮಣ್ಣನ ಅನಾದ್ಯಂತ ಓಂಕಾರ ಇನ್ನೂ ಮನೆಯನ್ನು ತುಂಬಿತ್ತು. ಅವಳು ಒಲೆ ಹಚ್ಚಿಸಿ ಕಾಫಿಗೆ ನೀರಿಟ್ಟಳು. ಕಾಫಿ ಸೋಧಿಸಿ ಅವನನ್ನು ಎಬ್ಬಿಸುವುದೆಂದು ಅವಳ ಯೋಚನೆ. ಆದರೆ ಶೋಧಿಸುವುದು ಇನ್ನೇನು ಮುಗಿಯಬೇಕು. ಅಷ್ಟರಲ್ಲೇ ಅದೇನು ಓಂಕಾರಕ್ಕೇ ಕೊನೆ ಬಂದಿತ್ತೋ, ಆದಿಶೇಷನೇ ಹೊರಳಿ ಈ ಘಟವನ್ನು ಅಲುಗಿಸಿದ್ದನೋ, ಅಥವ ಕಾಫಿಯ ಪರಿಮಳದ ಬಗ್ಗೆ ನಾಟಕದ ಮೂಗಿಗಿದ್ದ ಸೂಕ್ಷ್ಮತೆಯೋ, ಏನೋ, ಅಂತೂ ಶಾಮಣ್ಣ ಆಗ ತಾನೆ ಮಲಗಿದ್ದು ಎದ್ದವನಂತೆ "ಆಯ್ತೇ–ಬುಟ್ಟು? ಓಹೋ, ಇದೇನು

ಮಾಡ್ತಾ ಇದೀಯೆ?" ಎಂದು ಕೋಣೆಯಿಂದ ಕೂಗಿದುದು ಕೇಳಿತು. ಅವಳು ಶೋಧಿಸುವ ಬಟ್ಟೆಯನ್ನು ಹಿಂಡಿ ಏಳುವುದರೊಳಗಾಗಿ ಅವಳ ಹಿಂದೆ ಭೂಮಿ ಅದುರಿತು. ಅವಳು ಹಿಂದಿರುಗಿದಾಗ ಶಾಮಣ್ಣ ಆಗ ತಾನೆ ಸಿಲ್ದಾಣದಲ್ಲಿ ನಿಂತ ಎಂಜಿನ್ನಿನಂತೆ ನಿಂತಿದ್ದ. ಅವಳು ಎದ್ದು ನಿಂತಳು. ಅವನು ಅವಳನ್ನು ನೆತ್ತಿಯಿಂದ ಉಂಗುಷ್ಠದವರೆಗೂ ನೋಡಿ "ಅದೇ ನಟಿ. ಸ್ವಲ್ಪ ಮಾಸಿದ್ದೆ, ಅಷ್ಟೆ," ಅಂದ. ಅವನಿಗೆ ಹರ್ಷ ತುಂಬಿ ಬಂದಿತು. ಕಾಫಿ ಕುಡಿದು ಶಾಮಣ್ಣ ಹೊರಟುಹೋದ—ಮತ್ತೆ ಮತ್ತೆ ಬರುವುದಾಗಿ ಹತ್ತು ಸಾರಿ ಹೇಳಿದ.

ಆ ಸಂಜೆ ರಾಜ ತನ್ನ ಹೆಂಡತಿಯನ್ನು ಜಗಲಿಯ ಮೇಲೆ ಕಂಡಾಗ ತನ್ನ ಕಣ್ಣನ್ನೇ ನಂಬಲಾರದೆ ಆಶ್ಚರ್ಯ ಅನುಮಾನಗಳಿಂದ "ಇದೇನು—ಇವತ್ತು...." ಎಂದು ಮಾತ್ರ ಕೇಳಿದ. ಅವಳು ನಸುನಗುತ್ತ ಶಾಮಣ್ಣ ಅವನಿಗೆ ಸಿಕ್ಕಿದ್ದುದನ್ನು ನೆನಪು ಕೊಟ್ಟು ಮುಂದಿನದೆಲ್ಲವನ್ನೂ ನಿಧಾನವಾಗಿ ಊಟ ಮುಗಿಯುವವರೆಗೂ ಹೇಳಿದಳು. ರಾಜನಿಗೆ ನಾಟಕದವನ ಸಂಬಂಧ ಮತ್ತೆ ಉಂಟಾದುದು ಹಿತವಾಗಿಲ್ಲದಿದ್ದರೂ ಒಟ್ಟಿನಲ್ಲಿ ಅಸಮಾಧಾನವಾಗ ಲಿಲ್ಲ. ಯಾಕೆ, ಇವಳನ್ನು ನೋಡಿ ನೋಡಿ ಸಂತೋಷವನ್ನೇ ಹೊಂದಿದ. ತಾನು ತರಲಾಗಿರದಿದ್ದ ಬಟ್ಟೆ ಒದಗಿದುದಕ್ಕಾಗಿ ತನಗೆ ನಾಚಿಕೆಯಾಯಿತು, ಹಾಗೆಯೇ ಪರಿಹಾರವೂ ಆಯಿತು. 'ನಾವು ಒಳ್ಳೆಯ ಸ್ಥಿತಿಯಲ್ಲಿದ್ದರೆ!' ಎಂದು ಹತ್ತು ಬಾರಿ ಯೋಚಿಸಿಕೊಂಡು ನಿಟ್ಟುಸಿರು ಬಿಟ್ಟ.

ನಾಟಕಕ್ಕೆ ಹೋದರೆ ಹಳೆಯ ಪರಿಚಯವೆಲ್ಲ ಅವಳಿಗಾಗುವುದಲ್ಲ ಎಂದು ಅವನಿಗೆ ಮುಜುಗರವಾದರೂ ಅವಳ ಉತ್ಸಾಹಕ್ಕೆ ಅಡ್ಡಿ ಬರುವ ಮನಸ್ಸು ಇರಲಿಲ್ಲ. ಅಲ್ಲದೆ ಅವನಿಗೂ ಈ ಜೀವನದಲ್ಲಿ ನಾಟಕ ಬೇಡವಾಗಿರ ಲಿಲ್ಲ. ಇಷ್ಟಕ್ಕೂ ಒಂದು ಅಥವ ನಾಲ್ಕು ದಿನಗಳ ನೋಟವಲ್ಲವೆ ಎಂದು ಕೊಂಡು ಉತ್ಸಾಹದಿಂದಲೇ ಒಪ್ಪಿಕೊಂಡಂತೆ ತೋರಿಸಿಕೊಂಡ.

ಮಾರನೆಯ ಮಧ್ಯಾಹ್ನ ಹಳೆಯ ನಟವರ್ಗದವರು ಒಬ್ಬೊಬ್ಬರು ಇಬ್ಬಿಬ್ಬರಾಗಿ ಬಂದು ಹೋದರು. ಇಷ್ಟು ಕಾಲದ ಮೇಲಿನ ಭೇಟಿಯ ಸಂತೋಷ, ಅವರ ವಿಶ್ವಾಸ ಪ್ರೀತಿ ಅವರ ನಡೆನುಡಿಗಳಲ್ಲಿ ಎದ್ದು ಕಾಣು ತ್ತಿದ್ದುವು. ಅವಳ ಮದುವೆಯಲ್ಲಿ ಕೊಡಲಾಗದಿದ್ದ ಉಡುಗೊರೆಯೆಂದು

ಒಬ್ಬೊಬ್ಬರೂ ಒಂದೊಂದು ಉಪಯೋಗದ ಸಾಮಾನನ್ನು ತಂದುಕೊಟ್ಟರು. ಈಗ ಬದಲಾಯಿಸಿದ್ದ ರಾಮಯ್ಯ ಒಂದು ಜತೆ ಮಗ್ಗು ಲ್ಹಾಸಿಗೆ ತಂದ. ಆಗ ಇವಳ ಹಿಂದೇ ಹರಿದಾಡುತ್ತಿದ್ದ ಹೆಣ್ಣು ಪಾತ್ರದ ಲಿಂಗಪ್ಪ ಬೊಂಬಾಯಿ ಬಳೆಗಳನ್ನು ಕೊಟ್ಟ. ಹಾರ್ಮೋನಿಯಂ ಸೋಮಪ್ಪ ಕಂಚಿನ ತಟ್ಟೆ ಬಟ್ಟಲು, ಇತರರಿಂದ ಕನ್ನಡಿ, ಜಂತದ ಬಾಚಣಿಗೆ, ಸುವಾಸನೆ ಎಣ್ಣೆ-ಹೀಗೆ ಖಣ ಅರಿಸಿನ ಕುಂಕುಮ ಹೂ ಹಣ್ಣುಗಳೊಂದಿಗೆ. ನಕಲಿಯ ಮೂರ್ತಿ ಬಣ್ಣದ ತೊಟ್ಟಿಲು ಚಂದನದ ಗೊಂಬೆಗಳನ್ನು ಒಪ್ಪಿಸಿ ನಗೆ ಹುಟ್ಟಿಸಿ, ಜತೆಗೆ 'ದುಷ್ಯಂತನ ಉಂಗುರ, ಬೆಸ್ತ ಕೊಟ್ಟದ್ದು' ಎಂದು ಸುಲಭ ಬೆಲೆಯ ಚಿನ್ನದ ಉಂಗುರವನ್ನು ಕೊಟ್ಟ. ರಾಜ ಬಂದ ಮೇಲೆ ಸಹಾಯಕ ಮ್ಯಾನೇಜರ್ ಶೀನಪ್ಪ 'ಕಂಪನಿಯ ಪರವಾಗಿ, ವಧೂವರರಿಗೆ' ಎಂದು ಐವತ್ತು ರೂಪಾಯಿ ಓದಿಸಿದ. ಇದನ್ನು ಕಳುಹಿಸಿದ್ದವನೂ ಶಾಮಣ್ಣನೇ-ರಾಜನ ಮೇಲೆ ದೃಷ್ಟಿಯಿಟ್ಟು. ಅದರ ವಿನಿಯೋಗವೂ ಹಾಗೇ ಆಯಿತು, ಮುಂದೆ. ಅವಳಿಗೆ ನಂಟರುಇಷ್ಟರ ಮಧ್ಯೆ ಅಂದೇ ಮದುವೆಯಾದಷ್ಟು ಸಂತೋಷವಾಯಿತು. ಅವರೆಲ್ಲರನ್ನೂ ಚೆನ್ನಾಗಿ ವಿಚಾರಿಸಿಕೊಂಡು ತಕ್ಕಮಟ್ಟಿಗೆ ಉಪಚರಿಸಿದಳು. ಅದೆಷ್ಟು ಕತೆಯೋ, ಹಾಸ್ಯವೋ, ನಗೆಯೋ. ಅವಳಿಗೆ ಐದು ವರ್ಷ ಹಿಂದಕ್ಕೆ ಹೋದಂತಿತ್ತು-ದೇಹದಲ್ಲಿ, ಮನಸ್ಸಿನಲ್ಲಿ. ರಾಜ ಈ ದಿನದ ಚಟುವಟಿಕೆಗಳನ್ನು ಕೇಳಿ, ತಾನೂ ಸ್ವಲ್ಪ ಕಂಡು, ಹಿಂದಿನ ದಿನದಷ್ಟು ಸಮಾಧಾನದಿಂದಿರಲಿಲ್ಲ; ಆದರೆ ಆಕ್ಷೇಪಣೆಯೇನನ್ನೂ ಮಾಡಲಿಲ್ಲ.

ಮ್ಯಾಟನಿಗೆ ಹೋದಾಗ ಆರಂಭಕ್ಕೆ ಇನ್ನೂ ಸ್ವಲ್ಪ ಹೊತ್ತಿದ್ದಿತು. ಸುದ್ದಿಯನ್ನು ಕೇಳಿ ಶಾಮಣ್ಣನೇ ಬಂದು ಇಬ್ಬರನ್ನೂ ತೆರೆಯೊಳಕ್ಕೆ ಕರೆದುಕೊಂಡು ಹೋದ. ಪ್ರಿಯಂವದ, ಅನಸೂಯ, ದುಷ್ಯಂತ, ಮೈತ್ರೇಯಿ ಇವರೆಲ್ಲ ಸುತ್ತಲೂ ಮುತ್ತಿಕೊಂಡರು. ಹೊಸ ಶಾಕುಂತಲೆಗೆ ಹಳೆಯವಳನ್ನು ಶಾಮಣ್ಣ ಪರಿಚಯಮಾಡಿಕೊಟ್ಟ. ಆದರೆ ಅವಳು ನಾಯಕಿಯ ಪ್ರಖ್ಯಾತಿಯನ್ನು ನಟವರ್ಗದಿಂದ ಕೇಳಿ ಅಸೂಯೆ ಹೊಂದಿದ್ದಳು. ಈಗ ಅವಳೇ ಕಂಡಾಗ 'ಹುಂ. ಏನು ಮಹಾ' ಎನ್ನುವಂತೆ ಸ್ವಲ್ಪ ಧೋರಣೆಯಿಂದಲೇ ನಡೆದುಕೊಂಡಳು. ನಾಯಕಿ ಅಲ್ಲೆಲ್ಲ ಓಡಾಡಿ, ಎಲ್ಲೆಲ್ಲೋ ನಿಂತು ನಿಂತು ನೋಡಿ, ಬಣ್ಣದ ಕೋಣೆಗೆ ಭೇಟಿಕೊಟ್ಟು, ಹಳೆಯ ಆಳು

ಗಳನ್ನೂ ಬಿಡದೆ ಮಾತನಾಡಿಸಿದಳು. ಎಷ್ಟೋ ಹೊತ್ತು ಹೊರಗಿದ್ದು ಮತ್ತೆ ನೀರಿಗೆ ಜಾರಿಕೊಂಡ ಮೀನಿನಂತಾಗಿತ್ತು, ಅವಳ ಸ್ಥಿತಿ. ನಾಟಕ ಮೊದಲಾಗುವ ಹೊತ್ತಿಗೆ ಗಂಡಹೆಂಡಿರು ಅವರಿಗಾಗಿ ಕಾದಿರಿಸಿದ್ದ ಸೋಫಾದ ಮೇಲೆ ಕುಳಿತುಕೊಂಡರು.

ಸಭಾಮಂದಿರವನ್ನು ಪ್ರವೇಶಿಸಿದಾಗಲೇ ನಾಯಕಿಗೆ ತೌರೂರಿಗೆ ಬಂದಂತಾಗಿತ್ತು. ತೆರೆಯ ಪಕ್ಕಕ್ಕೆ ಹೋಗಿದ್ದಾಗಲಂತೂ ಅವಳು ಆ ಸಂಸಾರವನ್ನು ಬಿಟ್ಟಿರಲೇ ಇಲ್ಲ, ತನ್ನ ಪಾತ್ರಕ್ಕಾಗಿ ಸಡಗರಪಡುತಿದ್ದಾಳೆ ಎನ್ನುವಷ್ಟು ಆವೇಶದಿಂದ ತುಂಬಿದ್ದಳು. ಕ್ಷಣಕಾಲ ರಾಜನ ಅರಿವೇ ಇರ ಲಿಲ್ಲ. ರಂಗದಿಂದ ಕೆಳಗಿಳಿದು ಬಂದಾಗ ತನಗೂ ಅದಕ್ಕೂ ಸಂಬಂಧ ಎಂದೆಂದಿಗೂ ಕಡಿದುಹೋಗಿದೆಯೆಂದು ಎಷ್ಟು ಬಾರಿ ನೆನೆದುಕೊಂಡರೂ ತನ್ನಲ್ಲೇ ಒಂದು ಭಾಗವನ್ನು ಹಿಂದೆ ಬಿಟ್ಟು ಬಂದಂತೆ ಅವಳಿಗೆ ವಿಚಿತ್ರ ವೇದನೆಯಾಯಿತು.

ನಾಟಕ ನಡೆದಾಗಲೆಲ್ಲ ಅವಳಿಗೆ ಶಾಕುಂತಲೆಯ ಮೇಲೇ ಗಮನ. ಉದ್ದಕ್ಕೂ ತನ್ನ ತುಟಿಗೆ ಬಂದ ನೂರಾರು ಮಾತುಗಳಲ್ಲಿ ಒಂದೆರಡನ್ನು ರಾಜನಿಗೆ ಪಿಸಿಗುಟ್ಟುತ್ತಿದ್ದಳು. ತನ್ನ ಸ್ಥಳದಲ್ಲಿ ಮುಜುಗರದಿಂದ ಜರುಗು ತ್ತಿದ್ದಳು. ಆಶ್ರಮದ ದೃಶ್ಯದಲ್ಲಿ "ನೋಡಿ, ಋಷಿಕನ್ಯೆ ಅಂದರೆ ಇನ್ನಷ್ಟು ಗಂಭೀರವಾಗಿರಬೇಡವೆ? ಎಷ್ಟೊಂದು ಹಾವ ಭಾವ ತೋರಿಸುತ್ತಾ ಇದಾಳೆ. ಅಭಿನಯ ಮಾಡ್ತಾ ಇದೀನಿ ಅನ್ನೋದು ಅವಳ ಮನಸ್ಸನ್ನು ಬಿಟ್ಟ ಹಾಗೇ ಇಲ್ಲ. ಪ್ರೇಕ್ಷಕರನ್ನು ಆಕರ್ಷಿಸೋದಕ್ಕೆ ಅಭಿನಯಿಸೋ ಹಾಗಿದೆ. ಸಹಜ ವಾಗಿಲ್ಲ, ಅಲ್ಲವೆ?" ಎಂದಳು. ದುಷ್ಯಂತನೊಡನೆ ನಡೆದುಕೊಂಡ ದೃಶ್ಯ ಮುಗಿದ ಮೇಲೆ "ಹುಂ, ಹೆಣ್ಣಿಗೆ ಎಷ್ಟೇ ಆಸೆಯಿರಲಿ, ಲಜ್ಜೆ ಇರದೇ ಇದ್ದರೆ ಶೋಭಿಸುತ್ತ್ಯೇ? ಇವಳಿಗೆ ಭೀತಿಯೂ ಇರಬೇಕು. ಇಷ್ಟೊಂದು ಸದರವಾಗಿದಾಳಲ್ಲ, ಸಾಧ್ಯವಾಗುತ್ತ್ಯೇ? ಎದೆಗೆ ಎದೆ ತಿಳೀಬೇಕಾದರೆ ಎಷ್ಟುಕಾಲ ಬೇಕಾಗುತ್ತೆ. ಆ? ಆಗಲೇ ಅಷ್ಟಿಷ್ಟು ಸಲಿಗೆ. ಇವನು ಮಹಾ ರಾಜ, ಬಹಳವಾಗಿ ಅಪರಿಚಿತಸ್ಥನೇ. ತಾನು ಋಷಿಯ ಬಳಿ ಬೆಳೆದೋಳು– ಅಪ್ಸರೆಯ ಮಗಳಾದರೇನು. ಅವರ ಮಧ್ಯೆ ಇರೋದು ಇನ್ನೂ ಆಕರ್ಷ ಣೆಯೇ, ಪ್ರೇಮ ಅನ್ನೋದಕ್ಕಾಗುತ್ತೇ ಈಗಾಗಲೇ? ಅದು ಕಾಣೋದು

ಕಡೇ ದೃಶ್ಯದಲ್ಲಿ," ಎಂದು ಟೀಕಿಸಿದಳು. ಆಸ್ಥಾನ ದೃಶ್ಯದಲ್ಲಿ "ಇವಳು ಸೆಟೆದು ನಿಲ್ಲೋದಕ್ಕಿಂತ ಸೋಲೋದೇ ಹೆಚ್ಚು ಸಹಜ. ಒಪ್ಪುತ್ತೆ–ಸುಸಂಸ್ಕೃತಳಿಗೆ," ಎಂದಳು. ಮರೀಚಾಶ್ರಮದಲ್ಲಿ ದುಷ್ಯಂತನನ್ನು ಕಂಡಾಗ "ಇಲ್ಲಿ ಕ್ಷಮೆಯ ಮೂರ್ತಸ್ವರೂಪಳಾಗಿರಬೇಕು. ಕೋರ್ಟಿನಲ್ಲಿ ಗೆದ್ದವರ ಹಾಗಲ್ಲ, ನ್ಯಾಯಾಧೀಶನ ಹಾಗೂ ಅಲ್ಲ," ಎಂದಾಡಿದಳು. ಅಂತೂ ನಾಟಕ ಮುಗಿಯುವವರೆಗೂ ಒಂದಲ್ಲ ಒಂದು ಮಾತು. ಅವಳ ಮಾತುಗಳಲ್ಲಿ ಕಲಾಜ್ಞಾನ ಎಷ್ಟು ಕಂಡಿತೋ ಅಷ್ಟೇ ಅವಳ ಧ್ವನಿ ದೃಷ್ಟಿಗಳಲ್ಲಿ ಆ ಶಾಕುಂತಲೆಯ ಬಗ್ಗೆ ಅಸಮಾಧಾನ, ತಾನೇ ಅವಳ ಸ್ಥಳದಲ್ಲಿದ್ದು ಬಿಡಬೇಕೆಂಬ ಆತುರ ಇನ್ನೂ ಕಂಡು ರಾಜನಿಗೆ ಆತಂಕವೇ ಆಯಿತು. ಅವನು ಆಗಾಗ್ಗೆ 'ಈ ನಾಟಕ ಸಂಬಂಧ ಇಷ್ಟು ಕೂಡ ಆದದ್ದು ತಪ್ಪಾಯಿತೆ? ಈ ಜನರು ಬಂದು ಹೋಗುವುದು ನಮ್ಮ ಮರ್ಯಾದೆಗೆ ಮತ್ತೇನು ಧಕ್ಕೆ ತಂದೀತೋ' ಎಂದುಕೊಂಡ; ಆದರೆ ವಿರೋಧಿಸಬೇಕೆನ್ನುವಷ್ಟಲ್ಲ ಅವರು ಇನ್ನೂ ಎರಡು ಭಾನುವಾರ ನಾಟಕಗಳಿಗೆ ಹೋಗಿಬಂದರು.

ಒಂದು ರಾತ್ರಿ ಗಂಟೆ ಹನ್ನೆರಡಾಗಿತ್ತು. ಗಂಡ ಹೆಂಡಿರು ಇನ್ನೂ ಎಚ್ಚರವಾಗಿಯೇ ಮಲಗಿದ್ದರು. ಅವನ ಎದೆಯ ಮೇಲೆ ಅವಳು ತಲೆಯಿಟ್ಟುಕೊಂಡಿದ್ದಳು. ಮುಡಿದ ಹೂದಂಡೆ ಅವನ ಕೆನ್ನೆಗೆ ಸೋಕುತ್ತಿತ್ತು. ಅವಳ ಎಡಗೈ ಅವನ ಎದೆಯನ್ನು ಬಳಸಿದ್ದರೆ ಅವನ ಎಡಗೈ ಅವಳ ಸೊಂಟವನ್ನು ಬಳಸಿತ್ತು.

"ಏನು ನಿಂಗೆ ನಿದ್ದೆಗಿದ್ದೆ ಬೇಡವೊ, ಇನ್ನೂ? ನನ್ನೇ ಅಂತಿರ್ತೀಯಲ್ಲ ಯಾವಾಗಲೂ–ಬೇಗ ಮಲಗೋದಿಲ್ಲ ಅಂತ," ಅವನು ನಸುನಗುತ್ತ ಆಕ್ಷೇಪಿಸಿದ.

"ನೀವು ದಿನವೂ ತಡಮಾಡಿದರೆ ನಾನು ಒಂದು ದಿನ ತಡೀಬಾರದೆ?"

"ಓಹೋ, ಅದಕ್ಕೇನು. ಏನಾದರೂ ಹೆಚ್ಚು ಸಮಾಚಾರ ಇದೆಯೇನು?" ಅಂತಹ ದಿನಗಳಲ್ಲೇ ಇಂತಹ ಪೀಠಿಕೆಯೆಂದು ಅವನಿಗೆ ಮಂದಟ್ಟಾಗಿಹೋಗಿತ್ತು.

"ಇಲ್ಲ."

ಆದರೆ ಅವನೇ ನಂಬುವವನು? ಅವಳ ಸ್ವಭಾವ ಅವನಿಗೆ ಕರತಲಾಮಲಕವಾಗಿತ್ತು. ಸ್ವಲ್ಪ ಹೊತ್ತು ಸುಮ್ಮನಿದ್ದ.

“ ಮತ್ತೆ....ಮತ್ತೇ,” ಅವಳು ರಾಗ ತೆಗೆದಳು, ಎದೆಯ ಮೇಲಿನ ಕೈಯಿಂದ ಅವನ ಷರಟಿನ ಗುಂಡಿಯನ್ನು ತಿರುಗಿಸುತ್ತ.

“ ಹುಂ, ಹೂಂ, ಹಾಗೆ ಬಾ. ಏನು ಮತ್ತೆ? ”

“ ಮಧ್ಯಾಹ್ನ ಅಪ್ಪ ಬಂದಿದ್ದ. ಕಂಪನಿ ಸದ್ಯದಲ್ಲೇ ಹೋಗುತ್ತಂತೆ.”

“ ಅದು ನಂಗೂ ಗೊತ್ತೇ ಇತ್ತು. ಏನು ಕಡೇ ಮ್ಯಾಟನಿಗೆ ಹೋಗಬೇಕು ತಾನೆ? ”

“ ಉಹುಂ, ಅದಲ್ಲ.”

“ ಮತ್ತೆ? ”

“ ಅವನು ನಮ್ಮ ಸ್ಥಿತಿಗತಿಯೆಲ್ಲ ವಿಚಾರಿಸಿಕೊಂಡ–ತಿಳಿದುಕೊಂಡೇ ಇದಾನೆ. ಅಂದ: ‘ ಇಷ್ಟು ಕಷ್ಟದಲ್ಲಿದೀರಲ್ಲ. ನೀನೂ ಯಾಕೆ ಕೆಲಸ ಮಾಡಬಾರದು? ’ ಅಂತ, ನನ್ನ.”

“ ಕೆಲಸವೆ? ಈಗ ಮಾಡ್ತಾ ಇಲ್ಲವೆ? ಇನ್ನೆಂಥ ಕೆಲಸ? ” ಅನುಮಾನದ ಅಸಮಾಧಾನದಿಂದ ಕೇಳಿದ.

“ ಅದಲ್ಲ. ಸಂಪಾದನೆಯಾಗೋದು. ನಾಟಕ....”

“ ಏನೂ! ನಾಟಕದ ಕೆಲಸವೆ! ” ಎಡಗೈಯಿಂದ ಅವಳ ಮುಖವನ್ನು ತನ್ನ ಕಡೆಗೆ ಠಟ್ಟನೆ ತಿರುಗಿಸಿ ಅವಳನ್ನು ದಿಟ್ಟಿಸುತ್ತ ಕೂಗಿದಂತೆಯೇ ಹೇಳಿದ. ಅವಳು ಇದಕ್ಕೆ ಅಷ್ಟಿಷ್ಟು ಸಿದ್ಧಳಾಗಿಲ್ಲದೆ ಇರಲಿಲ್ಲ. “ ಆ ಹೊಲಸೆ ಮತ್ತೆ? ಚೆನ್ನಾಯ್ತು, ಚೆನ್ನಾಯ್ತು. ಅದಕ್ಕೇ ಆಗಾಗ ಬಂದು ತಾಜಾ ಮಾಡುತ್ತಿದ್ದರೋ–ಅವರು? ಹೀಗೇನಾದರೂ ವಿಷ ಬಿತ್ತುತಾರೆ ಅಂತ ಭಯಪಟ್ಟಿದ್ದೆ,” ಅವನು ಮುಂದುವರಿಸಿದ.

“ ಹಾಗಲ್ಲ, ಹಾಗಲ್ಲ. ಅವನು ನಮಗಾಗಿಯೇ ಹೇಳಿದ,” ಅವನ ಕಡೆ ನೋಡದೆಯೇ ಹೇಳಿದಳು.

“ ಸರಿ, ಸರಿ. ನಂಗೆಲ್ಲ ಗೊತ್ತು. ಕಂಪನಿ ಕೆಳಗಿಳೀತಾ ಇದೆ. ನಿನ್ನ ಎಳೆದುಕೊಳ್ಳೋ ಯೋಚನೆ. ಮತ್ತೇನು.”

“ ಹಾಗೇ ಆದರೂ ಇಬ್ಬರಿಗೂ ಲಾಭವಾದರೆ....”

“ ಎಂಥ ಲಾಭ ನಮಗೆ? ನಾವು ಒಬ್ಬರೊಬ್ಬರನ್ನು ಕಳೆದುಕೊಂಡು....”

“ ಛಿ! ಛೀ! ಅದು ಅವನ ಮನಸ್ಸಿನಲ್ಲೇ ಇಲ್ಲ. ಜತೆಯಲ್ಲೇ....”

" ಓ, ನಾನೂ ಕೆಲಸ ಬಿಟ್ಟು ಊರೂರು ತಿರಿಗಿಕೊಂಡು...."

" ಇಲ್ಲ. ಕಂಪನಿ ಒಂದೇ ಕಡೆ ಇರೋ ಯೋಚನೆ ಇದೆಯಂತೆ."

" ಸರಿ, ಸರಿ. ನೀನು ಹೋಗಿ ರಾತ್ರಿಯೆಲ್ಲ ನಾಟಕ ಆಡಿ ಬಾ; ಹಗಲೆಲ್ಲ ಮಲಗಿರು. ನಾನು ಹಗಲೆಲ್ಲ ದುಡಿದು ಬರ್ತೀನಿ. ಮನೆ ಚೆನ್ನಾಗಿ ನಡೆಯುತ್ತೆ. ಸಂಸಾರ ಚೆನ್ನಾಗಿರುತ್ತೆ."

" ದಿನವೂ ನಾಟಕ ಇರೋದಿಲ್ಲವಲ್ಲ. ಮನೇಲಿ ಅಡಿಗೆಯೋರನ್ನ ಇಟ್ಟುಕೊಳ್ಳೋ ಅಷ್ಟು...."

" ಅದೆಲ್ಲ ಸರಿ. ಬೇಕಾದಷ್ಟು ಹಣ ಬರುತ್ತೆ ಅಂತಲೋ? ನಿನ್ನ ಆ ಅಯೋಗ್ಯರ ಗುಂಪಿನಲ್ಲಿ ಬಿಟ್ಟು, ನನ್ನ ಪಾಡಿಗೆ...."

" ಅದು ಯಾಕೆ ಅಷ್ಟು ಭಯ? ನಾನು ಹಿಂದಿನ ಹಾಗಿದೀನೆ? ಗರತಿ ಅನ್ನೋದನ್ನು ಮರೀತೀನೆ? ಇದೇನು ನನ್ನಲ್ಲಿ ಅಷ್ಟು ನಂಬಿಕೆಯಿಲ್ಲವೆ?" ಅವಳು ತಟ್ಟನೆದ್ದು ಕುಳಿತು ಆಶ್ಚರ್ಯ ಅಸಮಾಧಾನಗಳಿಂದಲೇ ಕೇಳಿದಳು.

" ಆ ಹಾಳು ಕೆಲಸದ ಹಣೇಬರಹ ಬಹಳ ಕೆಟ್ಟದ್ದು ಅಂತ ಹೇಳಿದೆ. ನಿನ್ನ ಮಾತಿಗೇ ಅಂತಲೇ ಅಲ್ಲ."

" ನಿಮಗೆ ಹಾಗೆಲ್ಲ ಭಯವಿದ್ದರೆ ನೀವೂ ಅಲ್ಲೇ ಕೆಲಸಮಾಡಿ ಕೊಂಡರೆ ಇಬ್ಬರೂ...."

" ಅದೆಲ್ಲ ಆಗೋದಿಲ್ಲ ರಂಗು, ಸುಮ್ಮನೆ ಯಾಕೆ ಮಾತು. ಆ ಅವ ಮರ್ಯಾದೆ ಉದ್ಯೋಗದಲ್ಲಿ ನೀನು, ನಾನು....ಉಹುಂ, ಆ ಯೋಚನೆಯೇ ಇಲ್ಲ. ಬಿಟ್ಟುಬಿಡು."

" ಅದನ್ನೇ ಅವನಿಗೆ ಹೇಳಿದೆ–ಹೀಗಂತೀರಿ ಅಂತ. ಅವನು 'ಈ ಉದ್ಯೋಗದಲ್ಲಿ ಏನು ಹೀನಾಯ. ಎಷ್ಟೋ ಜನ ಮರ್ಯಾದಸ್ಥರೂ ಇದಾರೆ' ಅಂದ."

" ಅವರ ಮೂಗಿನ ನೇರಕ್ಕೆ ಅವರು ಹೇಳ್ತಾರೆ."

" ಯಾಕೆ ಮಾನದಿಂದ ಇರಬಾರದು ಅಂತ."

" ಹಾಗೇ ಆಗಲಿ, ಇರಬಹುದು. ಅದು ಮರ್ಯಾದೆಯ ಕೆಲಸವೇ ಆಗಿರ ಬಹುದು. ಎಂಥಾದ್ದೇ ಆದರೂ ಬೇಡ ಅಂತೀನಿ. ಗೊತ್ತಾಯ್ತೆ? ನೀನು ಮನೆ ನೋಡಿಕೊಂಡರೆ ಸಾಕು."

" ಯಾಕೆ, ಬೇರೆ ಮಾಡಿದರೋ-ಇಷ್ಟವಾಗಿದ್ದು, ಯೋಗ್ಯತೆಯೂ ಇದ್ದು, ಅನುಕೂಲವೂ ಆಗಿದ್ದರೆ ಮನೆಗೆಲಸಕ್ಕೇನು...."

" ನೋಡಿದೆಯಾ, ಈ ಚರ್ಚೆ ಬೇಡ ಅಂತ ಆಗಲೇ...."

" ಹಾಗಲ್ಲ, ಗಂಡಸಿಗೆ ಇದ್ದ ಹಾಗೇ ಹೆಂಗಸಿಗೂ ಈ ಉದ್ಯೋಗದ ಸ್ವಾತಂತ್ರ್ಯ ಇದ್ದರೇನು ತಪ್ಪು ಅಂತ ಯೋಚನೆ...."

" ಓಹೋ, ಸ್ತ್ರೀ ಸ್ವಾತಂತ್ರ್ಯಕ್ಕೇ ಹೊರಟುಬಿಟ್ಟೆಯಾ ? " ಚೇಳು ಕಡಿದವನಂತೆ ಅವನೂ ತಟ್ಟನೆ ಎದ್ದು ಕುಳಿತ. " ಅವರು ನಿಂಗೆ ಒಳ್ಳೇ ಪಾಠಾನೇ ಕಲಿಸಿಕೊಟ್ಟ ಹಾಗಿದೆ," ಸಿಡಿಗುಟ್ಟಿದ.

" ಅವನು ಇದು ಹೇಳಲಿಲ್ಲ. ನಂಗೆ ಅನ್ನಿಸಿತು, ಕೇಳಿದೆ. ಹೋಗಲಿ ಬಿಡಿ-ನಿಮಗೆ ಇಷ್ಟವಿಲ್ಲದಿದ್ದರೆ. ನಿಮಗೆ ಸಂತೋಷವಿರದೇ ಇರೋ ಕೆಲಸ ನಂಗೆ ಬೇಡವೇ ಬೇಡ."

" ಹುಂ. ಹಾಗೆನ್ನು. ನಂಗೆ ಸ್ವಲ್ಪವೂ ಇಷ್ಟವಿಲ್ಲ. ನನ್ನ ಹೆಂಡತಿ ನಟಿ ಅನ್ನೋದಾಗಲೀ, ನಾನು ಇಂಥ ತಾರೆಯ ಗಂಡ ಅನ್ನಿಸಿಕೊಳ್ಳೋದಾಗಲೀ ನಂಗೆ ಬೇಕಿಲ್ಲ-ಆದರಿಂದ ಬೇರೆ ಕೆಡಕಾಗಲಿಲ್ಲ ಅಂದರೂ."

ಅವನು ತೀರ್ಮಾನ ಹೇಳಿದ. ಅವಳ ಉತ್ಸಾಹ ಹಿಸಿಕಿದ ಹೂವಿನಂತಾಯಿತು.

" ಏನೋ ನಮ್ಮ ಈ ಸ್ಥಿತಿ ಉತ್ತಮಗೊಂಡೀತೇನೋ-ಬಾಧಕವಿಲ್ಲದೆ. ನೀವು ಸವೆದು ಚಿಪ್ಪಾಗೋದು ತಪ್ಪಿ ಸುಖವಾಗಿರಬಹುದೇನೋ, ನಂಗೂ ಹಿತವಾದ ದಾರಿಯೋ ಅಂತ ಹೇಳಿದೆ," ಮತ್ತೊಮ್ಮೆ ಒತ್ತಿ ಹೇಳದೆ ಇರಲಾಗಲಿಲ್ಲ.

" ನಾನು ಸವೆಯೋದಕ್ಕೆ ಸಿದ್ಧನಾಗಿದೀನಿ. ನಿಂಗೆ ಹಿತವಾಗಿರಬಹುದು, ಆದರೆ ಅದನ್ನು ಬಿಡೋದಕ್ಕೆ ಯಾವಾಗಲೋ ಒಪ್ಪಿಕೊಂಡಿದೀಯೆ. ನಮ್ಮ ಸ್ಥಿತಿ ಹೀಗೇ ಅಂತ ಏನು ಗೊತ್ತು? ಹತ್ತು ರೂಪಾಯಿ ಬಡ್ತಿ ಆಗಲೇ ಆಗಬೇಕಾಗಿತ್ತು. ಮುಂದಿನ ತಿಂಗಳೋ ಆಚೆಯ ತಿಂಗಳೋ ಖಂಡಿತವಾಗಿ...."

" ಅಯ್ಯೋ, ಅದಕ್ಕೆ ಐದು ವರ್ಷ ಕಾದಿದ್ದಾಯ್ತು. ಮುಂದೂ ಹೀಗೆ. ಇಷ್ಟಕ್ಕೂ ಅದರಿಂದ ಏನಾದ ಹಾಗಾಯ್ತು? "

" ಯಾಕೆ, ಏಷ್ಟೋ ಕಷ್ಟ ಕಡಿಮೆಯಾಗುತ್ತೆ."

" ನಾನು ಕಾಣೆ," ಅವಳು ತಲೆಯಾಡಿಸಿ " ಇನ್ನು ಮಕ್ಕಳು ಮರಿ ಬೇರೆ ಏನಾದರೂ...." ಎಂದು ಮುಂದುವರಿಸಿದಳು.

" ಅಯ್ಯೋ, ಆಗ ನೋಡಿಕೊಳ್ಳೋಣ. ಅದರ ಯೋಚನೆ ಯಾಕೆ, ಈಗ," ಅವನು ನಸುನಕ್ಕ.

" ಯಾಕೆ ಯೋಚಿಸಬಾರದು ?...."

" ಅಹ್ಹ! ಹ್ಹ! ಆಗಲಿ. ಆಗಲಿ. ನೀನು ಬೇಕಾದರೆ ಯೋಚಿಸು. ಅದಕ್ಕೇನು. ನಾನು ಮಾತ್ರ...."

" ನಿಮಗೆ ಈಗಲೇ ಹೇಳಬಾರದು ಅಂತ...." ತಲೆ ತಗ್ಗಿಸಿದಳು.

" ಆ ! " ರಾಜ ತಟ್ಟನೆದ್ದು ಕುಳಿತು ಅವಳ ಭುಜಗಳನ್ನು ಎರಡು ಕೈಗಳಲ್ಲೂ ಹಿಡಿದು ಅವನ್ನು ಅಲುಗಿಸುತ್ತ ಅವಳ ಕಡೆಗೆ ದಿಟ್ಟಿಸಿದ. " ಏನು ! "

" ಖಂಡಿತವಾದ ಮೇಲೇ ಒಳ್ಳೇ ಸಮಯದಲ್ಲಿ...."

" ಹೂಂ ! "

ಇಬ್ಬರೂ ಸ್ವಲ್ಪ ಕಾಲ ಮೌನವಾಗಿದ್ದರು. ಅವನು ಈ ಹೊಸ ವಿಷಯವನ್ನು ಅರ್ಥಮಾಡಿಕೊಳ್ಳುತ್ತಿದ್ದ. ತನ್ನ ಸ್ಥಿತಿಗೆ ಜೋಡಿಸಿಕೊಳ್ಳುತ್ತಿದ್ದ. ಅವನು ಆ ಗಳಿಗೆಯಲ್ಲಿ ಉಲ್ಲಾಸದಿಂದ ಉಬ್ಬದೆ, ಅವಳು ಆಶೆಪಟ್ಟಿದ್ದಂತೆ ನಡೆದುಕೊಳ್ಳದೆ " ಹೂಂ," ಎಂದು ಉದ್ಗಾರ ತೆಗೆದದ್ದು ಅವಳಿಗೆ ಎರಡನೆಯ ಪೆಟ್ಟಾಗಿತ್ತು. ಮೂಕಪೆಟ್ಟು. ಸುಮ್ಮನೆ ನೋವನ್ನು ನುಂಗುತ್ತಿದ್ದಳು.

" ಏನಾದರೂ ಆಗಲಿ; ಹೀಗೇ ಹೋರಾಡೋಣ. ಯಾವುದಕ್ಕೇ ಆಗಲಿ, ಆ ಹಾಳು ನಾಟಕದ ಮಾತೇ ಇಲ್ಲ," ಅವನು ನಿಧಾನವಾಗಿ ಕಡೆಯ ತೀರ್ಮಾನವನ್ನು ಹೇಳುತ್ತ ಮೆಲ್ಲಗೆ ಮತ್ತೆ ಮಲಗಿಕೊಂಡ.

ಅವಳು ಹಾಗೇ ಕುಳಿತಿದ್ದಳು, ಕುಳಿತಿದ್ದಳು—ಶಿಲ್ಪದಂತೆ. ಸ್ವಲ್ಪ ಹೊತ್ತಾದ ಮೇಲೆ ಅವನು ಅವಳನ್ನು ಮೆಲ್ಲಗೆ ಎಳೆದುಕೊಂಡು ಕೆನ್ನೆಗೊಂದು ಮುತ್ತು ಕೊಟ್ಟು, ತಲೆಯನ್ನು ನೇವರಿಸಿದ. ಅವಳು ಗೊಂಬೆಯಂತೆ ಸುಮ್ಮನಿದ್ದಳು. ಅವನು ಮಲಗಿದ ಮೇಲೆ ಪಕ್ಕಕ್ಕೆ ತಿರುಗಿಕೊಂಡು ನಿಶ್ಶಬ್ದವಾಗಿ ಅತ್ತಳು—ರಾತ್ರಿಯೆಲ್ಲ.

ಶಾಮಣ್ಣ ಬಂದು ವಿಚಾರಿಸಿಕೊಂಡು ಖಿನ್ನನಾಗಿ ಹೊರಟುಹೋದ. ಹೋಗುವ ಮುನ್ನ ಕಹಿಯಾಗಿ "ಹುಂ, ಗರತಿಯಾದರೇನು, ಗುಲಾಮಳೇ," ಎಂದು ನಿಟ್ಟುಸಿರು ಬಿಟ್ಟ. ನಿರಾಸೆ ಕವಿದಿದ್ದ ಅವಳ ಮನಸ್ಸಿನಲ್ಲಿ ಈ ಮಾತು ಮಿಂಚಾಗಿ ಹೊಳೆಯಿತು, ತನ್ನ ಮೇಲೇ ಸಿಟ್ಟಿನ ಸಿಡಿಲನ್ನು ಬಡಿಯಿತು. ಅವಳು ನಿಸ್ಸಹಾಯಳಂತೆ 'ಗುಲಾಮಳು! ಗುಲಾಮಳು!' ಎಂದು ತನಗೆ ತಾನೇ ಅನೇಕ ಬಾರಿ ಹೇಳಿಕೊಂಡಳು. ಮುಂದೆಯೂ ಇದು ಮತ್ತೆ ಮತ್ತೆ ಮನಸ್ಸಿಗೆ ಬರುತ್ತಲೇ ಇರುತ್ತಿತ್ತು. ಗೋಡೆಯ ಸಂದಿನಲ್ಲಿ ಹುಟ್ಟಿದ ಅಶ್ವತ್ಥದಂತೆ ಮಾತು ಮನೆಮಾಡಿಕೊಂಡಿತು.

ಕಂಪನಿ ಹೊರಟುಹೋಯಿತು. ಆದರೆ, ಮೊದಲು ಕಂಪನಿಯನ್ನು ಬಿಟ್ಟ ದಿನಗಳಲ್ಲಿ ಹೇಗೋ ಹಾಗೆ ಈಗಲೂ ಅವಳು ಅನೇಕ ದಿನಗಳು ಪ್ರತಿ ದಿನವೂ ತಪ್ಪದೆ ಕನಸಿನಲ್ಲಿ ನಾಟಕಗಳನ್ನು ಕಾಣುತ್ತಿದ್ದಳು; ಅವುಗಳಲ್ಲಿ ಭಾಗವಹಿಸುತ್ತಲೂ ಇದ್ದಳು.

-೭-

ತಿಂಗಳು ಕಳೆಯುವುದರೊಳಗಾಗಿ ತರೀಕೆರೆಯಿಂದ ತಂತಿ ಬಂತು. ತಾಯಿ ಕೊಡಿಸಿದ್ದಳು-ತಂದೆಗೆ ತೀರ ಕಾಯಿಲೆಯೆಂದು. ತಂದೆಯ ಕಡೆಯ ಮಾತನ್ನು ನೆನಪಿನಲ್ಲಿಟ್ಟುಕೊಂಡಿದ್ದ ರಾಜ ಹೇಗಾದರೂ ಆಗಲಿ, ಅವರು ನೋಡದಿದ್ದರೂ ಚಿಂತೆಯಿಲ್ಲ ಎಂದುಕೊಂಡು ಹೊರಟ.

ಅವನು ತಲ್ಪುವ ಹೊತ್ತಿಗಾಗಲೇ ತಂದೆ ತೀರಿಕೊಂಡಿದ್ದರು. ತಾಯಿಯ ದುಃಖ ಹೇಳದಂತಿದ್ದು, ಮಗನ ಮುಖ ಕಂಡು ಉಕ್ಕಿ, ಅವನು ಬಹಳ ಸಮಾಧಾನಪಡಿಸಿದ ಮೇಲೆ ಸ್ವಲ್ಪ ಹತೋಟಿಗೆ ಬಂದಿತು. ಕರ್ಮಗಳೆಲ್ಲ ಮುಗಿದುವು. ತಾಯಿ ಹಿಂದಿನ ಬಗ್ಗೆ ಮಾತನಾಡುವಂತಾದ ಮೇಲೆ ರಾಜ ಒಂದು ದಿನ "ಅಮ್ಮ, ಅಪ್ಪ ನನ್ನ ನೆನೆಸಿಕೊಳ್ತಾಲೇ ಇರಲಿಲ್ಲವೆ?" ಎಂದು ಕೇಳಿದ. ಅವರು "ನೆನೆಸಿಕೊಳ್ಳದೆ ಏನಪ್ಪ, ಹೆಚ್ಚು ಮಾತಿನೋರಲ್ಲ- ನಿನ್ನ ಹಾಗೇ. ಗೊತ್ತೇ ಇದೆಯಲ್ಲ. ಒಳಗೇ ಎಷ್ಟಾದರೂ ಕುದ್ದು ಕುದ್ದು ಅನುಭವಿಸೋದು. ಸೋಲು ಒಪ್ಕೋ ಹಾಗಿಲ್ಲ. ಒಂದು ಸಾರಿಯಾದರೂ 'ತಪ್ಪುಮಾಡಿದ, ತಪ್ಪುಮಾಡಿದ' ಅನ್ನದೇ ಇದ್ದ ದಿನವೇ ಇರಲಿಲ್ಲ.

ಅದೇ ಒಂದು ಹುಚ್ಚಾಗಿಬಿಟ್ಟಿತ್ತು, ಅವರಿಗೆ" ಎಂದರು. "ಯಾವತ್ತಾದರೂ ಬಾ ಅಂತ ಅಪ್ಪ ಬರೀತಾನೆ ಅಂತಿದ್ದೆ. ಹುಂ, ಮತ್ತೆ ನೋಡೋ ಯೋಗವಿರಲಿಲ್ಲ, ಮುಖ್ಯ" ಅಂದ ರಾಜ. ಅವರು "ಅವರೇ ಆನ್ನೋರು? ಅಂಥಾ ಹಟದ ಹುಟ್ಟು. ಅಷ್ಟು ಕಾಯಿಲೆಯಾದರೂ ಆ ಮಾತೇ ಇಲ್ಲ. ನಾನೇ ಎಷ್ಟೋ ಸಾರಿ 'ಕರೆಸಲೇ? ಕರೆಸಲೆ?' ಅಂತ ಕೇಳಿದೆ. ಒಪ್ಪಲೇ ಇಲ್ಲ ಕಡೆಗೆ ಸ್ಥಿತಿ ತೀರ ಕೆಟ್ಟಾಗ ನಾನೇ ತಂತಿ ಕೊಡಿಸಿದೆ. ಹುಂ, ಅದರಿಂದೇನಾಯ್ತು. ಅಬ್ಬಬ್ಬ, ಒಬ್ಬೊಬ್ಬರ ರಕ್ತ ಹೇಗಿರುತ್ತೆ! ಸಂಬೋದೇ ಸಾಧ್ಯವಿಲ್ಲ" ಎಂದು, "ನೀನಾದರೂ ಸಮಾಧಾನವಾಗಿ ಒಂದೆರಡು ಕಾಗದ ಪತ್ರ ಬರೆದು, ಆಗ ಈಗ ಬಂದುಹೋಗಿದ್ದರೆ-ಅವರು ಏನಾದರೂ ಹೇಳಿರಲಿ--ನೋಡಬಹುದಾಗಿತ್ತೋ ಏನೋ ಕಣಪ್ಪ....ಹುಂ, ಅಂತೂ ಆಗಿಹೋಯ್ತು. ಮಾತಾಡಿ ಏನು ಪ್ರಯೋಜನ? ಋಣಾನುಬಂಧವಿಲ್ಲ," ಎಂದು ಪೂರ್ತಿ ಮಾಡಿದರು. ರಾಜ ಏನನ್ನೂ ಹೇಳಲಿಲ್ಲ.

ಆಸ್ತಿ ವ್ಯವಹಾರಗಳನ್ನೆಲ್ಲ ರಾಜ ತನ್ನ ಕೈಗೆ ತೆಗೆದುಕೊಂಡ. ಅವನಿಗೆ ತರೀಕೆರೆಯಲ್ಲಿ ನಾಯಕಿಯೊಡನೆ ಇರಲು ಇಷ್ಟವಿರಲಿಲ್ಲ. ಅಲ್ಲದೆ ಬೆಂಗಳೂರಿನಲ್ಲಿ ವ್ಯಾಪಾರ ಇನ್ನೂ ಬೆಳೆಯುವುದೆಂದು ಅಲ್ಲೇ ನೆಲೆಸುವ ನಿರ್ಧಾರಕ್ಕೆ ಬಂದ. ಆಸ್ತಿಯನ್ನೆಲ್ಲ ಮಾರಾಟಮಾಡಿ ಹಣ ಜೋಡಿಸಿಕೊಂಡ. ಅತ್ಯಗತ್ಯವಾದ ಲೇವಾದೇವಿ ವ್ಯವಹಾರವನ್ನುಳಿಸಿಕೊಂಡು, ಕ್ರಮೇಣ ಅದನ್ನೂ ನಿಲ್ಲಿಸುವ ತೀರ್ಮಾನಮಾಡಿದ. ತನ್ನೊಡನೆ ಬಂದಿರಬೇಕೆಂದು ತಾಯಿಯನ್ನು ಬೇಡಿಕೊಂಡ. ಆದರೆ ಅವರು "ಅಪ್ಪ, ಇದು ಅವರು ಕಟ್ಟಿದ ಮನೆ. ನಾವು ಎಷ್ಟೋ ವರ್ಷ ಬಾಳಿದ್ದು. ಇಲ್ಲೇ ದೀಪ ಹಚ್ಚಿಕೊಂಡಿರ್ತೀನಿ. ನೆರೆಹೊರೆ, ಊರುಕೇರಿ ಎಲ್ಲ ಹಳೇವು, ಬೇಕಾದೋವು. ಈಗ ಯಾಕೆ ಬೇರು ಕಿತ್ತುಕೊಂಡು ಬರಲಿ? ಹೊಸ ನೆಲದಲ್ಲಿ ಮತ್ತೆ ಹುಟ್ಟಿಕೊಳ್ಳೋ ವಯಸ್ಸಲ್ಲ" ಎಂದರು. ಅವನು ಸ್ವಲ್ಪ ಬಲವಂತವನ್ನೇ ಮಾಡಿದ. ಅವರು "ನೋಡು, ನಿನ್ನ ಹೆಂಡತಿಯ ಮೇಲೆ ನಂಗೇನು ದ್ವೇಷವಿಲ್ಲ. ಅವಳು ನನ್ನ ಸೊಸೆ ಅಂತಲೇ ಅಂದುಕೊಂಡಿದೀನಿ. ಆದರೆ ಜೊತೇಲಿರಬೇಕಾದರೆ ಹಿಂದಿನಿಂದ ಬಂದ ಒಗ್ಗಿದ ಆಚಾರಕ್ಕೆಲ್ಲ ವಿರುದ್ಧವಾಗಿ ನಡೀಬೇಕಾಗುತ್ತೆ. ನಾನೂ ಇನ್ನು ಬಹಳ ವರ್ಷ ಬದುಕಿರೋದಿಲ್ಲ. ಯಾಕೆ ಆ ಬದಲಾವಣೆ?

ಬೆಂಗಳೂರಿನಲ್ಲಿ ಬೇರೆ ಇರೋದು ಸರಿಯಲ್ಲ. ಇದೇ ಎಲ್ಲ ರೀತಿಯಿಂದಲೂ ನಂಗೆ ಹಿತವಾದ್ದು. ನೀವೇ ಆಗಾಗ ಬಂದು ಹೋಗ್ತಾ ಇರಿ. ನಿಮ್ಮನ್ನೂ ನಿಮ್ಮ ಮಗೂನೂ ನೋಡಿ ತೃಪ್ತಿ ಪಟ್ಕೊಕೋತೀನಿ," ಎಂದುಬಿಟ್ಟರು. ರಾಜ ಅವರಿಗೆ ಅಲ್ಲೇ ಎಲ್ಲ ವ್ಯವಸ್ಥೆಯನ್ನೂ ಮಾಡಿ ಬೆಂಗಳೂರಿಗೆ ಹಿಂತಿರುಗಿದ.

ಈಗ ರಾಜನ ಸಂಸಾರ ಬಡತನದ ಒಂದು ತುದಿಯಿಂದ ಸಿರಿತನದ ಇನ್ನೊಂದು ತುದಿಗೆ ಹಾರಿತು. ಬಸವನಗುಡಿಯಲ್ಲಿ ಸುಸಜ್ಜಿತವಾದ ದೊಡ್ಡ ಬಂಗಲೆ, ಅದರ ಮುಂದೆ ಸೊಗಸಾದ ಕೈತೋಟ. ಮನೆಯಲ್ಲಿ ಆಳು ಕಾಳು, ಅಡಿಗೆಯವನು, ಹೊಸ ಮಾದರಿ ಫೋರ್ಡ್ ಕಾರು, ಡ್ರೈವರ್, ಎರಡು ಬೇಟೆ ನಾಯಿಗಳು, ಪರ್ಷಿಯಾದ ಬೆಕ್ಕು. ರಾಜನಿಗೆ ಕಲಾಪತ್ತಿನ ಪಂಚೆ, ಜರಿ ಪೇಟ, ಸರ್ಜ್ ಕೋಟು, ಪಾಪ್ಲಿನ್ ಷರಟು, ಚಿನ್ನದ ಗುಂಡಿ, ವಜ್ರದ ಉಂಗುರ, ಚಿನ್ನದ ಗಡಿಯಾರ, ಆಕ್ಸ್‌ಫರ್ಡ್ ಷೂ–ಹಿಂದಿನವೆಲ್ಲ ಮತ್ತೆ ಬಂದುವು. ನಾಯಕಿಯ ಬೀರುವಿನ ತುಂಬ ಅವಳೇ ಆರಿಸಿಕೊಂಡ ಜರಿಯ ರೇಷ್ಮೆ ಸೀರೆ, ಹೊಸ ಫ್ಯಾಷನ್ ಡಮಾಸ್ಕ್ ಜಾಕೆಟ್. ವಜ್ರದ ಪೆಂಡೋಲೆ, ಕೆಂಪು ರತ್ನಗಳ ಉಂಗುರ, ವಿಧವಿಧದ ಉಂಗುರ, ಬ್ರೋಚ್. ಹಟದಿಂದ ಉಳಿಸಿಕೊಂಡಿದ್ದ ಹಳೆಯ ಜೋಮಾಲೆ ಆಗಾಗ ಹಾಕಿಕೊಂಡರೆ, ನಿತ್ಯಕ್ಕೆ ಹೊಸ ಮುತ್ತಿನ ಸರ, ಸಣ್ಣೆಳೆಯ ಚಿನ್ನದ ಸರ, ಸ್ವಲ್ಪವೇ ಎತ್ತರಿಸಿದ ಹಿಮ್ಮಡಿಯ ಷೂ, ಪೌಡರ್ ಪಫ್ ಎಲ್ಲ ಎಲ್ಲ. ಹುಲ್ಲುಕಡ್ಡಿಯನ್ನು ತೆಗೆದು ಅತ್ತಿತ್ತ ಇರಿಸುವ ಕೆಲಸವಿಲ್ಲ. ಮೇಷ್ಟರು ಕಲಿಸುತ್ತಿದ್ದ ಅಕ್ಷರ, ವೀಣೆ ಇವೇ ಅವಳ ಹೆಚ್ಚು ಕೆಲಸ. ನಾಯಕಿ ನಿಜವಾಗಿಯೂ ಮಹಿಳಾಮಣಿಯರ ಮೇಲುಸಾಲಿನಲ್ಲಿದ್ದಳು.

ಬೇಗಬೇಗನೆ ' ನಾಗರಾಜ ಸೆಟ್ಟರೂ ' ' ರಂಗನಾಯಕಮ್ಮನವರೂ ' ಬಸವನಗುಡಿಯ ಗಣ್ಯ ಸಮೂಹದ ಗಮನಕ್ಕೆ ಹೆಚ್ಚುಹೆಚ್ಚಾಗಿ ಬರುತ್ತಿದ್ದರು. ಅಲ್ಲಾವುದ್ದೀನನ ದೀಪವನ್ನು ಉಜ್ಜಿ ಬದಲಾಯಿಸಿದಂತಾಗಿತ್ತು ಅವರ ಸ್ಥಿತಿ.

ಇಂತಹ ಮನೆಯಲ್ಲಿ ಗರ್ಭಿಣಿಯ ಎಚ್ಚರಿಕೆಗೆ ವಿವಿಧೋಪಚಾರಕ್ಕೆ ಏನು ಕಡಿಮೆ–ಅದೂ ರಾಜನೇ ಮೇಲ್ವಿಚಾರ ನೋಡಿಕೊಳ್ಳುತ್ತಿದ್ದರೆ? ಲೇಡಿ ಡಾಕ್ಟರೇ ಆಗಾಗ ಬಂದು ನೋಡಿಕೊಳ್ಳುತ್ತಿದ್ದರು. ಅವಳ ಬಯಕೆ

ಗಳನ್ನೆಲ್ಲ ರಾಜನೇ ಕೇಳಿ, ಊಹಿಸಿ ನಡೆಸುತ್ತಿದ್ದ. ತನಗಿದ್ದ ವಿರಾಮವ
ನ್ನೆಲ್ಲ ಅವಳ ಬಳಿಯಲ್ಲಿಯೇ ಕುಳಿತು ಲಲ್ಲೆಯಾಡುತ್ತ ಕಳೆಯುತ್ತಿದ್ದ.
ಮಾತುಕತೆಯಲ್ಲಿ ಅವರ ಹಿಂದು ಎಷ್ಟೋ ಸಾರಿ ಬಂದು ಹೋಗುತ್ತಿತ್ತು.
ಮುಂದನ್ನು ಕಲ್ಪಿಸುವಾಗಲಂತೂ ಅವರು ತಮ್ಮನ್ನು ತಾವೇ ಮರೆಯು
ತ್ತಿದ್ದರು. ಅವರಿಗಿದ್ದ ವಿಷಯಗಳೆಂದರೆ ಅವನ ಹಣಕಾಸಿನ ವ್ಯವಹಾರದ
ಬೆಳೆವಣಿಗೆ, ಅಷ್ಟಿಷ್ಟು ಗೃಹಕೃತ್ಯದ ಮೇಲು ಹೊದಿಕೆ, ಶ್ರೀಮಂತ ಸಮಾಜದ
ನಡೆನುಡಿಗಳು-ಮುಖ್ಯವಾಗಿ, ಬರಲಿದ್ದ ಮಗು. ಅವಳಂತೂ ಎಷ್ಟು
ಆಡಿದರೂ ದಣಿಯುತ್ತಿರಲಿಲ್ಲ. ಅವಳೊಡನೆ ಯಾವ ವಿಷಯ ಮೊದ
ಲಾದರೂ ಕಡೆಗೆ ಇದಕ್ಕೇ ಬಂದು ಸೇರುತ್ತಿತ್ತು-ಉಪನದಿ ನದಿಯನ್ನು ಸೇರು
ವಂತೆ. ಅವಳು ಆಡದಿದ್ದ ಕಲ್ಪನೆಗಳಂತೂ-ತಾಯಿಯ ಕಲ್ಪನೆಗಳು, ಸಿರಿ
ವಂತೆ ತಾಯಿಯವು.

ಆರೈಕೆಯೇನು, ಟಾನಿಕ್ ಔಷಧಿಗಳೇನು, ಆರಾಮವೇನು ನಿರಾತಂಕ
ವೇನು, ರಾಜನ ಪ್ರೇಮವೇನು-ನಾಯಕಿ ಐದು ವರ್ಷದ ಮೇಲಿನ ಮಡಿತ
ದುಃಖಗಳಲ್ಲಿ ಕಳೆದುಕೊಂಡಿದ್ದ ಮೈ ಐದು ತಿಂಗಳಲ್ಲಿ ತುಂಬಿಕೊಂಡಿತು.
ಕಾಂತಿ ಹಿಂದಿರುಗಿತು. ಬಸಿರು ಬೆಳೆದಂತೆಲ್ಲ ಬಣ್ಣ ಹೆಚ್ಚುತ್ತಿತ್ತು. 'ದೃಷ್ಟಿ
ತಾಕು'ವಂತಿದ್ದಳು.

ಆ ಸುಖದ ದಿನವೂ ಬಂದು ಗಂಡು ಹುಟ್ಟಿ ಮನೆಗೆ ಮನೆಯನ್ನೇ
ಉತ್ಸಾಹದಿಂದ ತೇಲಿಸಿತು. ರಾಜನ ಹರ್ಷದ ನೋಟ ದಾದಿಯ ಕೈಯಿನ
ಮಗುವಿನಿಂದ ಮಂಚದ ಮೇಲಿನ ತಾಯಿಯ ನಸುನಗೆಯ ಮುಖದ ಕಡೆಗೆ
ಹೊರಳಿದಾಗ ತಾಯಿ ತಂದೆಯರ ಹೆಮ್ಮೆ, ಸುಖ ಹೊರಚಿಮ್ಮುತ್ತಿದ್ದುವು.
ಉತ್ಸವಗಳೆಲ್ಲ ಅತಿ ಸಂಭ್ರಮದಿಂದ ನಡೆದುವು. ನಾಯಕಿ ತನ್ನ ಕೈಗೆ
ನುತ್ತೊಮ್ಮೆ ಬರದೆ ಹೋಗಿದ್ದ ಮಾವಳ್ಳಿಯ ಮಗುವಿನ ನೆನಪಾಗಿ ಚಂದು
ಎಂದೇ ಹೆಸರನ್ನು ಸೂಚಿಸಿದಳು. ಮಗು ಚಂದುವೇ ಆದ. ದಾದಿ ಕಾಯ್ದು
ಕೊಂಡಿದ್ದರೂ ನಾಯಕಿ ಚಂದುವನ್ನು ತಾನೇ ಬಹಳವಾಗಿ ನೋಡಿಕೊಳ್ಳು
ತ್ತಿದ್ದಳು. ಬಟ್ಟೆ ಬದಲಾಯಿಸುವುದು, ತೊಡೆಯಾಡಿಸಿ ಮಲಗಿಸುವುದು,
ತನ್ನ ಇಂಪಾದ ಸ್ವರದಲ್ಲಿ ಮೆಲ್ಲಗೆ ರಾಗವಾಗಿ ಲಾಲಿ ಹೇಳುತ್ತ ತೊಟ್ಟಿಲು
ತೂಗುವುದು-ಎಲ್ಲವನ್ನೂ ತಾನೇ ಮಾಡುತ್ತಿದ್ದಳು. ದಾದಿ "ನಾನು

ಮಾಡ್ತೀನಿ ತಾಯಿ" ಅಂದರೆ "ನಂಗೇನು ಕೆಲಸ, ಹೊತ್ತು ಹೋಗ ಬೇಕೋ ಇಲ್ಲವೋ?" ಎನ್ನುತ್ತಿದ್ದಳು. ಆದರೆ ನಿಜವಾಗಿ ಚಂದುವಿನ ಕೆಲಸ, ಅವನ ಸ್ಪರ್ಶ ಎಂದರೆ ಅಷ್ಟೊಂದು ಹಿತ, ಆನಂದ. ಇನ್ನೊಬ್ಬರಿಗೆ ಅವನನ್ನು ಒಪ್ಪಿಸಲಾರದ ಅಸೂಯೆ. ಮೇಲು ಸಮಾಜದ ತಾಯಿ ಸುಮ್ಮನೆ ಮುದ್ದಾಡದೆ ಹೀಗೆಲ್ಲ ಮಾಡುತ್ತಾಳಲ್ಲ ಎಂದು ದಾದಿಗೆ ಆಶ್ಚರ್ಯ, ಸ್ವಲ್ಪ ತಿರಸ್ಕಾರವೂ. ಲೇಡಿ ಡಾಕ್ಟರು ತಾಯಿಯ ಆಕಾರ ಕೆಡುತ್ತದೆ ಯೆಂದು ಮಗುವಿಗೆ ಹಾಲಿನ ದಾದಿಯನ್ನು ನಿಯಮಿಸಿದಾಗ ನಾಯಕಿ ಒಪ್ಪಲಿಲ್ಲ. ತಾನೇ ಹಾಲು ಕೊಡುವುದಾಗಿ ಹಟವನ್ನೇ ಹಿಡಿದಳು. ಡಾಕ್ಟರೂ ರಾಜನೂ ವಿಷಯವನ್ನು ಚರ್ಚಿಸಿದುದು ಪ್ರಯೋಜನವಾಗಲಿಲ್ಲ. ರಾಜನಿಗೆ ಸ್ವಲ್ಪ ಅಸಮಾಧಾನವೇ ಆಯಿತು.

ಹಿಂದೆ ಅವಳ ಬಳಿಯಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದಂತೆ ಈಗಲೂ ರಾಜ ತಾಯಿ ಮಗುವಿನೊಡನೆ ಬೇಕಾದಷ್ಟು ಕಾಲವನ್ನು ಕಳೆಯು ತ್ತಿದ್ದ. ಹಿಂದಿನಂತೆ ಈಗಲೂ ಮಗುವೇ ಬಹಳ ಕಾಲವನ್ನು, ಚಿತ್ರವನ್ನು ಆಕ್ರಮಿಸುತ್ತಿದ್ದ. ಅವನ ಹೋಲಿಕೆಯ ವಿಷಯ ಹಲವು ಬಾರಿ ದೊಡ್ಡ ದೊಡ್ಡ ಪ್ರೇಮ ಕಲಹಕ್ಕೆ ಆಸ್ಪದ ಕೊಟ್ಟಿತ್ತು. ಅವಳು "ಚಂದು ನಿಮ್ಮ ಅಚ್ಚೇ" ಎಂದರೆ ರಾಜ "ಉಹುಂ, ನಿನ್ನ ಅಚ್ಚು" ಎನ್ನುತ್ತಿದ್ದ. ಅವಳು "ಏನಿಲ್ಲ, ಆ ಹಣೆ ನೋಡಿ ನಿಮ್ಮದರ ಹಾಗೇ ಅಗಲ ಎತ್ತರ" ಎಂದರೆ ಅವನು "ಅದೇನು ಹೆಚ್ಚಿನ ಹೋಲಿಕೆಯಲ್ಲ. ಆ ಅಗಲದ ಕಣ್ಣು ಯಾರದ್ದು? ಆ ಎಸಳಾದ ಮೂಗೋ?" ಎಂದು ವಾದಿಸುತ್ತಿದ್ದ. ಆಗ ಅವಳು "ಸ್ವಲ್ಪ ನಿಮ್ಮ ಕಣ್ಣನ್ನು ನೋಡಿಕೊಳ್ಳಿ" ಎನ್ನುತ್ತ ಅವನ ಮುಂದೆ ಕನ್ನಡಿಯನ್ನು ಹಿಡಿಯುತ್ತ "ಹಾಗೇ ನಿಮ್ಮ ಹುಬ್ಬನ್ನೂ ಗಮನಿಸಿ. ಚಂದೂದೂ ಎಷ್ಟು ಬಿಲ್ಲಿನ ಹಾಗೆ ಬಗ್ಗಿದೆ" ಎನ್ನುತ್ತಿದ್ದಳು. ಅವನು ಮುಖವನ್ನು ತಿರುಗಿಸಿ ಕೊಂಡು "ಸರಿ, ಸರಿ ಅದರ ಹುಬ್ಬು ಗೊತ್ತಾಗೋ ಹಾಗೇ ಇಲ್ಲ. ಬಾಯಂತೂ ನಿನ್ನದರ ಹಾಗೇ. ನೋಡು ಎಷ್ಟು ಸಣ್ಣದಾಗಿದೆ ಗುಲಾಬಿ ಮೊಗ್ಗಿನ ಹಾಗೆ" ಎಂದು ಬಣ್ಣಿಸಿದರೆ ಅವಳು "ಏನಿಲ್ಲ. ಸ್ವಲ್ಪ ತುಟಿ ದಪ್ಪವೇ–ನಿಮ್ಮದರ ಹಾಗೆ" ಎಂದು ಬಾಯಿ ಬಡಿಯುತ್ತಿದ್ದಳು. ಅವನು ರೇಗಿ ಕನ್ನಡಿಯನ್ನು ಕಿತ್ತುಕೊಂಡು ಅವಳ ಮುಖಕ್ಕೆ ನೋಕುವಂತೆಯೇ

ಹಿಡಿದು “ನೋಡಿಕೋ ನಿನ್ನ ತುಟಿಯೇನು ಸಣ್ಣದೆ, ತೊಂಡೆಹಣ್ಣಿನಂತೆ ಅಷ್ಟೇ ಕೆಂಪಗಿಲ್ಲವೆ ಅಂತ. ನಾನು ಈಗ ನೋಡ್ತಿದೀನೇ ನಿನ್ನ ತುಟೀನ? ಏನೋ ನಂಗೆ ಗೊತ್ತಿಲ್ಲದ ಹಾಗೆ–ಅದರ ವಿಷಯ” ಎಂದು ನಗುತ್ತಿದ್ದ. ಅವಳು ಅವನ ಕೆನ್ನೆಗೆ ಮೃದುವಾಗಿ ಹೊಡೆದು “ಹೋಗಲಿ, ಈ ಗಲ್ಲ ಯಾರದ್ದು?” ಎಂದು ಕೇಳಿದರೆ, ಅವನು “ನನ್ನ ಮುಖದಷ್ಟು ಗುಂಡಾಗಿದೆಯೆ?” ಎಂದು ಮರು ಪ್ರಶ್ನಿಸುತ್ತಿದ್ದ. ಕಡೆಗೆ “ನೀವು ಹೇಳಿದ್ದೇ ಸರಿಯಾಗಲಿ,” “ನೀನು ಹೇಳಿದ್ದೇ ಸರಿಯಾಗಲಿ” ಎಂಬ ಒಪ್ಪಂದವಾಗುತ್ತಿತ್ತು.

ದಿನಗಳು ಕಳೆದಂತೆಲ್ಲ ಚಂದುವಿನ ತಯಾರಿಯ ವಿಷಯದಲ್ಲೂ ಗಂಡ ಹೆಂಡಿರಿಗೆ ಸಣ್ಣ ಪುಟ್ಟ ಜಗಳಗಳು ನಡೆಯುತ್ತಲೇ ಇದ್ದುವು. ಮಗುವಿಗಾಗಿ ಅವಳು ಮೀಸಲಾಗಿದ್ದಂತಿದ್ದುದು ರಾಜನಿಗೆ ಅಸೂಯೆ. ಅವನು ಅವಳ ಬಳಿಗೆ ಹೋದಾಗಲೆಲ್ಲ ಅವಳು ಚಂದುವಿನ ಕೆಲಸದಲ್ಲೇ ಇರುತ್ತಿದ್ದಳು. ಅವನ ಮಾತೇ ಮಾತು. ರಾಜನಿಗೆ ಸಿಕ್ಕುತ್ತಿದ್ದ ಅವಕಾಶಗಳು ಬಹಳ ಕಡಿಮೆಯಾಗಿದ್ದುವು. ಅವನು “ನೀನು ಮಗೂನ ಅಷ್ಟೊಂದು ಅಂಟಿಸಿಕೊಂಡುಬಿಟ್ಟಿದೀಯ. ನೆಲಕ್ಕೇ ಬಿಡೋದಿಲ್ಲವಲ್ಲ. ನಿಸ್ಸಹಾಯನಾಗ್ತಾನೆ. ಅವನಷ್ಟಕ್ಕವನು ಮಲಗಿರೋ ಹಾಗೆ, ಆಡಿಕೊಳ್ಳೋ ಹಾಗೆ, ಮಾಡೋದು ಒಳ್ಳೇದು ಅವನಿಗೂ, ನಿಂಗೂ. ಅಷ್ಟೊಂದು ಆಟದ ಸಾಮಾನು ಏನೇನೋ ಇವೆಯಲ್ಲ. ನೀನೇ ತೂಗಬೇಕು, ಅನ್ನ ತಿನ್ನಿಸಬೇಕು, ಆಡಿಸಬೇಕು–ಅಂತ ಎಲ್ಲ ನೀನೇ ಮಾಡಬೇಕು ಅನ್ನೋ ಹಟ ಸರಿಯಲ್ಲ. ಅಲ್ಲದೆ ದಾದಿ ಇರೋದು ಯಾಕೆ?” ಎಂದು ಹೇಳಿದರೆ ಅವಳು “ಆಗಲಿ, ಆಗಲಿ, ದಾದಿ ಹತ್ತಿರ ಬೆಳೆಯೋ ದಿನವೂ ಬರುತ್ತೆ, ಅವನೇ ಸ್ವತಂತ್ರವಾಗಿರೋ ಕಾಲವೂ ಬರುತ್ತೆ. ಸುಮ್ಮನೆ ಯಾಕೆ ಆತುರವಾಗಿದೀರಿ. ನಿಮಗೆ–ಗಂಡಸರಿಗೆ, ಹೆಣ್ಣಿನ ವಿಷಯ ಏನೇನೂ ಗೊತ್ತಾಗೋದಿಲ್ಲ” ಎಂದು ಬಾಯಿ ಮುಚ್ಚಿಸುತ್ತಿದ್ದಳು. ಅವಳು ಅಂದ ಹಾಗೇ ಚಂದುವಿಗೆ ಎರಡು ವರ್ಷವಾಗುವ ಹೊತ್ತಿಗೆ ಅವನಷ್ಟಕ್ಕೆ ಅವನೇ ಆಡುವುದನ್ನು ಕಲಿತ. ಆಟದ ಮೋಟಾರಿನಲ್ಲಿ ಕುಳಿತು ಪಾಂ ಪಾಂ ಎಂದು ಮನೆಯಲ್ಲೆಲ್ಲ ಹರಿದಾಡಿಸುತ್ತಿದ್ದ. ಚೆಂಡನ್ನು ಎಲ್ಲೆಲ್ಲೂ ಒದ್ದಾಡುತ್ತಿದ್ದ. ಸಿಳ್ಳನ್ನು ಊದಿ ಊದಿ ಮನೆಯವರಿಗೆಲ್ಲ ತಲೆ ಚಿಟ್ಟು ಹಿಡಿಸುತ್ತಿದ್ದ. ಎಲ್ಲೆಲ್ಲೋ

ಹತ್ತಿ ಇಳಿದು ಎಲ್ಲೆಲ್ಲಿದ್ದ ಸಾಮಾನುಗಳನ್ನೆಲ್ಲ ಎಳೆದು ಬೀಳಿಸಿ ಒಡೆದು ಚಚ್ಚಿ, ನಾಶಮಾಡಲಾಗದುದನ್ನು ಕಿತ್ತು ಗೂರಾಡಿ ಮನೆಯಲ್ಲಿ ಅವ್ಯವಸ್ಥೆಯ ಕ್ರಾಂತಿಯನ್ನೇ ತಂದು ಮನೆಯವರಿಗೆಲ್ಲ ಯಾವಾಗಲೂ ಕೆಲಸ ಕೊಡುತ್ತಿದ್ದ. ಎಲ್ಲೆಲ್ಲೂ ಕಾಲುಃಕಾಲಿಗೆ ಸಿಕ್ಕುತ್ತಿದ್ದ. ದಾದಿ ಇವನ ಹಿಂದೇ ಇರುವುದು ಅಗತ್ಯವಾಯಿತು. ಹಾಗೇ ಅವಳನ್ನು ಒಗ್ಗಿಸಿಕೊಳ್ಳುವುದಕ್ಕೂ ಅವಕಾಶವಾಯಿತು. ಅವನ ಅವಾಂತರವನ್ನು ಸಹಿಸಲಾರದೆ ರಾಜ ಒಂದೊಂದು ದಿನ "ಶುದ್ಧ ಕಾಡುಕಪಿ! ಹುಂ, ಏನೇನು ಅನಾಹುತ ಮಾಡ್ತಾನಪ್ಪ! ಎಲ್ಲಾದರೂ ಬಂದ ಅಂದರೆ ಪಿಂಗಾಣಿ ಅಂಗಡಿಗೆ ಹೋರಿ ನುಗ್ಗಿದ ಹಾಗೇ. ಮೇಲು ಸಮಾಜದ ಮಕ್ಕಳ ರೀತಿಯೇ ಇಲ್ಲ. ಎಲ್ಲ ನಿನ್ನ ಕೆಟ್ಟ ಶಿಕ್ಷಣ, ಅತಿ ಮೋಹದ್ದು," ಎಂದು ನಾಯಕಿಯ ಮೇಲೆ ರೇಗಿದರೆ ಅವಳು ಮಗುವನ್ನೂ ಅವನನ್ನೂ ನೋಡುತ್ತ ಗಟ್ಟಿಯಾಗಿಯೇ ನಗುತ್ತಿದ್ದಳು. ಮನೆಯ ಇತರರಿಗಂತೂ ಚಂದುವನ್ನು ಅಟ್ಟಿಕೊಳ್ಳುವ ಧೈರ್ಯವಾಗಲೀ, ಮನಸ್ಸಾಗಲೀ ಇರಲಿಲ್ಲ. ಅವನನ್ನು ಮುದ್ದಿಸಲು ಎಲ್ಲರೂ ಸ್ಪರ್ಧೆ ನಡೆಸುತ್ತಿದ್ದರು. ಆದರೂ ಒಂದೊಂದು ವೇಳೆ ಇವನ ಹಾವಳಿ, ಇಲ್ಲವೇ ರಗಳೆ ಮಿತಿಮೀರಿ ಇವನನ್ನು ದಾದಿಯೊಂದಿಗೆ ಮನೆಯ ಮುಂದಿನ ಮುನಿಸಿಪಲ್ ಪಾರ್ಕಿಗೆ ಅವನ ಮೋಟಾರು, ಚೆಂಡು-ಸಮಸ್ತ ಸಂಸಾರದೊಂದಿಗೆ ಅಟ್ಟಲೇಬೇಕಾಗಿ ಬರುತ್ತಿತ್ತು. ದಾದಿ ಹೇಳುತ್ತಿದ್ದಂತೆ ಅಲ್ಲಿ ಅವನಿಗೆ 'ನಾಲ್ಕಾರು ದಿನದಲ್ಲೇ ನೂರಾರು ಸ್ನೇಹಿತರಾದರು.' ಅತ್ತ ಕಡೆಯ ಆಕರ್ಷಣೆ ದಿನದಿನಕ್ಕೆ ಹೆಚ್ಚುತ್ತ ಅವನು ಮನೆಯಲ್ಲಿ ಇರುವುದಕ್ಕೇ ಇಷ್ಟಪಡದೆ, ದಾದಿಯನ್ನು ಹೊರಡಿಸಿಕೊಂಡು ಪಾರ್ಕಿನಲ್ಲಿ, ಬೀದಿಯಲ್ಲಿ, ಸಿಕ್ಕಿದೆಡೆಯಲ್ಲೆಲ್ಲ ಅಲೆದಾಡುವ ದಿನವೂ ಬಂದಿತು ಆದರೂ ಉಣ್ಣಿಸ ಬೇಕಾದರೆ ಅಮ್ಮನೇ ಬೇಕು. ಅವಳು ಕತೆ ಹೇಳದೆ, ಲಾಲಿ ಹಾಡದೆ, ತೊಡೆಯ ಮೇಲೆ ತಟ್ಟಿ ಮಲಗಿಸದೆ, ಅವನಿಗೆ ನಿದ್ದೆ ಹತ್ತುತ್ತಿರಲಿಲ್ಲ. ಅವನು ಬಿದ್ದು ಎದ್ದಾಗ, ಒಡನಾಡಿಗಳೊಡನೆ ಹೊಡೆದಾಡಿದಾಗ-ಏನಾದರೂ ಅಷ್ಟು ತಡೆ, ನೋವುಗಳಾದರೂ ವರದಿ ಮಾಡುವುದಕ್ಕೆ, ದೂರು ಹೇಳುವುದಕ್ಕೆ ಅಮ್ಮನನ್ನೇ ಹುಡುಕಿಕೊಂಡು ಬರುತ್ತಿದ್ದ. ಅವಳ ತೋಳಿನಲ್ಲಿ ಅವನ ಕಷ್ಟವೆಲ್ಲ ಪರಿಹಾರವಾಗುತ್ತಿತ್ತು. ಹೀಗೆಂದರೆ ತಂದೆ ದೂರ

ವಿದ್ದನೆಂದಲ್ಲ. ಅಂಬೆಗಾಲಿಡುವುದು, ಮಗುವಿನಂತೆ ಮುದ್ದು ಮುದ್ದಾಗಿ ಮಾತನಾಡುವುದು, ಇವನನ್ನು ಅನುಕರಣ ಮಾಡುವುದು, ಎತ್ತಿಸೆದು ಆತು 'ಕಾಕಾ ಹುಶ್' ಮಾಡುವುದು, ನಾಯಿ ಬೆಕ್ಕು ಕತ್ತೆಗಳಂತೆ ಕೂಗುವುದು, ಕಚಗುಳಿ ಇಟ್ಟು ನಗಿಸುವುದು, ಕೂಸುಮರಿ ಮಾಡುವುದು–ಇವೆಲ್ಲ ಅವನ ಪಾಲೇ. ಆದರೆ ಚಂದುವಿಗೆ ಅಪ್ಪನ ಬೆನ್ನಾದರೂ ಭುಜದ ಮೇಲೆ ಇಣಿಕಿ ನೋಡಲು ಅಮ್ಮ ನಿಲ್ಲದಿದ್ದರೆ ಕೂಸುಮರಿಯೇ ಬೇಕಾಗುತ್ತಿರಲಿಲ್ಲ. ಅಪ್ಪ ಅಂಬೆಗಾಲಿಟ್ಟು ಸವಾರಿಗೆ ಕರೆದರೂ ಪಕ್ಕದಲ್ಲಿ ಅಮ್ಮ ಹಿಡಿದುಕೊಳ್ಳದಿದ್ದರೆ ಕುದುರೆಯನ್ನು ಹತ್ತುತ್ತಲೇ ಇರಲಿಲ್ಲ. ಕಚಗುಳಿಯಿಕ್ಕಿದಾಗ ಕೂಗಿ ಕೊಂಡು ಓಡಿಹೋಗಿ ಅಮ್ಮನ ಸೊಂಟದ ರಕ್ಷಣೆ ಪಡೆಯುತ್ತಿದ್ದ. ಎತ್ತಿಸೆ ದಾಗ "ಅಮ್ಮಾ, ನೋಡು!" ಎಂದು ನಗುವುದಕ್ಕೆ ಅವಳಿಲ್ಲದಿದ್ದರೆ ಒದರಿ ಕೊಂಡು ಇಳಿದೇಬಿಡುತ್ತಿದ್ದ. ಅಪ್ಪನೊಡನೆ ಕಾರಿನಲ್ಲಿ ಕುಳಿತು ಲಾಲ್ ಬಾಗಿಗೆ ಹೋಗುವುದಕ್ಕೇನೋ ಆತುರ. ಆದರೆ ಅಲ್ಲಿ ನಡೆಯುವಾಗ ಅಪ್ಪ ಎತ್ತಿಕೊಂಡರೆ, ಅಮ್ಮ ಅವನನ್ನು ಸೋಕಿಕೊಂಡೇ ನಡೆಯುತ್ತಿರಬೇಕು. ಸ್ವಲ್ಪ ದೂರವಾದರೆ ಇಳಿಬಿದ್ದನೇ–ಅವಳ ಕಡೆಗೆ. ದಾದಿಯಂತೂ ಬರಿಯ ಬಾಲ–ಗುಂಪಿಗೆ. ಹುಂ, ಚಂದು ರಾಮಾಯಣಕ್ಕೇನು–ಮೊದಲೆಲ್ಲಿ ಕೊನೆ ಯೆಲ್ಲಿ. ಅಂತೂ ಹೀಗೆ ಬೆಳೆದು ಬಂದಿತ್ತು, ತಾಯಿ ಮಗನ ಬಾಂಧವ್ಯ.

ಚಂದು ಬೆಳೆಯುತ್ತಿದ್ದಂತೆ, ಅವನಿಗೆ ಹೊರಗಿನ ಆಕರ್ಷಣೆ ಹೆಚ್ಚು ಹೆಚ್ಚಾಗುತ್ತಿದ್ದಂತೆ, ನಾಯಕಿಗೆ ಕಾಲ ಹೆಚ್ಚು ಹೆಚ್ಚು ಭಾರವಾಗುತ್ತಿತ್ತು. ಕೈಗೆ ಕಾಲಿಗೆ ಆಳು ಕಾಳು; ಯಾವ ಮನೆಗೆಲಸದ ಯೋಚನೆಯೂ ಇರಲಿಲ್ಲ. ಅವಳು ಊಟ ಸ್ನಾನಗಳಿಗಲ್ಲದೆ ಓಡಾಡುವುದೇ ಕಡಿಮೆ. ಸೋಫ, ಇಲ್ಲ ಮಂಚ, ಇಲ್ಲ ಕನ್ನಡಿಯ ಮುಂದೇ ಅವಳ ಕಾಲ ಬಹಳವಾಗಿ ಕಳೆಯುತ್ತಿತ್ತು. ಈಗಷ್ಟು ಓದುವುದಕ್ಕೆ ಬಂದಿದ್ದು ಸೋಫಾದ ಮೇಲೆ ಕಾಲು ಚಾಚಿಕೊಂಡು ಆ ಪತ್ರಿಕೆ ಈ ಪತ್ರಿಕೆಗಳನ್ನು ಓದಿಕೊಳ್ಳುತ್ತಿದ್ದಳು. ಅವಳಿಗೆ ದಪ್ಪ ದಪ್ಪ ಪುಸ್ತಕಗಳು ಹಿಡಿಸುತ್ತಿರಲಿಲ್ಲ. ಯಾಕೋ ಹತ್ತು ಇಪ್ಪತ್ತು ಪುಟಗಳನ್ನು ನಿಧಾನವಾಗಿ ಓದುವುದರಲ್ಲೇ ಬೇಸರವಾಗುತ್ತಿತ್ತು, ಆಯಾಸವೇ ಆದಂತೆ ತೋರುತ್ತಿತ್ತು, ಹೆಚ್ಚಿನ ಬಲವಂತ ಕಣ್ಣು ನೋವು ತಲೆಯ ನೋವುಗಳನ್ನು ತರುತ್ತಿತ್ತು. "ಇದೇನು ಪುಸ್ತಕಗಳೇ ಹೀಗೋ,

ನನ್ನ ಶಕ್ತಿ ಆಸಕ್ತಿಗಳೇ ಸಾಲವೋ" ಎಂದುಕೊಳ್ಳುತ್ತಿದ್ದಳು .ಹೀಗಿಪ್ಪು ಚಿತ್ರಗಳಿಂದ ತುಂಬಿದ್ದ 'Film India,' 'Illustrated Weekly' ಮೊದಲಾದ ಮಾಸಪತ್ರಿಕೆ ವಾರಪತ್ರಿಕೆಗಳನ್ನೇ ಅಷ್ಟು ತಿರಿಪಿ ಹಾಕುತ್ತಿದ್ದಳು. ಅವುಗಳಲ್ಲಿಯೂ 'ಸಿನಿಮಾ ಪ್ರಪಂಚ'ದಲ್ಲಿ ಹೆಚ್ಚು ಆಸಕ್ತಿ. 'ದುರ್ಗ'ದಲ್ಲಿ 'ಹುಟ್ಟು ನಟಿ, ಸುಪ್ರಸಿದ್ಧ ತಾರೆ, ಲಾವಣ್ಯಮಣಿ ದೇವಿಕಾರಾಣಿ,' 'ದುನಿಯಾ ನ ಮಾನೆ'ಯಲ್ಲಿ 'ಕೋಕಿಲವಾಣಿ ರೂಪರಾಣಿ ಶಾಂತಾ ಆಪ್ಟೆ,' 'ಸಪೇರಾ'ದಲ್ಲಿ 'ಗಾನಮೋಹಿನಿ, ಅಭಿನಯ ಚತುರೆ ಪ್ರಖ್ಯಾತ ಕನ್ನನ್ ಬಾಲಾ.' 'ಕಂಗನ್' ಚಿತ್ರದಲ್ಲಿ ಹೊಸ ತಾರೆ ಚಲಃನೆ 'ಲೀಲಾ ಚಿಟ್ನೀಸ್.' 'ಅನ್ನಾಕರೀನ'ದಲ್ಲಿ 'ಪ್ರಖ್ಯಾತ ನಟಿ ಗ್ರೇಟಾ ಗಾರ್ಬೋ,' 'ಸೀಕ್ರೆಟ್ಸ್'ನಲ್ಲಿ 'ಜಗತ್ ಪ್ರೇಯಸಿ ಮೇರಿ ಪಿಕ್‌ಫರ್ಡ್' ಮುಂತಾಗಿ ಪೂರ್ವ ಪಶ್ಚಿಮಗಳ ಅನೇಕಾನೇಕ ಸುಪ್ರಸಿದ್ಧ ತಾರೆಯರ ಚಿತ್ರ ಗಳನ್ನು ದಿಟ್ಟಿಸಿ ನೋಡುತ್ತಿದ್ದಳು. ಅವರ ಅಭಿನಯದ ವಿಚಾರವಾಗಿ ಪ್ರಶಂಸೆ ಟೀಕೆಗಳನ್ನು ಓದುತ್ತಿದ್ದಳು. ಹಾಗೇ ಆಗಾಗ ಒಂದೊಂದು ಚಿತ್ರ ದೊಂದಿಗೆ ಕನ್ನಡಿಯ ಮುಂದೆ ಹೋಗಿ ನಿಂತು ಹಲವು ಭಾವ ಭಂಗಿಗಳನ್ನು ಪ್ರದರ್ಶಿಸುತ್ತ 'ನಾನು ಇವಳಷ್ಟೇ-ಇವಳಿಗಿಂತಲೂ-ಚೆನ್ನಾಗಿಲ್ಲವೆ? ನಾನು ಪಾತ್ರವಹಿಸಿದ್ದರೆ ಹೇಗೆ ಮಾಡ್ತಾ ಇದ್ದೆನೋ; ವಿಮರ್ಶಕರೆಲ್ಲ ಏನೇನನ್ನು ಬರೆಯುತ್ತಿದ್ದರೋ. ಆಗ ಓದೋದು ಎಷ್ಟು ಚೆನ್ನ-ನನ್ನ ವಿಚಾರ! ನನ್ನ ಚಿತ್ರವೂ ಕಂಡಿದ್ದರೆ! ಹುಂ, ನಾನೇನು ಇವರು ಯಾರಿಗೆ ಕಡಿಮೆಯಾಗಿರು ತ್ತಿದ್ದೆ? ಹುಂ, ನಂಗೆಲ್ಲಿ ಅದೃಷ್ಟ. ಆಹಾ ಅವಕಾಶ ಸಿಕ್ಕಿದ್ದರೆ, ಸಿಕ್ಕಿದರೆ! ....ಹೂಂ, ಯಾಕಾಗಬಾರದು? ಇವರಲ್ಲೂ ಎಷ್ಟೋ ಜನ ಒಳ್ಳೆಯೋರೂ ಇದಾರಂತಲ್ಲ. ಯಾಕಿರಬಾರದು? ಅಸಾಧ್ಯವೇನಲ್ಲವಲ್ಲ........" ಎಂದು ಮುಂತಾಗಿ ಏನೇನನ್ನೋ ಯೋಚಿಸುತ್ತಿದ್ದಳು. ನಿರಾಶಳಾಗಿ ಪತ್ರಿಕೆಯನ್ನು ಮುಚ್ಚಿ ಅತ್ತ ಒಗೆಯುತ್ತಿದ್ದಳು.

ಅವಳಿಗೆ ವೀಣೆಯ ಅಭ್ಯಾಸದಲ್ಲಿ ತಾಳ್ಮೆಯಿರಲಿಲ್ಲ. ಅಲ್ಲದೆ ಅಷ್ಟಿಷ್ಟು ಹೊತ್ತಿನಲ್ಲಿ ಬೆರಳುಗಳೇ ಸೋಲುತ್ತಿದ್ದುವು. 'ಇದೇಕೆ ಇಷ್ಟು ಸೂಕ್ಷ್ಮ ವಾಗಿದೀನಿ? ಅಭ್ಯಾಸ ಸಾಲದೋ ಏನೋ' ಎಂದುಕೊಂಡು 'ಹುಂ, ಇದಕ್ಕೆ ಯಾರು ಒದ್ದಾಡುತ್ತಾರೆ. ಹಾಡುಗಾರಿಕೆ ಬರುತ್ತದಲ್ಲ, ಅದೇ

ಸಾಕು. ನಂಗೆ ಇದರಲ್ಲಿ ಅಭಿರುಚಿಯಿಲ್ಲ ಅಂತ ಕಾಣುತ್ತೆ' ಎನ್ನುವ ತೀರ್ಮಾನಕ್ಕೆ ಬಂದಳು. ವೀಣೆ ಮೂಲೆಗೆ ಬಿದ್ದಿತು–ಅನೇಕ ಶ್ರೀಮಂತರ ಮನೆಗಳಲ್ಲಿ ಬಿದ್ದಿರುವಂತೆ.

ಒಂದು ದಿನ ಮನೆಗೆ ಹೊಸ ಚಿತ್ರವನ್ನು ತಂದಾಗ ಅವಳಿಗೆ ಚಿತ್ರಕಲೆಯ ಮೇಲೆ ಮನಸ್ಸು ಹೋಯಿತು. ತಾನೂ ಬರೆದು ಅಷ್ಟು ಕಾಲವನ್ನು ಯಾಕೆ ಕಳೆಯಬಾರದು ಎನ್ನಿಸಿತು. ಯೋಚನೆ ಬಂದದ್ದೇ ತಡ, ಉಪಕರಣಗಳನ್ನೆಲ್ಲ ಕೊಂಡು ಚಿತ್ರ ಬರೆಯಲು ಮೊದಲುಮಾಡಿದಳು. ಆದರೆ ಎರಡು ತಿಂಗಳೊಳಗಾಗಿ ನಾಲ್ಕಾರು ಬೋರ್ಡುಗಳ ಮೇಲೆ ಬಣ್ಣ ಸುರಿದು ನಾಚಿ ತನಗಿದ್ದುದು ಬರಿಯ ಹುಮ್ಮಸ್ಸು, ಶಕ್ತಿಯಿಲ್ಲ ಎಂದು ಅರಿತುಕೊಂಡು ಅಸಮಾಧಾನದಿಂದ ನಿಲ್ಲಿಸಿಬಿಟ್ಟಳು.

ತನ್ನ ಸ್ನೇಹಿತರು ಕೆಲವರು ಕಸೂತಿಯಲ್ಲಿ ಹೆಣಗುವುದನ್ನು ಕಂಡಿದ್ದು 'ಇದು ಬರಿ ಯಂತ್ರದ ತರಹ, ಏನು ಹೆಚ್ಚುಗಾರಿಕೆಯಿಲ್ಲ, ಸ್ವಶಕ್ತಿಯಿಲ್ಲ ದೋರು ಮಾಡೋದು' ಎಂದು ಅದರ ಕಡೆಗೆ ಗಮನವನ್ನೇ ಕೊಡಲಿಲ್ಲ.

ಹೀಗೆ ಹಲವು ಪರೀಕ್ಷೆಗಳಲ್ಲಿ ಸೋತು 'ಉಹುಂ, ನಂಗೆ ಯಾವುದೂ ಸರಿಯಲ್ಲ–ಅಭಿನಯ ಕಲೆ ಒಂದು ಬಿಟ್ಟು. ಅದು ಸಾಧಿಸಿದೆ, ಆದರೆ ಅವಕಾಶವಿಲ್ಲವಲ್ಲ. ಇದ್ದರೇನಾದರೂ ಜೀವನದಲ್ಲಿ ನನ್ನದೇ ಆದ ಒಂದು ಗುರಿಯ ಸಾಧನೆ, ಆಸಕ್ತಿ, ಉತ್ಸಾಹ ಇರುತ್ತೆ ಬಾಳು ಹಗುರವಾಗಿರುತ್ತಿತ್ತೇನೋ' ಎಂದು ಮರುಗುತ್ತಿದ್ದಳು. ಆದರೆ ಅವಳಿಗೆ ಈ ಬಗ್ಗೆ ರಾಜನ ಅಭಿಪ್ರಾಯವೇನು ಹೊಸದಾಗಿರಲಿಲ್ಲ. ಅವನ ಮಾತುಗಳು ಯಾವಾಗಲೂ ಕಿವಿಯಲ್ಲಿ ಕೇಳಿಸುತ್ತಿದ್ದುವು. ಹೀಗೆ ಸವೆಯುದಷ್ಟಿದ್ದ ಕಾಲದಲ್ಲಿ ಅವಳಿಗೆ ಈ ಕನಸಿನ ಮನೆಯನ್ನು ಕಟ್ಟುವುದು, ಕೆಡಹುವುದು; ನುಚ್ಚುನೂರಾದ ಮೇಲೆ ನಿಟ್ಟುಸಿರುಬಿಟ್ಟು ನಿರಾಶಳಾಗುವುದು ಇದೂ ಒಂದು ಹವ್ಯಾಸವೇ ಆಗಿಹೋಯಿತು.

ಹೀಗೆ ಹವ್ಯಾಸಗಳು ಇಷ್ಟೊಂದು ಕಡಿಮೆಯಾದಾಗ ಹಾಸಿಗೆಯ ಮೇಲೆ ಹೊರಳುವುದು, ಕನ್ನಡಿಯ ಮುಂದೆ ನಿಲ್ಲುವುದು ಹೆಚ್ಚು ಹೆಚ್ಚು ಸಹಾಯಕ್ಕೆ ಬರುತ್ತಿದ್ದುವು. ಹಾಸಿಗೆಯ ಮೇಲೆ ಹೊರಳಿದಷ್ಟೂ ಮೈ ನೋವು, ಕನ್ನಡಿಯ ಮುಂದೆ ನಿಂತಷ್ಟೂ ಅಸಮಾಧಾನ.

ತಿಂದದ್ದು ಸರಿಯಾಗಿ ಅರಗುತ್ತಿರಲಿಲ್ಲ, ಕಮರು ತೇಗು. ಅನ್ನ ಸೇರುವುದೇ ಕಡಿಮೆ. ಹೆಚ್ಚು ಹೊತ್ತು ಕುಳಿತರೆ ಸೊಂಟನೋವು, ಒರಗಿ ಕೊಳ್ಳದಿದ್ದರೆ ಬೆನ್ನು ನೋವು, ಕಾಲು ಮಡಿಸಿದ್ದರೆ ಮಂಡಿ ನೋವು, ನಡೆದರೆ ಕಾಲು ನೋವು, ಏನೊಂದೂ ಕಾರಣವಿಲ್ಲದಂತೆಯೋ ತಲೆ ನೋವು– ಅಂತೂ ನೋವುಗಳ 'ಸೀರೀಸ್.' ಮೋಡ ಹಾಕಿದರೆ ಶೀತ, ನೆಗಡಿ– ಆಗಾಗ ಕೆಮ್ಮೂ ಕೂಡ. ನಾಲ್ಕು ದಿನ ಮಳೆ ಹುಯ್ದರೆ ಕೀಲು ಹಿಡಿತ. ಅನೀಮಿಯಾ, ಹಿಪೋಕೊಂಡ್ರಿಯಾ, ಇನ್ನು ಯಾವ ಯಾವ 'ಯಾ' ಗಳೋ ಆ ಗುಟ್ಟನ್ನೆಲ್ಲ ದೇವರೇ–ಉಹುಂ, ಡಾಕ್ಟರೇ ಬಲ್ಲ. ಗೊತ್ತಿವೆಯಲ್ಲ, ದೌರ್ಬಲ್ಯದ ಕಾಯಿಲೆಗಳು–ಒಂದಲ್ಲ ಒಂದು ಇದ್ದೇ ಇರುತ್ತಿತ್ತು. ಸರಿ, ಡಾಕ್ಟರು, ಔಷಧಿ ಕುಡಿತ, ಇಂಜಕ್ಷನ್‌ಗಳ ಸಾಲು, ಟಾನಿಕ್‌ಗಳು, ವೈಟಮಿನ್ ಗುಳಿಗೆಗಳು–ಈ ವೈದ್ಯ ಚಿಕಿತ್ಸೆಗಳ ಪರಂಪರೆ. ಸಾಲದುದಕ್ಕೆ ಹೆಚ್ಚು ಹೆಚ್ಚು ಎಚ್ಚರಿಕೆ, ಹೆಚ್ಚು ಹೆಚ್ಚು ಆರಾಮ ಚಿಕಿತ್ಸೆ. ಈ ಕೆಟ್ಟ ಸುತ್ತು ಪೂರ್ತಿಯಾಗಿ ಮತ್ತೆ ಮತ್ತೆ ಸುತ್ತುತ್ತಿದ್ದರೆ ಅವಳ ಗತಿಯೇನಾಗ ಬೇಕು? ಮಾವಳ್ಳಿಯ ದುಡಿತದ ಗುಲಾಮಗಿರಿಯಲ್ಲಿ ಸವೆದು ಸೋತು ಕಪ್ಪು ಸುತ್ತಿಕೊಂಡಿದ್ದರೆ, ಈ ಬಸವನಗುಡಿಯ ಆರಾಮ ಗುಲಾಮಗಿರಿ ಯಲ್ಲಿ ಬಡವಾಗಿ ಬಿಳಿಚಿಕೊಳ್ಳುತ್ತಿದ್ದಳು.

ಅಂದಮೇಲೆ ಅವಳಿಗೆ ಕನ್ನಡಿಯ ಮುಂದೆ ಎಷ್ಟೆಷ್ಟೋ ಹೊತ್ತು ನಿಲ್ಲುವ ಅಗತ್ಯ ಅಷ್ಟಿಷ್ಟೆ–ಅದೂ ಕಾಲಕ್ಕೆ ಬೆಲೆಯಿಲ್ಲದಾಗ, ಅಂಥ ಅನು ಕೂಲವಿದ್ದಾಗ? ಸರಿ, ಪೌಡರಿನ ಮೇಲೆ ಕೆಂಪನ್ನು ಸ್ವಲ್ಪ ಹೆಚ್ಚಾಗಿ ಹಾಕು ತ್ತಿದ್ದಳು, ತುಟಿಗೂ ಕೊಂಚವೇ ಕೊಂಚ ರಂಗು–ಸಹಜವಾದ ಕೆಂಪೇ ಅನ್ನುವಷ್ಟು. ರಾಜ "ನಿಜ, ಕೊಂಚ ರಕ್ತ ಕಡಿಮೆಯಾಗಿದೆ. ಆದರೆ ಚೆಲುವು ಇದ್ದೇ ಇದೆ–ಸ್ವಲ್ಪ ಬೇರೆಯ ತರಹ ಅಷ್ಟೆ. ಈ ರಂಗೆಲ್ಲ ಯಾಕೆ?" ಎಂದುದು ಅವಳ ಕಿವಿಯ ಮೇಲೇ ಬೀಳುತ್ತಿರಲಿಲ್ಲ. ಎಷ್ಟಾದರೂ ನಟಿ, ಅವಳ ಸೌಂದರ್ಯದ, ಆಕರ್ಷಣೆಯ ಗುಟ್ಟು ಅವಳಿಗಿಂತ ಅವನಿಗೇನು ಗೊತ್ತು. ಹುಬ್ಬನ್ನೂ ತಿದ್ದುಕೊಳ್ಳುತ್ತಿದ್ದಳೋ ಎಂದು ಅವನಿಗೆ ಅನುಮಾನ. ಥಳಗುಟ್ಟುವ ಕುಂಕುಮದ ದುಂಡು ಬಟ್ಟೆಗೇ ಹತ್ತು ನಿಮಿಷ ಮೀಸಲು. ಚಂದು ಹುಟ್ಟಿದ ಮೇಲೆ ಸ್ವಲ್ಪ ಕೂದಲು ಕಡಿಮೆಯಾಗಿತ್ತು. ಅವಳು

ಬಹಳ ಎಚ್ಚರಿಕೆಯಿಂದ ಆರಿಸಿ ಚೌರಿಯನ್ನು ಸೇರಿಸಿ ಸೊಗಸಾದ ಜಡೆ ಹೆಣೆದು ದಿನಕ್ಕೊಂದು ಬಣ್ಣದ ರಿಬ್ಬನ್ ಬಿಗಿದು, ಎಡ ಭುಜದಿಂದ ಎದೆಗೆ ಇಳಿಬಿಟ್ಟು, ಕೈತೋಟದ ದೊಡ್ಡ ಗುಲಾಬಿಯನ್ನು ಎರಡು ಹಸಿರೆಲೆಯ ಸಮೇತ ಕುಯ್ದು ಓರೆಯಾಗಿ ಸಿಕ್ಕಿಸುತ್ತಿದ್ದಳು. ಮುಂಗುರುಳನ್ನು ತಿದ್ದು ವುದು ಎಷ್ಟು ಹೊತ್ತು? ನಾಲ್ಕು ಅಲೆಗುರುಳನ್ನು ಬೇಕಾಗಿ ಬಿಡುವುದರಲ್ಲಿ ಎಷ್ಟು ಜೋಪಾನ! ಸಿಕ್ಕಿಸಿದ ಹೇರ್‌ಪಿನ್ ಕಾಣುತ್ತಲೇ ಇರಲಿಲ್ಲ– ಅಷ್ಟೊಂದು ಚಾತುರ್ಯ. ಅವನು "ಇದೇನು ತೀರ ಹುಡುಗಿಯ ಹಾಗೆ, ಶೋಭಿಸೋದಿಲ್ಲ" ಎಂದು ಆಕ್ಷೇಪಿಸಿದರೆ ಹುಬ್ಬು ಕೂಡಿಸಿ ನೋಡಿ "ಹುಡು ಗಿಯೇ; ಮುದುಕಿಯೇನು?" ಎಂದು ಕತ್ತನ್ನು ಕೊಂಕಿಸುತ್ತಿದ್ದಳು. ಈಚೀಚೆಗೆ ಅವಳೇ ಬದಲಾಯಿಸಿ ಹೊಲಿಸಿದ ರವಿಕೆಗಳನ್ನು ಕಂಡು "ರವಿಕೆಗೆ ಸ್ವಲ್ಪವಾದರೂ ತೋಳಿರಬಹುದಾಗಿತ್ತು, ಎದೆಯ ಮೇಲೆ ಕತ್ತರಿಸಿದ್ದು ಸ್ವಲ್ಪ ಮೇಲಿರಬೇಕಾಗಿತ್ತು. ಆ ಬಿಳಿ ಬಟ್ಟೆ ಸ್ವಲ್ಪ ದಪ್ಪ ವಾಗಿದ್ದರೆ...." ಎಂದು ಟೀಕಿಸಿದರೆ ಅವಳಿಗೆ ಅದರ ನಿಜ ಕೊಂಚ ಸಿಟ್ಟನ್ನೇ ತರುತ್ತಿತ್ತು. "ಅಯ್ಯೋ, ಬಹಳ ಸೆಕೆ, ನಿಮಗೇನು ಗೊತ್ತಾಗುತ್ತೆ. ತೆಳ್ಳಗಿದೆ ಅಂದರೆ 'ಬಾಡಿ' ಹಾಕಿಕೊಂಡಿಲ್ಲವೆ? ನಿಮ್ಮದು ಒಳ್ಳೆ ಹಿಂಸೆ" ಎನ್ನು ತ್ತಿದ್ದಳು. ಆ 'ಬಾಡಿ'ಯನ್ನು ಎತ್ತರಿಸಿ ಬಿಗಿಯುವುದರಲ್ಲಿ ಸ್ವಲ್ಪ ಹೆಚ್ಚು ಯತ್ನವೇ ನಡೆಯುತ್ತಿತ್ತು. ಸೀರೆ ಚೋಟಗಲ ನೆರಿಗೆಯಾಗಿ, ರವಿಕೆಯ ಮೇಲೆ ಹಾಯ್ದು, ಭುಜದ ಮೇಲಿನಿಂದ ಬೆನ್ನಿನ ಮೇಲೆ ಇಳಿಬಿದ್ದಿದ್ದಾಗ ರಾಜ "ಮನೇಲಿ ಹೇಗಿದ್ದರೂ ಸರಿಯೆ. ಇದು ಚೆನ್ನಾಗೇ ಇರುತ್ತೆ ನಿಂಗೆ. ಹೊರಗಡೆ ಮಾತ್ರ ಇನ್ನೂ ಕೊಂಚ ಯಾಕೆ ಹೊದ್ದುಕೋಬಾರದು?" ಎಂದು ಕೇಳಿದರೆ "ನಿಮ್ಮದು ಹಳೇ ಫ್ಯಾಷನ್. ಇದೆಲ್ಲ ಕಟ್ಟಿಕೊಂಡು ನಿಮಗೇನು? ನಿಮ್ಮ ಬಟ್ಟೇನ ನಾನು ಟೀಕೆ ಮಾಡುತ್ತೇನೇ?" ಎಂದು ವಾದಿಸುತ್ತಿದ್ದಳು. ಸೊಂಟದ ಸೀರೆಗೂ ಎದೆಯ ರವಿಕೆಗೂ ಮಧ್ಯೆ ಬಟ್ಟೆಯಾಕ್ರಮಣವಿಲ್ಲದ ಭೂಮಿ. ದಿನಕ್ಕೆ ಎರಡು ಬಾರಿಯಾದರೂ ಸೀರೆಯ ಬದಲಾವಣೆ. ಸೀರೆ ರವಿಕೆಗಳ ಜೋಡಿ ಫ್ಯಾಷನ್ ಪುಸ್ತಕ ಹೇಳಿ ದಂತೆ, ಕನ್ನಡಿ ಒಪ್ಪಿಸಿದಂತೆ. ಇದಕ್ಕೆ ತಕ್ಕಂತೆ ಬಳೆ, ಉಂಗುರ, ಹಾರ, ಜಿಂಡೋಲೆ ಹೂಗಳ ಬದಲಾವಣೆ. ಇಟ್ಟಿಟ್ಟು ನೋಡಿಕೊಂಡು ಒಪ್ಪ

ಬೇಕು. ಬೆರಳಿನ ಉಗುರಿಗೂ ಕೊಂಚ ರಂಗು—ಆಂಗ್ಲೋ ಇಂಡಿಯನ್ ಹುಡುಗಿಯರು ಹಾಕುವಷ್ಟಲ್ಲ. 'ಯೂಡಿಕೊಲೋನ್' 'ಈವಿನಿಂಗ್ ಇನ್ ಪ್ಯಾರಿಸ್' ಯಾವುದಾದರೊಂದು ಪರಿಮಳದ ಪ್ರೋಕ್ಷಣೆ. ಹೀಗೆಲ್ಲ ಅಲಂಕಾರ ಪೂರ್ತಿಯಾಗುವುದಕ್ಕೆ ಹೊತ್ತಿನ ನಿರ್ಧಾರ ಯಾವುದೂ ಇರಲಿಲ್ಲ. ಈ ಪೂರ್ವ ಸಿದ್ಧತೆಯಾದ ಮೇಲೆ ಡಾಕ್ಟರ ಸೂಚನೆಯಂತೆ ವಿಹಾರಕ್ಕಾಗಿ ಲಾಲ್‌ಬಾಗಿಗೆ—ಕಾರಿನಲ್ಲಿ. ರಾಜ ಇವಳಿಗಾಗಿ ಕಾಯುತ್ತ ಸೋಫದ ಮೇಲೆ ಕುಳಿತಿದ್ದರೆ ಹೊರಡುವ ಹೊತ್ತಿಗೆ ಎರಡು ಕನಸುಗಳು ಬೀಳುತ್ತಿದ್ದವು; ಸಿದ್ಧೆ ಬರುತ್ತದೆಯೆಂದು ಅತ್ತಿತ್ತ ತಿರುಗಾಡುತ್ತಿದ್ದರೆ ಶತಪಥ ಲಕ್ಷ ಪಥವಾಗಿ ಲಾಲ್‌ಬಾಗಿನ ನಡಿಗೆ ಮನೆಯಲ್ಲಿಯೇ ಮುಗಿದು ಹೋಗುತ್ತಿತ್ತು.

ಲಾಲ್‌ಬಾಗಿನಲ್ಲಿ ವಿಹರಿಸುವಾಗ ಎದುರಿಗೆ ಹಾಯ್ದುವರು, ಹಿಂದೆ ಒರುತ್ತಿದ್ದವರು, ರಸ್ತೆಯ ಅಕ್ಕಪಕ್ಕದಲ್ಲಿ ಹುಲ್ಲಿನ ಮೇಲೆ, ಬೆಂಚುಗಳ ಮೇಲೆ ಕುಳಿತಿದ್ದ ಗಂಡಸರು—ಹೆಂಗಸರೂ ಕೂಡ—ಇವಳ ಕಡೆಗೆ ಪದೇ ಪದೇ ನೋಡುತ್ತಿದ್ದರು. ಅವಳು ಅತ್ತಿತ್ತ ತಿರುಗಿ ವಾರೆಗಣ್ಣಿನಿಂದಲೇ ಇದನ್ನು ತಿಳಿದು, ತನ್ನ ಆಕರ್ಷಣೆ ಇನ್ನೂ ಬೇಕಾದಷ್ಟಿದೆಯೆಂದು ತೃಪ್ತಿಹೊಂದು ತ್ತಿದ್ದಳು, ಅದನ್ನು ಹೆಚ್ಚಿಸುವ ಯತ್ನವನ್ನು ಮಾಡುತ್ತಿದ್ದಳು, ನಡೆಯು ತ್ತಿದ್ದಂತೆ ಗಳಿಗೆ ಗಳಿಗೆಗೂ ಅವಳ ಸೆರಗು ಜಾರಿ ತೋಳಿನ ಮೇಲೆ ಬೀಳು ತ್ತಿರಬೇಕು; ಅವಳು ಮತ್ತೆ ಮತ್ತೆ ಅದನ್ನು ಭುಜಕ್ಕೆ ಸೇರಿಸುತ್ತ ತೋಳನ್ನು ತೋರಿಸುತ್ತಿರಬೇಕು. ರಾಜ "ಇದೇನು ಕಷ್ಟ—ಈ ಅಭ್ಯಾಸ. ಸುಮ್ಮನಿದ್ದು ಬಿಡಬಾರದೆ?" ಎನ್ನುತ್ತಿದ್ದ. ಅವಳು ಜವಾಬನ್ನು ಕೊಡುತ್ತಿರಲಿಲ್ಲ. ತೋಳಿನ ಪರದೆ ಬಿದ್ದು ಏಳುತ್ತಿರುವುದು ತಪ್ಪುತ್ತಿರಲಿಲ್ಲ. ಇದೂ ಒಂದು ಆಕರ್ಷಣೆಯ ಅಂಶವೆಂದು ತಿಳಿದಿದ್ದಳು. ಇದಲ್ಲದೆ ಜನರು ಹತ್ತಿರದಲ್ಲಿದ್ದಾಗ ಬೇಕಾಗಿ ಏನಾದರೂ ಮಾತಾಡುತ್ತಿದ್ದಳು, ಆವೇಶದ ಮಾತಿನಂತೆ ಧ್ವನಿ ಯನ್ನು ಎತ್ತರಿಸುತ್ತಿದ್ದಳು, ಸ್ವಲ್ಪ ಕಾರಣವಾದರೂ ಸಿಗಲಿ, ಕಿಲಕಿಲನೆ ನಗುತ್ತಿದ್ದಳು. ಕೈ, ಕೊರಳು, ತುಟಿ, ಹುಬ್ಬುಗಳ ಚಲನೆಯೂ ಕೊಂಚ ಹೆಚ್ಚೆ. ರಾಜನಿಗೆ ಮುಜುಗರವಾಗುತ್ತಿತ್ತು. ಅವನು ಈ ಸಮಯಗಳಲ್ಲಿ ಹೆಚ್ಚು ಮಾತಿಗೇ ಅವಕಾಶ ಕೊಡುತ್ತಿರಲಿಲ್ಲ. ಆದರೆ ಕೆದಕಿದಾಗ ಒಂದೊಂ ದನ್ನಾಡದಿರಲೂ ಆಗುತ್ತಿರಲಿಲ್ಲ. ಮೇಲಾಗಿ ಅವಳು ತೀರ ನೊಂದು

ಕೊಂಡಾಳೆಂಬ ಭಯ. ಅವನು "ಸ್ವಲ್ಪ ಮೆತ್ತಗೆ ಮಾತಾಡು, ಅವರಿವರಿಗೆಲ್ಲ ಯಾಕೆ ಕೇಳಿಸಬೇಕು?" ಎಂದು ಬುದ್ಧಿವಾದ ಹೇಳಿ ವಿನೋದವಾಗಿದ್ದಂತೆ "ಇಷ್ಟೊಂದು ನಗು ಎಲ್ಲಿಂದ ಬರುತ್ತೆ ನಿಂಗೆ? ಇದೇನು ರಂಗಭೂಮಿ ಯಲ್ಲವೇ ಹುಡುಗಿ!" ಎಂದಾಗ ಅವಳಿಗೆ ಅವನ ಅರ್ಥ ನಾಟದೆ ಇರುತ್ತಿರ ಲಿಲ್ಲ. ಮನಸ್ಸಿಗೆ ಕಿರಿಕಿರಿಯೂ ಆಗುತ್ತಿತ್ತು. ಆದರೆ ತಪ್ಪಿತಸ್ಥಳಂತೆ ಇವನ್ನೂ, ಅವನ ಆಕ್ಷೇಪಣೆಯನ್ನೂ ನುಂಗಿಕೊಳ್ಳುತ್ತಿದ್ದಳು. ಹುಬ್ಬು ಗಂಟಿಕ್ಕಿ ಒಂದು ಗಳಿಗೆ ಮುನಿಸಿನ ಮೌನವುಂದಿರುತ್ತಿದ್ದಳು. ಮತ್ತೆ ಅದೇ ರೀತಿ. ಅವನು ಕೆಂಪೇಗೌಡನ ಗುಡ್ಡದ ಮೇಲೋ ಎಲ್ಲೋ ಏಕಾಂತವಾಗಿ ಕುಳಿತುಕೊಳ್ಳಬೇಕೆಂದು ಹೇಳಿದರೆ ಅವಳು ಹೆಚ್ಚು ಜನ ಸುಳಿದಾಡುವ ಗಾಜಿನ ಮನೆಯ ಮುಂದೇ ಕುಳಿತು "ಇಲ್ಲೇ ಚೆನ್ನಾಗಿದೆ, ಅಲ್ಲಿಯವರೆಗೆ ಯಾರು ನಡೀತಾರೆ" ಅನ್ನುತ್ತಿದ್ದಳು. ಅವನು "ಬಂದಿರೋದೇ ಸ್ವಲ್ಪ ನಡೆಯೋದಕ್ಕೆ. ಬರಬಾರದೆ?" ಎಂದರೆ ಅವಳು "ನನ್ನ ಕೈಯಲ್ಲಾಗೋ ದಿಲ್ಲ. ನೀವು ಬೇಕಾದರೆ ಹೋಗಿ ಬನ್ನಿ. ನಾನು ಇಲ್ಲೇ ಇರ್ತೀನಿ" ಎಂದು ಪೂರ್ತಿಮಾಡುತ್ತಿದ್ದಳು. ಅವನೂ ಅವಳ ಬಳಿಯಲ್ಲೇ ಕುಳಿತು ಕೊಳ್ಳುತ್ತ "ಯಾಕೆ ರಂಗು, ಈ ತರಹ ಹಟ ಮಾಡ್ತೀಯಲ್ಲ. ಬಹಳ ಬದಲಾಯಿಸ್ತಿದೀ ಅನ್ನು" ಎಂದರೆ ಅವಳು ಅಳುಧ್ವನಿಯಲ್ಲಿ "ನಾನೋ ನೀವೋ, ಬದಲಾಯಿಸ್ತಾ ಇರೋದು? ನಿಮ್ಮದು ನಿಮಗೆ ಕಾಣಿಸೋದೇ ಇಲ್ಲ. ನಾನೇನು ಮಾಡಿದರೂ ಸಂತೋಷವಿಲ್ಲ, ಸಮಾಧಾನವಿಲ್ಲ, ಎಲ್ಲದ ರಲ್ಲೂ ತಪ್ಪು ಕಂಡುಹಿಡಿಯೋದು–ಸಣ್ಣ ಪುಟ್ಟದರಲ್ಲೆಲ್ಲ. ಏನೋ ನಂಗೆ ಯಾತಕ್ಕೂ–ಬಟ್ಟೆಬರೆ, ಮಾತುಕತೆ, ಎಂಥಾದ್ದರಲ್ಲೂ ಸ್ವಲ್ಪವೂ ಸ್ವತಂ ತ್ರವೇ ಇಲ್ಲ ಅನ್ನೋ ಹಾಗೆ" ಎಂದು ಕಣ್ಣೀರನ್ನೇ ತಂದುಕೊಳ್ಳುತ್ತಿದ್ದಳು. ಸಣ್ಣ ಚೌಕವನ್ನು ಹೊರಗೆ ತಂದು ಸೀತು ಮೂಗುಜ್ಜುತ್ತಿದ್ದಳು. ಅವನು ಗಾಬರಿಯಾಗಿ "ನೋಡಿದೆಯಾ, ನೋಡಿದೆಯಾ. ತಪ್ಪು ತಿಳಿದುಕೊಂತೀ ಯಲ್ಲ. ಹಾಗಲ್ಲ. ಏನೋ ನಂಗೆ ತಿಳಿದ ಹಾಗೆ ಹೇಳಿದೆ, ಯಾವುದು ಹೆಚ್ಚು ಗಂಭೀರ...." ಎನ್ನುವಾಗಲೇ ಅವಳು "ನಂಗೆಲ್ಲ ಗೊತ್ತು. ನಾನು ಚೆನ್ನಾಗಿ ಕಂಡರೆ ನಿಮಗೆ ಯಾಕೋ ಸಮಾಧಾನವಿಲ್ಲ" ಎನ್ನುತ್ತಿದ್ದಳು. ಅವನು "ಅಯ್ಯೋ ಹುಚ್ಚಿ, ಹಾಗೆಂದರೇನು? ....ಹುಂ, ಹೋಗಲಿ ಬಿಡು.

ಆಮೇಲೆ ಮಾತಾಡೋಣ" ಎಂದು ಸುಮ್ಮನಾಗುತ್ತಿದ್ದ. ಇಬ್ಬರೂ ಸ್ವಲ್ಪ ಕಾಲ ಮೌನವಾಗಿ ಕುಳಿತಿದ್ದು ಮೌನವಾಗಿಯೇ ಮನೆಗೆ ಹೋಗುತ್ತಿದ್ದರು. ಅವಳು ಒಳಗೊಳಗೆ 'ನಾನು ಇವರ ಕೈಗೊಂಬೆ ಇದ್ದ ಹಾಗೆ–ಮಾಲು ಇದ್ದ ಹಾಗೆ ಆಡ್ತಾರೆ. ನನ್ನ ವಿಷಯದಲ್ಲೂ ಇವರು ಹೇಳಿದ ಹಾಗೇ ನಾನು ನಡೆದುಕೋಬೇಕು. ಇಷ್ಟೊಂದು ದಿಗ್ಬಂಧನಕ್ಕೆ ಏನು ಕಾರಣ ಕೊಟ್ಟಿದೀನೋ ಕಾಣೆ. ಮನೆಯ ಹೊರಗೆ ಯಾವುದೊಂದು ತರಹದ ಆಸಕ್ತಿಯೂ ಇರಲೇಬಾರದೆ–ಹೆಂಗಸಾದವಳಿಗೆ?' ಎಂದು ಮುಂತಾಗಿ ಯೋಚಿಸಿಕೊಂಡು ಕೊರಗಿದರೆ, ಸಿಟ್ಟಾದರೆ, ಅವನು 'ಇದೇನು, ಅವಳ ಸೌಂದರ್ಯದ ಬಗ್ಗೆ ಅವಳಿಗೆ ಅನುಮಾನ ಬಂದಿದೆಯೆ–ಹೀಗೆಲ್ಲ ಒದ್ದಾಡ್ತಾಳಲ್ಲ, ಪಾಪ. ನಾನೇನೂ ಕಾರಣ ಕೊಟ್ಟಿಲ್ಲವಲ್ಲ–ಈ ಶಂಕೆಗೆ. ನಾನು ಹೇಳೋದು ಸಾಲದೆ? ಹೊರಗೆ ಆಕರ್ಷಣೆ ಕಂಡು ಯಾಕೆ ನಂಬಿಕೋಬೇಕು? ಇದು ಯಾವ ಹುಚ್ಚು? ಏನಾದರೂ ಹೇಳಿದರೂ ಕಷ್ಟ, ಬೇಗ ಕೆರಳಿಬಿಡ್ತಾಳೆ. ಮುಂಗೋಪ ಇರಲೇ ಇಲ್ಲ. ಇದಕ್ಕೇನು ಕಾರಣ? ನಾಲ್ಕು ಅಕ್ಷರ ಕಲಿತು ಅದೂ ಇದೂ ಹಾಳೂ ಮೂಳು ಓದಿ ಏನೇನಾದರೂ ಹೊಸ ಹೊಸ ಹುಚ್ಚು ತಲೇಲಿ ಹುಟ್ಟಿ ಬೆಳೀತಾ ಇದೆಯೋ, ಕೆಲಸವೇ ಇಲ್ಲದೆ ಏನೇನಾದರೂ ತಾನೇ ಸುಮ್ಮನೆ ಯೋಚಿಸಿಕೋತಾಳೋ–ಕೆಲಸವಿಲ್ಲದ ಮನಸ್ಸು ಪಿಶಾಚಿಯ ಕಾರ್ಖಾನೆ ಅಂದ ಹಾಗೆ. ಆ ಹೆಂಗಸರು ಈ ಹೆಂಗಸರ ಸಂಗದಿಂದ ಬಂದಿದೆಯೋ, ಅಥವ ಮಗೂನಲ್ಲಿ ಪ್ರೇಮ ಬೆಳೆದ ಹಾಗೆಲ್ಲ ನನ್ನಲ್ಲಿ ಕಡಿಮೆಯಾಗಿ ನನ್ನಲ್ಲಿ ಬೇಸರ ಹುಟ್ಟಿ ಹೀಗೆ....ಉಹುಂ, ಉಹುಂ, ಅದೆಲ್ಲ ಅಲ್ಲ. ಏನೋ ಈ ಹಾಳು ಕಾಯಿಲೆ ಕಸಾಲೆಯ ಕಿರಿಕಿರಿ ಇರಬೇಕು. ಸರಿ ಹೋಗುತ್ತೆ' ಎಂದು ಏನೇನನ್ನೋ ಯೋಚಿಸಿಕೊಂಡು ಲೆಕ್ಕ ಹಾಕುತ್ತಿದ್ದ. ಈ ದಿನಗಳಲ್ಲಿ ವಿಹಾರವು ಸಂತೋಷವನ್ನು ತರುವ ಬದಲು ಮನೆಯಿಂದ ಹೊರಟಾಗ ಇದ್ದ ಸಮಾಧಾನವನ್ನು ಮನೆ ಮುಟ್ಟುವ ಹೊತ್ತಿಗೆ ಕಸಿದು ಕೊಂಡಿರುತ್ತಿತ್ತು.

ಇಂತಹದೇ ಒಂದಲ್ಲ ಒಂದು ಸಣ್ಣ ಪ್ರಸಂಗ ನಿತ್ಯಕಟ್ಟಳೆಯಲ್ಲಿದ್ದರೂ ಈ ಚೀಜಿಗೆ ಅಲ್ಲಲ್ಲಿ ತಲೆ ಹಾಕುತ್ತಿತ್ತು. ಒಂದು ಸೀರೆಯ ಮಾತೇ ಸಾಕು. ರಾಜನೇನು ಜಿಪುಣನಲ್ಲ. ಆದರೂ ಅವಳ ಬೀರುವಿನಲ್ಲಿ ತುರು

ಕಿಟ್ಟಿ ಸೀರೆಗಳೆಷ್ಟೋ ಮುಗ್ಗಾಗುತ್ತಿದ್ದಾಗ ಹೊಸ ಹೊಸ ಸೀರೆಗಳ ಹೊಳೆಯೇ ಮನೆಯೊಳಕ್ಕೆ ಬರುತ್ತಿದ್ದುದು ಅವನ ಕಣ್ಣನ್ನು ಉರಿಸುತ್ತಿತ್ತು. ಅವನು ಯಾವುದಾದರೂ ಒಂದು ಬಾರಿ ಹೊಸ ಸೀರೆ ಒಂದಾಗ "ಆ ಹಳೇ ವನ್ನೂ ಉಪಯೋಗಿಸುತ್ತಿರಬೇಕಲ್ಲವೆ?" ಎಂದು ಸೂಚಿಸಿದರೆ "ಅವನ್ನು ಪೋಲು ಮಾಡ್ತೀನಿ ಅಂತ ತಿಳಿದುಕೊಂಡಿರಾ? ಇದೇನೋ ಹೊಸ ನಮೂನೆ ಅಂತ ತಗೊಂಡೆ. ಇಷ್ಟಕ್ಕೇ ನಿಮ್ಮ ಹಣಾನ ಹಾಳು ಮಾಡ್ತಿದೀನಿ ಅಂದುಕೋತೀರಿ ನೀವು" ಎನ್ನುತ್ತಿದ್ದಳು. ಅವನು "ಹಾಗೇನಲ್ಲ...." ಎಂದು ವಿವರಿಸುವುದಕ್ಕೆ ಹೊರಟೊಡನೆ ಅವಳು "ಹೌದು, ಹೌದು, ಹಾಗೇ. ನಂಗೆಲ್ಲ ಗೊತ್ತು. ನಾನೇನು ಅಷ್ಟು ದಡ್ಡಿಯಲ್ಲ. ನಿಜ, ನಿಮ್ಮ ಹಣ; ನಂಗೆ ಅಧಿಕಾರವೆಲ್ಲಿ? ಈ ಹಾಳು ಸೀರೇನ ತರಬಾರದಾಗಿತ್ತು" ಎನ್ನುತ್ತಿದ್ದಳು. ಹೀಗೇ ಕತೆ ಬೆಳೆದು ಒಂದೇ ರೀತಿಯಲ್ಲಿ ಕೊನೆಗಾಣು ತ್ತಿತ್ತು. ಒಂದು ಸಿನಿಮಾ ವಿಚಾರ. ಹವ್ಯಾಸವಿಲ್ಲದ ಆಲಸ್ಯದಲ್ಲಿ ಅತ್ಯಾ ವಶ್ಯಕವಾಗಿ ಬೇಕಾಗಿದ್ದ ಭೋಗದ ತೂಬುಗಳಲ್ಲಿ ಸಿನಿಮಾ ಬಹಳ ಮುಖ್ಯ ವಾಗಿತ್ತು. ಅಲ್ಲದೆ ಅವಳಿಗೆ ಇದ್ದ ಒಂದು ಅಭಿರುಚಿಯೂ ಈ ಕಡೆಯೇ. ಹೋಗಿಬರುತ್ತಿದ್ದುದು ಹೆಚ್ಚು. ಆಗಾಗ ಅವನನ್ನೂ ಎಳೆದುಕೊಂಡು ಹೋಗು ತ್ತಿದ್ದಳು. ಎಲ್ಲ ಸಿನಿಮಾ ಫ್ಯಾನ್‌ಗಳ ಹಾಗೆ ನಟನಟಿಯರ ಮಾತು, ಚಿತ್ರದ ಸೂಕ್ಷ್ಮ ವಿಮರ್ಶೆ ಅವಳಿಂದ ಬೇಕಾದಷ್ಟು; ಅವನಿಗೆ ಇದರಲ್ಲಿ ಅಷ್ಟೊಂದು ಆಸಕ್ತಿಯಿಲ್ಲದಿದ್ದು ಅವನ ಗಮನ ಎತ್ತೆತ್ತಲೋ ಹೋಗು ತ್ತಿತ್ತು. ಅವಳ ಉತ್ಸಾಹದ ಪ್ರಶ್ನೆಗಳಿಗೆ 'ಹುಂ, ಹಾಂ' ಎಂದು ಅರ್ಥ ವಿಲ್ಲದ, ಸಂಬಂಧವಿಲ್ಲದ ಉತ್ತರಗಳನ್ನು ಕೊಟ್ಟಾಗ ಅವಳಿಗೆ ಉತ್ಸಾಹ ಭಂಗವಾಗುತ್ತಿತ್ತು. ಅವಳು ಅವನನ್ನು ಎಚ್ಚರಿಸಿ, ಒತ್ತಿ ಕೇಳಿದಾಗ "ನಂಗೆ ಅದೆಲ್ಲ ಚೆನ್ನಾಗಿ ಗೊತ್ತಾಗೋದಿಲ್ಲ" ಎನ್ನುತ್ತಿದ್ದ. ಅವಳು "ಅದಲ್ಲ. ನನ್ನ ಮಾತು ಅಂದರೆ ನಿಮಗೆ ಬೇಸರ, ಅಲಕ್ಷ್ಯ. ನನ್ನಷ್ಟಕ್ಕೆ ನಾನೇ ಆಡಿಕೋಬೇಕು–ಹುಚ್ಚಿಯ ಹಾಗೆ. ಆಡಬಾರದು ಅಂತ ಇರ್ತೀನಿ, ಆದರೂ ಹಾಳಾದ್ದು ಬಂದುಬಿಡುತ್ತೆ" ಎಂದರೆ ಅವನು "ಛೀ, ಛೀ ಹಾಗುಂಟೆ? ಏನೋ ಯೋಚಿಸ್ತಾ ಇದ್ದೆ, ಅಷ್ಟೆ" ಎಂದು ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದ. ಅವಳು "ಅದನ್ನೇ ನಾನೂ ಹೇಳಿದ್ದು. ಇಷ್ಟಕ್ಕೂ

ನಂಗೇನು ಗೊತ್ತು, ಮಾತಾಡೋದಕ್ಕೆ? ನಂಗೇನು ವ್ಯಕ್ತಿತ್ವ ಇದೆ, ಲಕ್ಷ್ಮಿಸ್ಗೋ ಅಂಥಾದ್ದು" ಎಂದಾಗ ಅದೇ ಪ್ರಸಂಗ ನಡೆಯುತ್ತಿತ್ತು. ಹೀಗೆ ಎಷ್ಟೋ ವ್ಯಕ್ತಿತ್ವ, ಸ್ವಾತಂತ್ರ್ಯ, ಅಧಿಕಾರ ಮೊದಲಾದ ಪದಗಳನ್ನು ಆವಳ ಬಾಯಿ ಯಿಂದ ಕೇಳಿದಾಗ ರಾಜ ಅವಳನ್ನೇ ದಿಟ್ಟಿಸುತ್ತಿದ್ದ—ಈ ಮಗುವಿಗೆ ಈ ಪದ ಗಳು ಹೇಗೆ ಗೊತ್ತಾದುವೆಂದು ಆಶ್ಚರ್ಯಪಡುತ್ತಿದ್ದಂತೆ. ಅವಳ ಅಲ್ಪ ಸ್ವಲ್ಪ ಓದು ತೋರಿಸಿದ್ದ ವಿಶಾಲ ಜಗತ್ತು, ಮೇಲು ಸಮಾಜದ ಬಳಕೆ, ಇವು ತಿಳಿಯದಂತೆಯೇ ಮಾಡುತ್ತಿದ್ದ ಮಾಯೆ, ಉದ್ದಿಶ್ಯವಿದ್ದ—ಇಲ್ಲದ ಅವನ 'ಕುಕ್ಕು' ಅವಳ ಮೇಲೆ ಉಂಟುಮಾಡುತ್ತಿದ್ದ ಪರಿಣಾಮ, ಇವೆಲ್ಲ ಅದ್ಭುತಾ ಕಾರಕ್ಕೆ ಬೆಳೆಯಲು ಇದ್ದ ಆಲಸ್ಯದ ಅವಕಾಶ—ಇವು ಅವನಿಗೆ ಹೊಳೆದೂ ಹೊಳೆಯದಂತಿದ್ದುವು.

ಆದರೆ ಈ ಮುಳ್ಳುಗಳು ದಿನಕ್ಕಿಂತ ಆಳವಾಗಿ ಚುಚ್ಚಿಕೊಳ್ಳದಂತೆ ಅವರ ಪ್ರಣಯ ಜೀವನ ನೋಡಿಕೊಳ್ಳುತ್ತಿತ್ತು. ಅವನ ಆಕ್ಷೇಪಣೆಗಳಿಗೆ, ವ್ಯಂಗ್ಯಕ್ಕೆ, ಒಂದೊಂದು ವೇಳೆ ತೀರ ಸಾಮಾನ್ಯವಾದ ಸಲಹೆ ಸೂಚನೆ ಗಳಿಂದ ಅವಳ ಕಿರಿಕಿರಿ ಎಷ್ಟು ಬೇಗ ಏರುತ್ತಿತ್ತೋ ಅಷ್ಟೇ ಬೇಗ ಅವನ ಕ್ಷಮಾಯಾಚನೆ, ಮುದ್ದಿನ ಮಾತು, ಪ್ರಣಯ ಚಾತುರ್ಯದಿಂದ ಇಳಿಯು ತ್ತಲೂ ಇತ್ತು. ಮುನಿಸಿನ ಮೋಡದಲ್ಲಿ, ಕಣ್ಣೀರಿನ ಮಳೆಯಲ್ಲಿ, ನಸು ನಗೆಯ ಬಿಸಿಲೂ ಹಾಯುತ್ತ ಅವರ ಬಾಳು ಬಿಸಿಲು ಮಳೆಯಾಗಿತ್ತು. ಮೇಲು ಸೂಚನೆಗಳೇನೋ ಹೀಗೇ ಇದ್ದರೂ ಈ ನೀರು ಮಾತ್ರ ಎದೆ ಯಾಳದ ಭೂಮಿಯೊಳಗಿಳಿದು, ಒಳ ವಿರೋಧದ ಅಂತರ್ವಾಹಿನಿಯಾಗು ತ್ತಿದ್ದುದು ಅವಳಿಗೂ ಅವನಿಗೂ ಅರಿವಾಗಿರಲಿಲ್ಲ.

—೮—

ಶಾಮಣ್ಣನ ಕಂಪನಿ ಮತ್ತೆ ಬಂದಿತು. ಈ ಬಾರಿಯೂ ಅವನೇ ಹುಡುಕಿಕೊಂಡು ಬಂದ. ಮಾವಳ್ಳಿಯವರು ಪತ್ತೆಯನ್ನು ಕೊಟ್ಟಿದ್ದರು. ಅವನು ಮನೆಯನ್ನು ನೋಡಿದಾಗಲೇ ದಂಗು ಬಡಿದುಹೋದ. ಆಳಿಗೆ ತನ್ನ ಹೆಸರನ್ನು ತಿಳಿಸಿ ಒಳಗೆ ಕಾಲಿಟ್ಟಾಗ ಆಶ್ಚರ್ಯ ಇನ್ನೂ ಹೆಚ್ಚಿತು. ಹಿಂದಿನಂತೆಯೇ ತಂದಿದ್ದ ಹೂ ವಿಳ್ಳೇದೆಲೆಗಳ ಚೀಲವನ್ನು ಬಚ್ಚಿಡಬೇಕು,

ಎಲ್ಲಾದರೂ ಕಾಣದಂತೆ ಬಿಸಾಟುಬಿಡಬೇಕೆನ್ನಿಸುವಷ್ಟು ನಾಚಿಕೆ ಯಾಯಿತು. ಅವನು ಆಶ್ಚರ್ಯದಿಂದ ಇನ್ನೂ ಎಚ್ಚೆತ್ತಿರದಿದ್ದಾಗಲೇ ನಾಯಕಿ ಮಹಡಿಯ ಮೆಟ್ಟಿಲನ್ನಿಳಿದು ಬಂದು ಅತ್ಯುತ್ಸಾಹ ವಿಶ್ವಾಸಗಳಿಂದ ಇದಿರು ಗೊಂಡು "ಅಪ್ಪ, ಇನ್ನೊಂದು ಭೇಟಿ! ಈ ದಿನಕ್ಕಾಗಿ ಕಾದಿದ್ದೆ. ಯಾವಾಗ ಬಂದೆ? ಚೆನ್ನಾಗಿದೀಯ? ಕಂಪನಿ ಹೇಗಿದೆ, ಈಗ?" ಎನ್ನುತ್ತ ಪ್ರಶ್ನೆಗಳ ಮಳೆಯನ್ನೇ ಸುರಿದಳು. ಅವಳನ್ನೂ ಸುತ್ತುಮುತ್ತನ್ನೂ ನೋಡಿ ಅವನಿಗೆ ಕ್ಷಣಕಾಲ ಏನೂ ತೋಚಲಿಲ್ಲ. ಕಡೆಗೆ "ಮಗು.... ರಂಗಮ್ಮ...." ಎಂದು ತೊದಲಿದ.

"ಇದೇನು ಹೊಸ ರೀತಿ? ಬಾ, ಕೋಟು ಬಿಚ್ಚು, ಹೊತ್ತಾಗಿದೆ ಊಟಕ್ಕೆ. ಹಾಗೇ ಮಾತಾಡೋಣ," ಅವಳೇ ಕೋಟನ್ನು ಬಿಚ್ಚುತ್ತ ಗಂಟನ್ನೂ ತೆಗೆದುಕೊಂಡು,

"ಓಹೋ ಹೂವೋ? ನೀನು ತರೋ ಅಂಥ ಹೂವನ್ನು ಇನ್ನು ಯಾರೂ ತರೋದಿಲ್ಲ" ಎಂದು ಮುಂದೆ ನಡೆದಳು.

"ಮಗು, ನಿನ್ನ ಹೀಗೆ ನೋಡಿ ನಂಗೆ ಎಷ್ಟು ಸಂತೋಷ ಅಂತ...."

"ಏನೋ ದೇವರು ಕಣ್ಣು ಬಿಟ್ಟಿದಾನೆ. ಬಿಡೋದು ಮುಚ್ಚೋದು ಎಷ್ಟರಲ್ಲಿರುತ್ತೆ ಹೇಳು."

ಕಾಲಿಗೆ ಬಿಸಿ ನೀರು ಬಂತು. ವಿಶಾಲವಾದ ಊಟದ ಮನೆಯಲ್ಲಿ ಅಗ್ರದ ಬಾಳೆಯ ಎಲೆ, ಕೇಸರಿಯ ನೀರು ತುಂಬಿದ ಬೆಳ್ಳಿಯ ಬಟ್ಟಲು, ಅಗಲವಾದ ಮಣೆ–ಇವು ಕಾದಿದ್ದುವು. ಎಲೆಯ ಮೇಲಿನ ಹಬ್ಬದ ಊಟ ಅವನ ಮನಸ್ಸನ್ನು ಸೆಳೆಯಿತು. ಬಾಯಲ್ಲಿ ನೀರೂರಿತು.

"ಓಹೋ, ಒಳ್ಳೆಯ ದಿನವೇ ಬಂದ ಹಾಗಿದೆ! ಏನು ವಿಶೇಷ?" ಎಂದ ಶಾಮಣ್ಣ ಕುಳಿತುಕೊಳ್ಳುತ್ತ, ಅತಿ ಸಂತೋಷ ತೃಪ್ತಿಗಳಿಂದ.

"ಚಂದು ಹುಟ್ಟಿದ ಹಬ್ಬ." ಮುಗುಳ್ನಗೆಯಿಂದ ಹತ್ತಿರದ ಮಣೆಯ ಮೇಲೆ ಕುಳಿತುಕೊಂಡಳು ನಾಯಕಿ.

"ಮಗುವೇ? ಸಂತೋಷ ಕಣಮ್ಮ. ದೇವರು ನಿಜವಾಗಿಯೂ ಕಣ್ಣು ಬಿಟ್ಟಿದಾನೆ. ಹಾಗೇ ಬಿಟ್ಟಿರಲಿ! ಹ್ಹ ಹಾ! ಮಗುವೆಲ್ಲಿ? ಎಷ್ಟು ವರ್ಷ?"

" ಎರಡಾಯ್ತು. ಬರ್ತ್ತಾನೆ....ಚಂದೂ ! "

ಮಗು " ಅಮ್ಮಾ, ಯಾಕೆ ಕೂಗಿದೆ ? " ಎಂದು ಪುಟಪುಟಿದು ಓಡುತ್ತ ಬಂದ. ನೀಲಿ ಮಖಮಲ್ಲಿನಂಚಿನ ರೇಷ್ಮೆ ' ಸೇಲರ್ ಸೂಟ್ ' ಉಲ್ಲನ್ ಕಾಲುಚೀಲ, ರಬ್ಬರ್ ಷೂ, ಬಾಚಿದ ಕ್ರಾಪು. ತುಂಬಿದ ಮೈಯಿನ ಕೂಸು ರಸಬುರುಡೆಯಂತಿದ್ದ. ಬಂದವನೆ ತಟ್ಟನೆ ಅಮ್ಮನ ಬಳಿ ನಿಂತು, ಅಪರಿಚಿತನನ್ನು ನೋಡಿ ಒಂದು ಹೆಜ್ಜೆ ಹಿಂದಕ್ಕಿಟ್ಟು, ಅಮ್ಮನ ಕತ್ತಿಗೆ ತನ್ನ ಕೈ ಬಳಸಿ ಬೆನ್ನಿನ ಮೇಲೆ ಕೂಸುಮರಿಯಾದ.

" ಲೋ ಪುಟ್ಟ, ನಾನು ನಿಮ್ಮ ಅಜ್ಜ ಕಣೋ " ಶಾಮಣ್ಣ ನಗುತ್ತ ಎಡಗೈಯಿಂದ ಮಗುವನ್ನು ಎಳೆದುಕೊಂಡ.

" ಹೂಂ, ಮರಿ " ಅವಳು ಅವನೆಡೆಗೆ ಹೋಗಲು ಮಗುವನ್ನು ಪ್ರೋತ್ಸಾಹಿಸಿದಳು.

ಶಾಮಣ್ಣ ಮಗುವನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಊರಿನ ಮಾತನ್ನೆಲ್ಲ ಆಡಿಸುತ್ತ, ಪೀಡಿಸುತ್ತ, ಅಪ್ಪ ಅಮ್ಮನ ವಿಷಯ ಗಳನ್ನು ಅವನೊಡನೆ, ಅವಳೊಡನೆ ಚರ್ಚಿಸುತ್ತ, ಊಟಕ್ಕೂ ಅನ್ಯಾಯ ಮಾಡದಂತೆ ವಾಂಗಿಭಾತು, ಜಹಂಗೀರು, ಖೀರು, ಬೋಂಡ ಎಲ್ಲವನ್ನೂ ಅವಳು ಹಾಕಿಸಿದಷ್ಟು ಸಾರಿಯೂ ' ಬೇಡ ಬೇಡ ' ಎನ್ನುತ್ತಲೇ ಭದ್ರವಾಗಿ ಬಿಗಿದ, ಮಗು ನಗುವಂತೆ ಚಪ್ಪರಿಸಿದ, ಬೆಚ್ಚುವಂತೆ ತೇಗಿದ; ತಾಂಬೂಲ ವನ್ನೂ ಜಗಿದ–ಕಂಪನಿಯ ಕತೆಯನ್ನು ಹೇಳುತ್ತ. ಅದೇ ಹಳೆಯ ಕತೆ, ಅದೇ ನಟಿ ನಟರ ತೊಂದರೆ, ಕಷ್ಟ ನಷ್ಟ.

" ಸುಮ್ಮನಿರಪ್ಪ, ಮತ್ತೆ ನಾನೇ ಬಂದು ಸಹಾಯ ಮಾಡ್ತೀನಿ " ಅವಳು ನಕ್ಕಳು.

" ಅ ! ಏನು. ನೀನೇ ? ನಿಮ್ಮಪ್ಪ ದಡ್ಡನೇನೋ ನಿಜ. ಆದರೆ ಇದನ್ನು ನಂಬುವಷ್ಟಲ್ಲ. ಇಂಥ ಮನೆಯ ರಾಣಿ, ನಮ್ಮ ನಾಟಕದಲ್ಲಿ ಬಂದು ಕುಣಿ ! ಚೆನ್ನಾಯ್ತು, ನಾಚಿಕೆಗೇಡು. ....ಹುಂ, ನೀನು ಇದ್ದಿದ್ದರೆ ಈ ತೊಂದರೆಯಲ್ಲಿ ಕಾಲು ಭಾಗ ಇರ್ತಾ ಇರಲಿಲ್ಲ. ಎಷ್ಟಿದ್ದರೂ ನುಂಗಿ ಕೊಳ್ಳುತ್ತಿದ್ದೆ. ಆಗಲಿ. ರಂಗಕ್ಕಾದ ನಷ್ಟ ರಂಗೂಗಾಯ್ತು ಲಾಭ. ನಂಗೆ ಇನ್ನೇನು ಬೇಕು ? ಎಲ್ಲಾದರೂ ಚೆನ್ನಾಗಿರು ಮಗು " ಶಾಮಣ್ಣ ನಿಧಾನವಾಗಿ ಯೋಚಿಸಿ ಯೋಚಿಸುತ್ತ ಹೇಳಿದ.

ಅವಳಿಗೆ ತನ್ನ ಮಾತು ಯಾತಕ್ಕೆ ಹೀಗೆ ಹೊರಬಿದ್ದಿತೆಂದೇ ತಿಳಿಯದು. ವಿನೋದವಾಗಿಯೇ ಹೇಳಿದೆನೆಂದುಕೊಂಡು ಸುಮ್ಮನಿದ್ದುಬಿಟ್ಟಳು. ಮಾತು ಬೆಳೆಯಲಿಲ್ಲ. ಹಜಾರದಲ್ಲಿ ರಾಜ ಭೇಟಿಯಾಗಿ ಶಾಮಣ್ಣನ ಕುಶಲಪ್ರಶ್ನೆ ಕೇಳಿ ಹೊರಟುಹೋದ.

"ಈಗಲೂ ಸೆಟ್ಟರಿಗೆ ನಾಟಕದೋರು ಅಂದರೆ ಅಷ್ಟಕ್ಕಷ್ಟೇ ಅಂತ ಕಾಣುತ್ತೆ."

"ಛೆ, ಛೆ. ಹಾಗೇನಿಲ್ಲ. ಏನೋ ತುರ್ತು ಕೆಲಸವಿರಬೇಕು, ಹೆಚ್ಚು ನಿಲ್ಲಲಿಲ್ಲ."

"ಹುಂ. ಸಾಹುಕಾರ್ರು, ಕಾಲ ಅಂದರೆ ಹಣ. ಹಣ ಅಂದರೆ ಎಲ್ಲ. ಹ್ಹ! ಃ ಹಾ!"

ರಾಜನಿಗೆ ಈ ಭೇಟಿ ಸಂತೋಷವನ್ನು ತಂದಿರಲಿಲ್ಲ. ಮಾವಳ್ಳಿಯಲ್ಲಿ ಇವರೆಲ್ಲ ಬಂದು ಹೋಗುತ್ತಿದ್ದುದು, ಆ ನಾಟಕಗಳು, ಕಂಪನಿ ಹೋಗುವ ಮುನ್ನ ನಾಯಕಿಯ ಮೇಲೆ ಆಗಿದ್ದ ಪರಿಣಾಮ, ಅವಳು ಮಾಡಿದ್ದ ಚರ್ಚೆ–ಇವೆಲ್ಲವೂ ಅವನ ನೆನಪಿನಲ್ಲಿ ಹಸುರಾಗಿದ್ದುವು; ಅಷ್ಟಿಷ್ಟು ಕಹಿಯೂ ಉಳಿದಿತ್ತು.

ಶಾಮಣ್ಣ ಅತಿಥಿಗಳ ಕೋಣೆಯಲ್ಲಿ ಸುಪ್ಪತ್ತಿಗೆಯ ಮೇಲೆ ಘಟವನ್ನು ಕೆಡಹಿ ಘಟಸರ್ಪದಂತೆಯೇ ಮೂರು ಗಂಟೆಯ ಕಾಲ ಬುಸುಗುಟ್ಟುತ್ತಿದ್ದ; ಚಂದುವಿಗೆ ಆಶ್ಚರ್ಯವಾಗುವಂತೆ ತುತ್ತೂರಿ ಊದುತ್ತಿದ್ದ; ಸಿಂಹಗರ್ಜನೆ ಮಾಡುತ್ತಿದ್ದ; ತಿದಿಯೊತ್ತುತ್ತಿದ್ದ–ಒಂದೊಂದು ರೀತಿಯೇ ಈ ನಟವರ್ಯನ ನಿದ್ರಾವಿನೋದ.

ಮಧ್ಯಾಹ್ನ ಕಾಫಿಯಾಗಿ ಹೊರಡುವ ಹೊತ್ತು ಬಂದಾಗ ನಾಯಕಿ "ಇಲ್ಲೇ ಇದ್ದುಕೊಂಡಿರಪ್ಪ" ಎಂದು ಬೇಡಿಕೊಂಡಳು.

"ಇಲ್ಲ ರಂಗು; ಮಗು ಹತ್ತಿರ ತಾಯಿ. ನಾನು ಅಲ್ಲೇ ಇರಬೇಕು ಹತ್ತಿರವಾಗಿ. ಅದೂ ಅಲ್ಲದೆ ಇಲ್ಲೇ ಖಾಯಂ ಆಗೇ ಇರೋ ಯೋಚನೇನೂ ಮಾಡ್ತಾ ಇದೀನಿ–ವಾರಕ್ಕೋ ಪಕ್ಷಕ್ಕೋ ಒಂದು ನಾಟಕ ಆಡಿಕೊಂಡು. ನಾನೂ ಮನೇನೇ ಮಾಡಬೇಕು. ಊರೂರಲೆದು, ಹುಚ್ಚು ನಾಯಿಯ ಹಾಗೆ, ತಲೆ ಬೇಜಾರಾಗಿದೆ. ನನ್ನ ಶಕ್ತಿಯೂ ಉಡುಗುತ್ತಾ ಬಂತು. ಸಾಕು ಈ ಅಲೆದಾಟ."

" ಓ, ಹಾಗೇನು ? ....ಹಾಗಾದರೂ ಇಲ್ಲೇ...."

" ಅವಿವೇಕದ ಹುಡುಗಿ ! ಅದೂ ಅಲ್ಲದೆ ನಾಟಕದೋರು ನಿಮ್ಮ ಬಳಿ ಯಾವಾಗಲೂ ಇರೋದುಂಟೆ, ಹುಂ ! "

" ಅದೇನಿಲ್ಲ....ಹಾಗೇ ಆಗಲಿ. ಬರ್ತಾ ಇರ್ತೀಯಲ್ಲ."

" ಕೇಳೋದೇ ಬೇಕಿಲ್ಲ. ಸದ್ಯ, ನಮ್ಮ ಕಾಟ ತಪ್ಪಿಸಿಕೊಂಡರೇ ಸಾಕಾಗುತ್ತೆ. ಆಗಲೇ ನಿನ್ನ ಹಳೇ ಸ್ನೇಹಿತರು ನಿನ್ನಲ್ಲಿಗೆ...."

" ಹುಂ, ಹುಂ, ಎಲ್ಲರೂ ಬರಲಿ. ನೋಡಬೇಕು ಅನ್ನಿಸಿದೆ....ಹುಂ, ತಾಳು........ಚಂದು ಹುಟ್ಟಿದ ಮೇಲೆ ಯಾರನ್ನೂ ಕಂಡೇ ಇಲ್ಲ. ನಾಳೆ ಔತಣಕ್ಕೇ ಬನ್ನಿ ಅಂದರೋ ? ಆಗಬಹುದಲ್ಲವೆ ? "

" ಓಹೋ, ಅದಕ್ಕೇನು. ಇನ್ನೂ ನಾಡಿದ್ದರಿಂದ ಕುಣಿತ. ಅವರನ್ನೂ ಕರೆ, ನನ್ನೂ ಕರೆ. ಇಂಥ ಊಟ ಎಲ್ಲಿ ಸಿಗಬೇಕು ನಮುಗೆ ಹ್ಹ, ಹಾ ! "

" ಹಾಗೇ ಸರಿ. ನಾಳೆ ಮಧ್ಯಾಹ್ನ ಎಲ್ಲರೂ ಬನ್ನಿ–ಖಂಡಿತವಾಗಿ."

" ಅದು ಸರಿ, ಆದರೆ ಇದೆಲ್ಲ ಧಾಂ‌ದಲೆ ನಿಮ್ಮ ಯಜಮಾನರಿಗೆ...."

" ಹಾಗೆಂದರೇನಪ್ಪ. ಅವರಿಗೂ ಒಪ್ಪುತ್ತೆ. ನನ್ನ ಮನೆ ಅಲ್ಲವೆ, ಏನು ಸಂಕೋಚ. ಚೆನ್ನಾಯ್ತು."

" ಆಗಲಿ " ಜೇಬಿನಿಂದ ಪಾಸುಗಳನ್ನು ತೆಗೆಯುತ್ತ " ಇಂಥ ಊಟ ತಿಂಡಿ ಹೊಡೀತ ಇವೇನು ಕಾಂಪ್ಲಿಮೆಂಟರಿ ಆಗೋದಿಲ್ಲ " ಎನ್ನುತ್ತ ಪಾಸುಗಳನ್ನು ಕೊಡಬಂದ.

" ಉಹುಂ. ಬೇಡ ಅಪ್ಪ. ಈಗ ದುಡ್ಡು ಕೊಟ್ಟೇ ಬರ್ತೀವಿ. ಇನ್ನೂ ಹೆಚ್ಚೇ ಏನಾದರೂ ಕೊಡಬೇಕು, ನ್ಯಾಯವಾಗಿ."

" ಇನ್ನೇನು ? ಬಹುಮಾನವೆ ? ಅದಕ್ಕೆ ಯೋಗ್ಯರಾದೋರು ಯಾರೂ ಇಲ್ಲ. ನೀನೇ ಪಾತ್ರವಹಿಸಿ ನೀನೇ ತಗೋಬೇಕು ಬಹುಮಾನ, ಅಷ್ಟೆ. ಹ್ಹ! ಹ್ಹ! "

ಮೂರನೆಯ ದಿನ ಸೊಗಸಾದ ಔತಣ. ಹಳದು ಹೊಸದು ನಟವರ್ಗ ವೆಲ್ಲ ಬಂದಿತ್ತು. ತನ್ನ ವಿಶ್ವಾಸವನ್ನು ತೋರಿಸಲು ಇಂತಹ ಒಂದು ಅವಕಾಶ ಸಿಕ್ಕಿತೆಂದು ನಾಯಕಿಗೆ ಬಹಳ ಸಂತೋಷ, ಸಂಭ್ರಮ. ನಟ

ವರ್ಗದವರು ಸಂಕೋಚಪಡುತ್ತಲೇ ಒಬ್ಬೊಬ್ಬರಾಗಿ ಚಂದುವಿಗೆ ತಮ್ಮ ಆಟದ ಸಾಮಾನಿನ ಸಣ್ಣ ಸಣ್ಣ ಉಡುಗೊರೆಗಳನ್ನು ಕೊಟ್ಟರು. ಅವನನ್ನು ನೆಲಕ್ಕಿಳಿಸದೆಯೇ ಚೆಂಡಾಡಿದಂತೆ ಎತ್ತಿ ಆಡಿಸಿದರು. ಬಂಗಲೆಗೆ ಎಷ್ಟೋ ಅತಿಥಿಗಳು ಬಂದಿದ್ದರೂ ಇಷ್ಟೊಂದು ಜನ ಹೀಗೆ ಅವನನ್ನು ಯಾರೂ ಆಡಿಸಿರಲಿಲ್ಲ. ಈ ಕಕ್ಕ ತಾತಂದಿರ ಮಧ್ಯೆ ಸ್ವಲ್ಪ ಹೊತ್ತು ಕಕ್ಕಾಬಿಕ್ಕಿಯಾಗಿದ್ದು ಅಮ್ಮ ಒಬ್ಬಿಬ್ಬರ ಬಳಕೆಮಾಡಿಕೊಟ್ಟಮೇಲೆ ಚಂದು ಕಡೆಗೆ ಎಲ್ಲರನ್ನೂ ಹೊಂದಿಕೊಂಡು ಹಿಗ್ಗುತ್ತಿದ್ದ. ಹತ್ತು ನಿಮಿಷದಲ್ಲಿ ಅವರ ನಾಟಕದ ಮಾತನ್ನು ಕೇಳಿ, ಅವರ ಪ್ರೋತ್ಸಾಹಕ್ಕೆ ಒಪ್ಪಿ, ತಾನೂ ಪಾರ್ಟು ಮಾಡುವುದಾಗಿ ಎಲ್ಲರಿಗೂ ಹೇಳಿ, ಅವನ ಅಮ್ಮನ ಗಲ್ಲವನ್ನು ಹಿಡಿದು ತನ್ನ ಕಡೆಗೆ ತಿರುಗಿಸಿಕೊಂಡು ಅವಳ ಒಪ್ಪಿಗೆಯನ್ನೂ ಪಡೆಯುತ್ತಿದ್ದ. ಬಂಗಲೆಯಲ್ಲೆಲ್ಲ ಇವರ ಗದ್ದಲವೋ ಗದ್ದಲ. ರಾಜನಿಗೆ ಇದು ಬೇಕಿಲ್ಲದಿದ್ದರೂ ನಾಯಕಿಗಾಗಿ ಅವರನ್ನು ವಿಚಾರಿಸಿಕೊಂಡ–ಸೌಜನ್ಯಕ್ಕೆ ಬೇಕಾದಷ್ಟು. ಅವರೆಲ್ಲರೂ ನಾಯಕಿಯೊಡನೆ ಮಾತಾಡಲು ಪೈಪೋಟಿ ನಡೆಸಿದರು. ಹಿಂದಿನದನ್ನೆಲ್ಲ ಅಳೆದು ಸುರಿದರು–ಮತ್ತೆ. ನಾಯಕಿಯ ಅಭಿನಯ ಕೌಶಲ್ಯದ ಮಾತು ಎಲ್ಲರ ಬಾಯಿಂದಲೂ ಕೇಳಿಸಿತು. ರಾಮಯ್ಯನೂ ಕೂಡ "ರಂಗನಾಯಕಮ್ಮನೋರು ಬಿಟ್ಟಮೇಲೆ ನಾಟಕ ಕಳೆಯೇ ಕಟ್ಟಲಿಲ್ಲ" ಎಂದು ಗೌರವವಾಗಿ ಸರ್ಟಿಫಿಕೇಟ್ ಕೊಟ್ಟ. ನಾಯಕಿ ಇದನ್ನೆಲ್ಲ ಕೇಳಿ ಉಬ್ಬಿಹೋದಳು. 'ಆಹಾ, ತಾನು ಇನ್ನೂ ಪಾತ್ರವಹಿಸುತ್ತಿದ್ದರೆ! ....ಈಗಲೂ ಸಾಧ್ಯವಾದರೆ! ....ಯಾಕಿಲ್ಲ!' ಎಂಬ ಯೋಚನೆಗಳು ಅವಳಲ್ಲಿ ಹರಿದಾಡಿದುವು. ಆತಿಥ್ಯಕ್ಕಾಗಿ ಅವಳಿಗೂ ರಾಜನಿಗೂ ವಂದನೆಗಳನ್ನು ಸಮರ್ಪಿಸಿ, ಚಂದುವಿನ ಗಲ್ಲ ಹಿಡಿದು, ಕೆನ್ನೆ ಬಡಿದು, ತಲೆ ಸವರಿ, ಬೆನ್ನು ಚಪ್ಪರಿಸಿ, ಅವನು ಪಾತ್ರವಹಿಸುವ ವಾಗ್ದಾನವನ್ನು ಪಡೆದು ಗುಂಪು ಬೀಳ್ಕೊಂಡಿತು.

ಇವರು ಅನೇಕ ನಾಟಕಗಳಿಗೆ ಹೋಗಿ ಬಂದರು. ಕೆಲವು ಬಹುಮಾನಗಳನ್ನೂ ಕೊಟ್ಟರು. ನಾಯಕಿ ರಂಗದೊಳಗೆ ಎಲ್ಲರನ್ನೂ ವಿಚಾರಿಸಿಕೊಂಡು ಬಂದರೆ ಚಂದು ಮ್ಯಾಟನಿಗೆ ಹೋದಾಗಲೆಲ್ಲ ಬಣ್ಣದ ಕೋಣೆಯಲ್ಲಿ, ಬಟ್ಟೆ ರಟ್ಟುಗಳ ರಾಶಿಯಲ್ಲಿ, ಪರದೆಯ ಹಿಂದೆ, ದೀಪದ ಮುಂದೆ,

ಎಲ್ಲೆಲ್ಲೂ ಗುಡುಗಾಡುತ್ತ ಎಲ್ಲರ ಕಾಲಿಗೂ ತೊಡರಿಕೊಂಡು, ಎಲ್ಲರ ಕೈಮೇಲೂ ಹೇರಿಕೊಂಡು, ಅಲ್ಲೇ ಕಡೆಯುವರೆಗೂ ಇರುತ್ತಿದ್ದ. ಒಂದೊಂದು ದಿನ ಏನೇನೋ 'ಪೂಸಿ' ಮಾಡಿ ಸೆಳೆದೇ ತರಬೇಕಾಗಿತ್ತು-ಮನೆಗೆ.

ನಾಯಕಿಯ ಮೇಲೆ ನಾಟಕಗಳ ಸೆಳೆತ, ಪರಿಣಾಮಗಳು ವಿಚಿತ್ರವಾಗಿದ್ದುವು. ಹೆಣ್ಣಿಗೆ ತೌರೂರಿನ ಸೆಳೆತವಿದ್ದಂತೆ-ಅವಳಿಗೆ ಈ ನಾಟಕಗಳದ್ದು. ಆದರೆ ಪರಿಣಾಮ ಹಿತವಲ್ಲ, ಸಂತೋಷವೂ ಅಲ್ಲ; ಬಿಡಲಾಗದ, ಸ್ಪಷ್ಟವಾಗದ ನೋವು; 'ಆಹಾ! ನಾಯಕಿಯ ಪಾತ್ರವನ್ನು ನಾನು ಮಾಡಿದ್ದರೆ!' ಎನ್ನುವ ಹಂಬಲು; ಮಾಡಬೇಕೆಂದು ಒಳಗಿನಿಂದ ನೂಕಿಬಂದ ಎದೆಯ ಆತುರ; 'ಎಲ್ಲಾದರೂ ಉಂಟೆ?' ಎಂದು ಬುದ್ಧಿಯ ತಡೆ. ಅವಳೊಳಗೆ ಭಾವನೆಗಳ ಗೊಂದಲವೇ ನಡೆಯುತ್ತ ಮಳೆ ಬಿದ್ದ ಕಟ್ಟೆಯಂತೆ ಅವಳ ತಿಳಿವಳಿಕೆ ಕದಡಿಹೋಗಿತ್ತು. ಆದರೆ ಇದು ತಿಳಿಯಾಗಲು ಬಹಳ ಕಾಲ ಬೇಕಾಗಲಿಲ್ಲ. ಆಗಿನ ತಿಳಿ ನೀರಿನಲ್ಲಿ ತನ್ನನ್ನು ಕಂಡಾಗ ಅವಳಿಗೆ ಆದ ಆಶ್ಚರ್ಯ, ಸಂತೋಷ, ಭಯಗಳು ಅಷ್ಟಿಷ್ಟಲ್ಲ. ಆ ಪ್ರತಿಬಿಂಬದಲ್ಲಿ ಗುರುತಿಸಿದುದು ರಂಗನಾಯಕಿಯನ್ನೇ ನಿಜ. ಹೆಂಡತಿ, ತಾಯಿ ರಂಗನಾಯಕಿಯನ್ನೇ. ಆದರೆ ನಟಿಯ ವೇಷದಲ್ಲಿ! ಎಷ್ಟು ಚೆನ್ನಾಗಿ ಒಪ್ಪುತ್ತಿತ್ತು! ಆಗ ಅವಳಿಗೆ ತನ್ನ ಎರಡು ಭಾಗದ ವ್ಯಕ್ತಿತ್ವ-ಗರತಿ ನಟಿಯರದ್ದು-ಚೆನ್ನಾಗಿ ಗೊತ್ತಾಯಿತು. ಹಿಂದೆ ಕಂಪನಿ ಬಂದಿದ್ದಾಗ ಆಗಿದ್ದಂತೆ ರಾತ್ರಿಯಲ್ಲಿ ನಾಟಕದ ಕನಸುಗಳೇ. ಇವು ತರುತ್ತಿದ್ದ ಆನಂದ, ಆವೇಶ ಅಷ್ಟಿಷ್ಟಲ್ಲ. ನಾಟಕ ಜೀವನವೇ ಹಿಂದಿರುಗಿದಂತೆ ಬಹಳ ಸುಖವನ್ನು ಅನುಭವಿಸುತ್ತಿದ್ದಳು; ಆದರೆ ಎಚ್ಚೆತ್ತಾಗ ಆ ಬಾಳು ಅವಳ ಕಣ್ಣೆದುರಿಗೇ ಒಡೆದು ಮಾಯವಾಗಿ, ಕನಸಿನ ಸುಖದಷ್ಟೇ ನೋವನ್ನು ತರುತ್ತಿದ್ದಿತು. ಇದನ್ನು ಮರೆಸುವುದಕ್ಕೋ ಎನ್ನುವಂತೆ ಅವಳ ಮನಸ್ಸು ಹಗಲುಗನಸುಗಳನ್ನು ಕಾಣುವ ಅಭ್ಯಾಸವನ್ನು ಮಾಡಿಕೊಂಡಿತು. ಯಂತ್ರದಂತೆ ಕೆಲಸ ನಡೆಸಿದರೂ ಅವಳ ಆತ್ಮವಿಹಾರವೆಲ್ಲ ಆ ವಿಶಿಷ್ಟ ಲೋಕದಲ್ಲೇ. ನಟಿ, ತಾನು ಮೊದಲಾಗಿ ನಟಿ, ನಟಿಯಾಗದಿದ್ದರೆ ತಾನು ಪೂರ್ಣಳಾಗಲಾರಳೆಂಬ ಅರಿವು ಮೆಲ್ಲಮೆಲ್ಲಗೆ ತಬ್ಬಿಕೊಂಡಿತು. ಎಷ್ಟು ಕೊಡಹಿದರೂ,

ಭಯಪಡಿಸಿದರೂ ಬಿಡಲಿಲ್ಲ. ಅಭಿನಯವೇ ತನ್ನ ಜೀವನದ ನೆಲೆ, ಅದೇ ತನಗಿದ್ದ ಸಂದೇಶ, ಅದರ ಸಾಧನೆಯೇ ತನ್ನ ಸಿದ್ಧಿ, ಸಂಸಾರ ಆ ಬೆಳೆಯ ಸುತ್ತದ ಬೇಲಿ, ಅದಕ್ಕೊಂದು ಸಹಾಯ ಎನ್ನುವಂತೆ ಅವಳ ಯೋಚನೆ ಹರಿಯಲಾರಂಭಿಸಿತು. ಇದೇನು ಅವಳಿಗೆ ಹೊಸ ಅಭಿಪ್ರಾಯವಾಗಿರಲಿಲ್ಲ. ಆದರೆ ಈವರೆಗೆ–ಈ ಜನನದ ನೋವು ಹೊರದೂಡುವವರೆಗೆ–ಶಿಶುವಿನ ರೂಪು ಖಚಿತವಾಗಿ ಗೊತ್ತಾಗಿರಲಿಲ್ಲ. ಜನನ ಹೀಗಾದಮೇಲೆ ಅದನ್ನು ಒಪ್ಪಿ ಕೊಳ್ಳಲು, ತೋರಿಸಲು ಕಳ್ಳಬಸಿರಿನದೋ ಎನ್ನುವಂತೆ ನಾಚಿಕೆ, ಭಯ. ಅದರ ಕತ್ತನ್ನು ಹಿಸುಕಿ ಹಾಕಲು ತಾಯಿಯ ಮನಸ್ಸು ಒಪ್ಪದು. ಆದರೆ ಬಹಿರಂಗಪಡಿಸುವುದಕ್ಕೂ ಧೈರ್ಯ ಸಾಲದು. ಹೀಗಾಗಿ ತನ್ನಲ್ಲಿ ದಿನದಿನವೂ, ಗಳಿಗೆ ಗಳಿಗೆಗೂ, ಉಬ್ಬುಬ್ಬಿ ಬರುತ್ತಿದ್ದ ಇಷ್ಟವನ್ನು ತನ್ನಲ್ಲೇ ಅದುಮು ತ್ತಿದ್ದಳು. ಆದರೆ ಹೆಚ್ಚು ಹೆಚ್ಚು ಗಾಳಿ ನುಗ್ಗುತ್ತಿದ್ದರೆ ಬಲೂನು ಎಷ್ಟೆಂದು ತಡೆದೀತು? ಒಂದು ದಿನ ಒಡೆಯಿತು.

ಆ ದಿನ ಬಹುಮಾನ ವಿನಿಯೋಗ ಮಾಡುವುದಕ್ಕಾಗಿ ಶಾಮಣ್ಣ ಅವಳನ್ನು ರಂಗದ ಮೇಲಕ್ಕೆ ಕರೆದಿದ್ದ. ಇದು ಅಕಸ್ಮಾತ್ತಾಗಿತ್ತು. ಅವಳು ತಯಾರಿರಲಿಲ್ಲ. ಆದರೆ ರಂಗವೇನು ಅವಳಿಗೆ ಹೊಸದಲ್ಲ. ಅದರ ಮೇಲೇರಿದಾಗ ಅದೇನು ಸ್ಫೂರ್ತಿ ಬಂದಿತ್ತೋ–ಯಾವಾಗಲೂ ಹೀಗೇ, ರಂಗ ಭಾವಾವೇಶವನ್ನು ತರುತ್ತಿತ್ತು–ಏನು ಮಾಡಿದಳೋ ಅವಳಿಗೆ ತಿಳಿ ಯದು. ಸಭೆ ಉಲ್ಲಾಸದಿಂದ ತುಂಬು ಚಪ್ಪಾಳೆಯಲ್ಲಿ ಮುಳುಗಿದುದು ಮಾತ್ರ ಗೊತ್ತಾಯಿತು. ಪಕ್ಕದ ತೆರೆಗೆ ಬಂದಾಗ ಶಾಮಣ್ಣ “ಸೊಗಸಾಗಿ ಮಾತಾಡಿದೆ. ಅಭಿನಯವೂ....”

“ಅಭಿನಯ! ಯಾವುದು ?” ಅವಳು ಆಶ್ಚರ್ಯದಿಂದ ಕೇಳಿದಳು.

“ಯಾಕೆ? ನಿಂಗೇ ಗೊತ್ತಿಲ್ಲವೆ? ವಿಚಿತ್ರ!”

“ಇಲ್ಲ.”

“ಆಡಿದ ಮಾತು ಸಮರ್ಥಿಸ್ತಾ ಮನ್ಮಥ ಸುಟ್ಟು ಹೋದಾಗ ರತೀ ದೇವಿಯ ಭಾವಪ್ರದರ್ಶನ–ಮಾದರಿ ತೋರಿಸಿದೆಯಲ್ಲ.”

“ಬರಿ ಮಾತಾಡಿದೆ, ಅಷ್ಟೆ.”

“ಉಹುಂ, ಅಯ್ಯೋ ಹುಡುಗಿ! ‘ಲೋಕೋಪಕಾರಕ್ಕಾಗಿ ಶಿವ ನನ್ನು ಜಯಿಸಿ ಕೀರ್ತಿ ಪಡೆಯಲು ಧೈರ್ಯಮಾಡಿ, ತನ್ನಿನಿಯನನ್ನು

ಬಲಿಗೊಟ್ಟು ಸಂಕಟಪಡುವ ರತಿಯ ಮಾತುಗಳಲ್ಲಿ ಎಂಥ ಭಾವಾವೇಶ ತುಂಬಿದೆ,' ಅಂತ ನೀನೇ ಅಭಿನಯಿಸಿ ತೋರಿಸಿದೆಯಲ್ಲ."

" ಹಾಗೇ ? ಬರಿ ಮಾತಾಡಿದೆ ಅಂದುಕೊಂಡಿದ್ದೆ."

ನಾಯಕಿಗೆ ' ಭಲೆ, ನನಗಿನ್ನೂ ಹಿಂದಿನ ಶಕ್ತಿಯಿದೆ ಹಾಗಾದರೆ ! ' ಎನ್ನುವ ಸಂತೋಷ, ' ಇದೇಕೆ ಮಾಡಿದೆ ? ' ಎಂಬ ಆಶ್ಚರ್ಯ. ಕಾರಿನಲ್ಲಿ ರಾಜನನ್ನು ಸೇರಿದಾಗ ಅವಳ ಮುಖ ಅರಳಿತ್ತು, ಆದರೆ ಗಂಭೀರವಾಗಿತ್ತು. ತನ್ನ ಆಲೋಚನೆಯ ಅಲೆಗಳಲ್ಲಿ ತೇಲುತ್ತಿದ್ದಳು.

" ಹಾಗೇಕೆ ಮಾಡಿದೆ ? ಬರಿ ಮಾತಾಡಿದ್ದರೇ ಸಾಕಾಗಿತ್ತು" ರಾಜ ಆಕ್ಷೇಪಣೆಯ ನುಡಿಯಲ್ಲೇ ಹೇಳಿದ.

" ಆ ? " ಅವಳಿಗೆ ಅದು ಕೇಳಿಸಲೇ ಇಲ್ಲ.

ಅವನು ಅದನ್ನು ಮತ್ತೆ ಹೇಳಲಿಲ್ಲ. ಮೌನದಲ್ಲೇ ಇಬ್ಬರೂ ಮನೆಯನ್ನು ತಲುಪಿದರು.

ಆ ರಾತ್ರಿಯೆಲ್ಲ ಅವಳಿಗೆ ನಿದ್ದೆ ಬರಲಿಲ್ಲ. ತನ್ನಲ್ಲಿ ಆಗುತ್ತಿದ್ದ ಅಸ್ಪಷ್ಟ ನಿರ್ಧಾರವನ್ನು ರಾಜನೊಡನೆ ಪ್ರಸ್ತಾಪಿಸಬೇಕೆ ಬೇಡವೆ, ಹೇಗೆ ಮಾತಾಡಬೇಕು, ಅವನ ಅಡ್ಡಿಗಳಿಗೆ ಹೇಗೆ ಉತ್ತರಗಳನ್ನು ಕೊಡಬೇಕು, ಹಿಂದೊಂದು ಬಾರಿ ಇದೇ ಮಾತು ನಡೆದು ತಾನು ಸೋತಿರಲಿಲ್ಲವೆ ? ಈ ಬಾರಿಯೂ ಸೋಲುವುದೆ ? ಇಲ್ಲದಿದ್ದರೆ ಏನು ದಾರಿ ? ಪರಿಣಾಮ ಹೇಗೆ ? ತನಗೆ ಸಾಧ್ಯವೆ, ಈ ಹೆಜ್ಜೆ? ಈ ಚಿಂತೆಯ ತಳಮಳ ಅವಳಲ್ಲಿ ಸುಮ್ಮನೆ ಕುದಿಯುತ್ತಿತ್ತು. ಹಾಗೆ ಮಧ್ಯೆ ಮಧ್ಯೆ ಅಂದಿನ ಪ್ರೋತ್ಸಾಹ, ಮುಂದಿನ ಅವಕಾಶ, ಉಜ್ವಲ ಭವಿಷ್ಯದ ಆಕರ್ಷಣೆ, ಆಸೆ, ಕನಸು, ನಂಬಿಕೆ ಇವು ಬಂದು ಬಂದು ಹುರಿದುಂಬಿಸುತ್ತಿದ್ದುವು, ಮುಂದುವರಿಸುತ್ತಿದ್ದುವು. ಮಲಗುವ ಹೊತ್ತಿನಲ್ಲೂ ಮಾರನೆಯ ದಿನವೂ ಮಾತಿಗಾಗಿ ಹತ್ತು ಬಾರಿ ಯತ್ನಿಸಿದರೂ ಹೆದರಿ ಹಿಮ್ಮೆಟ್ಟಿದ್ದಳು. ಆದರೆ ಪ್ರತಿಯೊಂದು ಸೋಲೂ ಮತ್ತಷ್ಟು ಕೆಣಕುತ್ತ ಇನ್ನೂ ಮುಂದೆ ಮುಂದೆ ತಳ್ಳುತ್ತಿತ್ತು.

ಸಂಜೆಯಲ್ಲಿ ಕನ್ನಡಿಯ ಮುಂದೆ ಅಲಂಕಾರ ಮೊದಲಾಗಿತ್ತು. ರಾಜ ಅವಳನ್ನು ಕಾಯುತ್ತ ಅಲ್ಲೇ ಶತಪಥ ತಿರುಗುತ್ತಿದ್ದ. ನಡೆಯುತ್ತಿದ್ದ ಮಾತಿಗೆ ಹಾಗೇ, ಪ್ರಯತ್ನಪೂರ್ವಕವಾಗಿಯೇ, ನಾಟಕವನ್ನು ತಂದಳು. ನಾಲ್ಕಾರು ಸಾಮಾನ್ಯವಾದ ಮಾತಾದುವು.

"ನಾನು ಈ ನಾಟಕದೋರಿಗಿಂತ ಉತ್ತಮ ನಟಿಯಾಗಿದ್ದೆ ಅಲ್ಲವೆ?" ಅವಳು ಅವನ ಕಡೆಗೆ ನೋಡದೆಯೇ ಕೇಳಿದಳು. ಅವನ ಮುಖವನ್ನು ನೋಡಲು ಧೈರ್ಯವಿಲ್ಲ; ಬಾಂಬೆಸೆಯಲಿರುವವಳಂತೆ.

"ಅಡ್ಡಿಯೇನು. ಈಗೇನು ಕಡಿಮೆಯೆ? ಹ್ಹ!" ಅವನು ಸೂಚ್ಯವಾಗಿ ಹೇಳಿ ನಸುನಕ್ಕ. ಆದರೆ ಅವಳಿಗೆ ಅವನ ಮಾತು ಅರ್ಥಗಳ ಮೇಲೆ ಗಮನವಿರಲಿಲ್ಲ. ಸಿದ್ಧವಾಗಿದ್ದ ತನ್ನ ಮಾತನ್ನು ಮುಂದುವರಿಸುವುದರಲ್ಲೇ ಯತ್ನ.

"ನಾನು ಈಗಲೂ ಯಾಕೆ ಪಾರ್ಟು ಮಾಡಬಾರದು ಅನ್ನಿಸುತ್ತೆ."

"ಅದೇ ಹೇಳಿದೆನಲ್ಲ, ಮಾಡ್ತಾಲೇ ಇದೀಯೆ, ಮನೇಲಿ ಅಂತ" ಇನ್ನೂ ವಿನೋದವಾಗಿಯೇ.

"ಅದಲ್ಲ, ನಿಜವಾಗಿ ಇದು ನನ್ನ ಮನಸ್ಸಿಗೆ ಬಂದಿದೆ" ಅವಳ ಗಂಭೀರ ಭಾವ ಅವನನ್ನು ಅಲುಗಾಡಿಸಿದಂತಾಗಿ ವಿನೋದವನ್ನು ಒತ್ತರಿಸಿತು. ಅವನು ತಟ್ಟನೆ ನಿಂತು ಅವಳನ್ನು ಎದುರಿಸಿದ. ಅವಳು ಅವನ ಕಡೆಗೆ ಸ್ವಲ್ಪ ತಿರುಗಿದ್ದರೂ ಕತ್ತನ್ನು ತಗ್ಗಿಸಿಯೇ ಇದ್ದಳು.

"ಇದು ಎಂದೋ ತೀರ್ಮಾನವಾಗಿ ಹೋಗಿದೆಯಲ್ಲ. ಮತ್ತೇಕೆ ಮಾತು?" ಅವನಿಗೆ ಈ ಮಾತನ್ನು ಬೆಳೆಸಲು ಇಷ್ಟವಿರಲಿಲ್ಲ.

"ಆಗಲೂ ನಂಗೆ ಒಪ್ಪಿಗೆಯೇನೋ ಇರಲಿಲ್ಲ."

"ಓ, ಮತ್ತೆ ಒಪ್ಪಿಕೊಂಡೆಯಲ್ಲ."

"ಆಗ ನನ್ನನ್ನು ನಾನು ಅಷ್ಟಾಗಿ ತಿಳಿದುಕೊಂಡಿರಲಿಲ್ಲ. ಈಗ ನೆಲೆ ಗೊತ್ತಾಗುತ್ತಿದೆ."

"ಊಹೂಂ; ಅದೇನೋ, ಅಂಥಾದ್ದು–ತಿಳಿವಳಿಕೆ. ಆಗ ಅಷ್ಟು ಸಂಪಾದನೆಯ ಅಗತ್ಯವಿದ್ದಾಗಲೇ ಬೇಡ ಎಂದಾಯ್ತು, ಈಗ ಇಷ್ಟು ಅನುಕೂಲ...."

"ಅಗತ್ಯ, ಅನುಕೂಲದ ವಿಷಯ ಅಲ್ಲ, ಆಸಕ್ತಿಯದು. ಇದೇ ತಿಳಿವಳಿಕೆ ಅಂದರೆ. ಅಭಿರುಚಿ ಇರೋ ಹವ್ಯಾಸ ನಂಗೆ ಬಹಳ ಅಗತ್ಯ. ಇಲ್ಲದಿದ್ದರೆ ನನ್ನ ಅರ್ಧ ಬಾಳೇ ಬೀಳಾಗೋ ಹಾಗೆ ಕಾಣುತ್ತಿದೆ. ನನ್ನ ಅರ್ಧ ರೋಗವೆಲ್ಲ ನಿರುದ್ಯೋಗವೇ. ತೀವ್ರವಾದ ಆಸಕ್ತಿ ಸಂಜೀವಿನಿಯಾಗುತ್ತೆ. ಬಾಕಿ ಔಷಧ ಟಾನಿಕ್‌ಗಳೆಲ್ಲ ವ್ಯರ್ಥ."

" ಹವ್ಯಾಸಕ್ಕೇನು, ಸಂಸಾರ ಅಂದರೆ ಸಾಮಾನ್ಯವೆ? ಎಷ್ಟು ಆಸಕ್ತಿ ವಹಿಸಿದರೂ...."

"ಅದು ಸಾಲದು. ಈಗಿನದಕ್ಕಿಂತ ಹೆಚ್ಚು ಅವಶ್ಯಕವಿಲ್ಲ. ಅದರಲ್ಲೇ ಮುಳುಗಿದ್ದು ಮುಗಿಸಿ ತೃಪ್ತಿಪಟ್ಟುಕೊಳ್ಳಲಾರೆ. ನಂಗೆ ವಿಶೇಷ ಶಕ್ತಿ ಏನಿದೆಯೋ ಅದು ವ್ಯರ್ಥವಾಗುತ್ತಿದೆ ಅನ್ನಿಸುತ್ತೆ. ವಿರಾಮ ಕಾಲ ದಂಡ ವಾಗುತ್ತಿದೆ-ಸಣ್ಣ ಸಣ್ಣ ವಿಷಯದಲ್ಲಿ. ನಾನು ಸುಮ್ಮನೆ ಮುಪ್ಪಾಗುತ್ತಾ ಇದೀನಿ. ಆಗ ಈಗ ಮನಸ್ಸಿನ ಚಿಟಚಿಟಿಗೂ ಇದೇ ಕಾರಣ ಇರಬೇಕು."

" ಅಷ್ಟೊಂದು ಹೆಚ್ಚು ಕಾಲ ಶಕ್ತಿಗಳಿದ್ದರೆ ಇನ್ನು ಯಾವುದಾದರೂ ಸಂಗೀತ, ಸಾಹಿತ್ಯ, ಚಿತ್ರ...."

" ಅವೆಲ್ಲ ನಂಗೆ ಎಟುಕೋದಿಲ್ಲ. ನೋಡಿ, ಸೋತುಬಿಟ್ಟಿದೀನಿ."

" ಸಮಾಜಸೇವೆ...."

" ಅದಕ್ಕೆಲ್ಲ ಬುದ್ಧಿಯಿಲ್ಲ. ಬೇಕೂ ಇಲ್ಲ. ಬಲವಂತದಿಂದ ಮಾಡೋದು ಸಾರ್ಥಕವಾಗೋದಿಲ್ಲ."

" ಹಾಗೆಂದರೇನು. ಅಭ್ಯಾಸಮಾಡಿದರೆ ಎಲ್ಲ ಬರುತ್ತೆ, ಸರಿ ಯಾಗುತ್ತೆ."

" ಉಹುಂ, ಸಾಧ್ಯವಿಲ್ಲ. ನಂಗೆ ಬೇಕಾದದ್ದನ್ನು ಬಿಟ್ಟು ಬೇಡ ವಾದುದರ ಬೆನ್ನು ಹತ್ತೋಕೆ ನಂಗೆ ತಾಳ್ಮೆಯಿಲ್ಲ. ಯಾಕೆ, ಇಷ್ಟಕ್ಕೂ? ನನ್ನ ಮನಸ್ಸು ಅರ್ಧ ಸಿದ್ಧಿ, ಸಾರ್ಥಕ್ಯಕ್ಕೆ ಒಪ್ಪೋದಿಲ್ಲ. ಪೂರ್ತಿ ಪೂರ್ತಿ ಬೇಕು. ಅದಕ್ಕೆ ಆಸಕ್ತಿ, ಶಕ್ತಿ ಎರಡೂ ಇರೋ ದಾರಿ ಬೇಕು."

" ಇದೆಲ್ಲ ಬರಿಯ ಭ್ರಾಂತಿ."

" ನಿಜ ಅಂತ ನಿಮಗೆ ಹೇಗೆ ತೋರಿಸಲಿ-ನನ್ನ ಒಳಗಾಗುತ್ತಿರೋ ತಳಮಳವನ್ನು? ನಂಗೂ ಆಸೆಗಳಿವೆ-ಮಹದಾಸೆಯೊಂದು. ತೀರಿಸಿಕೊಂಡೇ ನೆಂಬ ಭರವಸೆಯೂ ಇದೆ. ಅದನ್ನು ಅದುಮಲಾರೆ."

" ತಪ್ಪಾದರೆ, ಮರ್ಯಾದೆಗೋಸ್ಕರ ಅದುಮಲೇ ಬೇಕು."

" ಇದರಲ್ಲಿ ಅವಮಾನವೇನಿಲ್ಲ. ಹಿಂದೆಂದೋ ಆ ಅನುಮಾನ ಇತ್ತು, ಅಷ್ಟೆ. ಇದೂ ಸಂಗೀತ ಸಾಹಿತ್ಯಗಳ ಹಾಗೇ ಕಲೆ. ಅನೀತಿಗಿಳಿಯದಂತೆ ನೋಡಿಕೊಳ್ಳೋದು ಸಾಧ್ಯ-ಅದೂ ನನ್ನ ಸ್ಥಿತಿಯಲ್ಲಿರೋರಿಗೆ. ಅನೇಕರು ಮರ್ಯಾದೆಯಿಂದ ಇರೋದೂ ಗೊತ್ತಿದೆ. ಅದೆಲ್ಲ ಮನಸ್ಸಿನ ಮೇಲಿರುತ್ತೆ."

"ಆದರೇನು. ಆ ಹಾಳು ಸಹವಾಸ, ಅವಕಾಶ, ಎಂಥೆಂಥ ಪರಿಣಾಮವನ್ನು ತಂದಾವ್ರೋ–ಯಾರಿಗಾದರೂ."

"ನನ್ನಲ್ಲಿ ಅಷ್ಟು ನಂಬಿಕೆಯಿಲ್ಲವೆ? ಆ ಅಜ್ಞಾನದ ಕಾಲ ಆಗಿ ಹೋಯ್ತು. ಮರ್ಯಾದೆಯನ್ನು ಉಂಡು ಮರೀತೀನೆ?"

"ನೀನು ಹೇಗಿದ್ದರೇನು. ಜನ ಆಡಿಕೊಳ್ಳೋದಕ್ಕಾದರೂ...."

"ಅದಕ್ಕೆ ತಾನೆ ಯಾಕೆ ಅವಕಾಶ ಕೊಡಬೇಕು. ನನ್ನ ಹೊತ್ತಿಗೆ ಹೋಗಿ ಮುಗಿದ ಕೂಡಲೆ ಬಂದುಬಿಟ್ಟರೆ? ಹೊರ ನಡೆವಳಿಕೆಯಲ್ಲೂ ಸರಿಯಾಗೇ ಇದ್ದುಬಿಟ್ಟರಾಯ್ತು."

"ಉಹುಂ, ಏನಾದರೂ ಗುಲ್ಲು ಎದ್ದೇ ಏಳುತ್ತೆ. ಸಮಾಜದ ವಿಚಾರ ನಂಗೆ ಗೊತ್ತು. ಏನಾದರೂ ಕೊಂಚ ಕೊಳಕು ಮಾತಿಗಾಗಿ ಅವರ ಬಾಯಿ ನೀರು ಕರೆಯುತ್ತಿರುತ್ತೆ, ಅದನ್ನು ಚಪ್ಪರಿಸೋದಕ್ಕೆ ಹಾತೊರೆಯುತ್ತಿರುತ್ತೆ. ನಿಜ, ಸುಳ್ಳು ಯಾಕೆ ಬೇಕು, ಅದಕ್ಕೆ. ಒಂದು ಆಸ್ಪದ ಸಿಕ್ಕಿದರೇ ಸಾಕು."

"ಇಷ್ಟು ಕೆಟ್ಟದಾಗಿದ್ದರೆ ಆ ಸಮಾಜಕ್ಕೆ ಹೆದರೋದು ಯಾಕೆ? ನಮ್ಮ ತೃಪ್ತಿ ನಮಗೆ ಮುಖ್ಯ. ಬೇರೆಯವರ ತೃಪ್ತಿಗಾಗಿ ಆತ್ಮಹತ್ಯವೆ? ನಾನಂತೂ ಸಿದ್ಧವಿಲ್ಲ. ಕೆಟ್ಟದನ್ನು ಹೇಗೆ ಬಚ್ಚಿಡೋದು ಆಗೋದಿಲ್ಲವೋ ಒಳ್ಳೇದೂ ಮುಚ್ಚಿಕೊಂಡಿರೋದಿಲ್ಲ–ಬಹಳ ಕಾಲ. ಆಗ ಗುಲ್ಲೆಲ್ಲ ನಿಂತು ನಮಗೆ ಇನ್ನೂ ಹೆಚ್ಚು ಗೌರವ ಬಂದೀತು–ಸಂಸಾರಸ್ಥರು ಕಲೆಗಾಗಿ ಈ ಅಪಾಯಕ್ಕೂ ಹೆದರದೆ ಸಾಹಸಮಾಡಿ ಸಾರ್ಥಕ್ಯ ಪಡೆದರು ಅಂತ."

"ಇಲ್ಲ. ನಾನು ಇದಕ್ಕೆ ಹೆದರೋನೆ. ಹಿಂದಿನದನ್ನು ಹೇಗೋ ಸರಿಪಡಿಸಿಕೊಂಡಿದೀವಿ ಈಗ. ಮತ್ತೆ ನನ್ನ ಹೆಂಡತಿ ನಟಿ ಅಂತ ಅನ್ನೋದು ನಂಗೆ ಇಷ್ಟವಿಲ್ಲ. ನಂಗೆ–ಅದೂ ಈ ಸ್ಥಿತಿಗತಿಯಲ್ಲಿ–ಶುದ್ಧ ಅವಮಾನ.... ಉಹುಂ."

"ಅದು ನಿಮ್ಮ ಅಭಿಪ್ರಾಯವಾಯ್ತು. ನೇರವಾಗಿ ಈ ಸಂಬಂಧ ಇಟ್ಟುಕೊಂಡು, ಅಪವಾದದ ಉರಿ ಹೆಚ್ಚಾಗಿ ತಡೆದುಕೊಳ್ಳೋಳು ನನ್ನ ಅಭಿಪ್ರಾಯ ಬೇರೆಯಾಗಿದೆಯಲ್ಲ. ನಾನು ಅದಕ್ಕಾಗಿ ಏನನ್ನಾದರೂ ಸಹಿಸಬಲ್ಲೆ."

" ಅದು ಏನೋ. ನಾನಂತೂ ಒಪ್ಪೋದಿಲ್ಲ. ಅಷ್ಟೇ ಸಾಕು."

" ಅಷ್ಟು ಖಂಡಿತವಾಗಿದ್ದರೆ ಹೇಗೆ ? ನನ್ನ ಕಡೆಯಿಂದಲೂ ಯೋಚಿಸಬೇಡವೆ ? "

"ಎಲ್ಲವನ್ನೂ ಯೋಚಿಸಿದೀನಿ. ಆಮೇಲೇ ನಿರ್ಧರಿಸಿದೀನಿ. ನಂಗೆ, ನಿಂಗೆ ಎಲ್ಲರಿಗೂ ಹಿತವಾದ ಮಾರ್ಗವೇ ನಾನು ಹೇಳಿರೋದು. ಸರಿಯಾಗಿದೆ."

" ನಂಗೆ ಹಾಗೆ ಕಾಣೋದಿಲ್ಲ. ನನ್ನ ಭಾಗಕ್ಕೆ ಅಷ್ಟಾಗಿ ಗಮನ ಸಿಕ್ಕಿಲ್ಲ. ಏನೇನೋ ಹೆದರಿಕೆ, ' ಮರ್ಯಾದೆ 'ಯ ಅಭಿಪ್ರಾಯ ಮಂಜು ಕವಿಸಿದ ಹಾಗಿದೆ."

" ಹಾಗೇ ಅಂದುಕೊ. ನಾನು ಇನ್ನೇನು ಹೇಳಲಿ ? ಅಂತೂ ಈ ವಿಷಯ ಬಿಟ್ಟುಬಿಡು. ಹಿಂದೆಯೂ ಹೇಳಿದೀನಿ, ಈಗಲೂ ಅದನ್ನೇ ಹೇಳ್ತೀನಿ."

" ಅದನ್ನೇ ಮತ್ತೆ ಮತ್ತೆ ಹೇಳಿದರೆ ಹೆಚ್ಚೇನು ಹೇಳಿದ ಹಾಗಾಯ್ತು? ಹಿಂದಿನ ಮಾತು ಬೇಡ. ಕಾಲ ಕಳೆದಿದೆ. ದೃಷ್ಟಿ ಒಂದೇ ರೀತಿ ಇರಬೇಕಾಗಿಲ್ಲ. ನನ್ನದಂತೂ ಬದಲಾಯಿಸಿದೆ."

" ಊಹೂಂ ! ನಂಗೆ ಈ ಹೆದರಿಕೆ ಇತ್ತು." ಅವನು ತಲೆಯಾಡಿಸುತ್ತ ಮತ್ತೆ ಶತಪಥಕ್ಕೆ ಮೊದಲು ಮಾಡಿದ. ಅವನಿಗೆ ಅವಳನ್ನು ತಡೆಗಟ್ಟಲು ಇಷ್ಟ. ಆದರೆ ಹೇಗೆಂದು ತಿಳಿಯದು. ಅಧಿಕಾರ ಒಂದೇ ಮೇಲೆ ಮೇಲೆ ಬರುತ್ತಿತ್ತು. ಹಿತವಿಲ್ಲದೆ ಕಿರಿಕಿರಿಯಾಯಿತು. ವಿನೋದದಲ್ಲಿ ತೇಲಿಸಬೇಕೆಂದು ಮಾಡಿದ ಅವನ ಯತ್ನ ಮುರಿದು, ಏರುತ್ತಿದ್ದ ಅಸಹನೆಯನ್ನು ಅವನು ತಡೆದುಕೊಳ್ಳುತ್ತಿದ್ದ. ಅವಳು ಶಾಂತವಾಗಿ, ಆದರೆ ಖಂಡಿತವಾಗಿ ಮಾತನ್ನು ಮುಂದುವರಿಸುತ್ತಿದ್ದಳು. ಅವಳಿಗೆ ರಂಗದ ಮೇಲೆ ನಿಂತಂತಾಗಿತ್ತು. ನಾಲಿಗೆಯ ಬಿಗಿ ಹರಿದಿತ್ತು, ಮಾತಿನ ಸ್ಫೂರ್ತಿ ಬಂದಿತ್ತು. ಅವನ ಮಾತಿನಲ್ಲಿದ್ದ ಅಧಿಕಾರದಿಂದ ಅವಳು ಸ್ವಲ್ಪ ಬಿಸಿಯಾಗಿದ್ದರೂ ತೂಕವನ್ನು ಕಳೆದುಕೊಳ್ಳಲಿಲ್ಲ. ಅವನ ಕಡೆಯ ಮಾತಿನಲ್ಲಿ, ಧ್ವನಿಯಲ್ಲಿ ಕಂಡ ಕೊಂಚ ಕೊಂಕನ್ನೂ ಮನಸ್ಸಿಗೆ ತಂದುಕೊಳ್ಳಲಿಲ್ಲ.

" ನನ್ನ ಆಸೆಗಳೂ ನೆರವೇರಬೇಕು ಅಂತ ಅನ್ನಿಸುತ್ತೆ. ಇಲ್ಲದಿದ್ದರೆ ನಂಗೆ ಸಂಪೂರ್ಣ ಸುಖವಿಲ್ಲ, ಶಾಂತಿಯಿಲ್ಲ, ತೃಪ್ತಿಯಿಲ್ಲ. ನನ್ನ ಬಾಳು ಕರಟಾಗುತ್ತೆ. ನನ್ನ ಅತೃಪ್ತಿ ನನ್ನ ಮನೆಗೂ ಒಳ್ಳೇದಲ್ಲ."

" ಆದರೆ ನಿನ್ನ ' ತೃಪ್ತಿ' ಮನೇನೇ ಮುರಿಯುತ್ತೆ."

" ಯಾಕೆ ಮುರೀಬೇಕು–ನಮ್ಮಲ್ಲಿ ಒಬ್ಬರು ಇಷ್ಟಪಟ್ಟೆ ಹೊರತು ?"

" ನೀನೇ ಇಷ್ಟಪಡುತ್ತಿದೀಯಲ್ಲ."

" ಇಲ್ಲ. ಮನೆಗೂ ಅಪಾಯವಿಲ್ಲ ಎಂದು ಕಂಡಿರುವಾಗಲೇ ನನ್ನ ಒಳ ಪ್ರೇರಣೆ ಒಂದನ್ನು ಸಮಾಧಾನಪಡಿಸುತ್ತಾ ಇದೀನಿ, ಅಷ್ಟೆ."

" ಸುಮ್ಮನೆ ಹಟ ಹಿಡೀತಾ ಇದೀಯೆ."

" ಬಹು ಕಾಲ ನಿಮ್ಮ ತೃಪ್ತಿಗಾಗಿ ನನ್ನ ಇಷ್ಟವನ್ನು ಬಹಳ ವಿಷಯಗಳಲ್ಲಿ ಅದುಮಿದೀನಿ, ಈಗ ನನ್ನನ್ನೂ ಒಂದು ಬಾರಿ ಸ್ವಲ್ಪಮಟ್ಟಿಗೆ ತೃಪ್ತಿಪಡಿಸಿಕೊಳ್ಳಬೇಕಾಗಿದೆ."

" ಈ ಮನೆಯ ಮರ್ಯಾದೆಯ ಬೆಲೆಯನ್ನಾದರೂ ಕೊಟ್ಟೆ? ಬೇಡ, ಚಿನ್ನ."

" ನೀವು ನಂಗೆ ಮನೆ ಮರ್ಯಾದೆಗಳೆರಡನ್ನೂ ಕೊಟ್ಟಿದೀರಿ ಅನ್ನೋದು ನಂಗೆ ಗೊತ್ತು, ಕೃತಜ್ಞಳಾಗೂ ಇದೀನಿ. ನಿಮ್ಮ ಪ್ರೇಮ ದೊಡ್ಡದು. ಆದರೆ ನಾನು ಬಹಳ ಆಸೆಯೋಳು. ಇನ್ನೂ ಕೇಳುತ್ತೀನಿ. ಇನ್ನೂ ಸ್ವಲ್ಪ ದಾನಮಾಡಿ."

" ಸ್ವಲ್ಪ ಯಾಕೆ, ನನ್ನ ಜೀವವಾದರೂ ಕೊಟ್ಟೇನು, ಅಗತ್ಯವಾದಾಗ. ಆದರೆ ಈ ಸಂದರ್ಭದಲ್ಲಿ ನಾನು ಜಿಪುಣನೇ–ನಿನ್ನ ಹಿತಕ್ಕಾಗಿ ಅಂತಲೇ. ನಿನ್ನ ಸಂಸಾರಕ್ಕಾಗಿ ಅಂತಲೇ."

" ಹಾಗಾದರೆ ನಿಮ್ಮನ್ನು ನಿರಾಶೆಗೊಳಿಸದೆ, ನಿಮ್ಮಿಂದ ಕೃತಘ್ನಳು ಅಂತ ಅನ್ನಿಸಿಕೊಳ್ಳದೆ ಇರೋ ಹಾಗೇ ಇಲ್ಲ ಅಂತ ಕಾಣಿಸುತ್ತೆ."

" ರಂಗು ! ಇಲ್ಲಿಗೆ ಬಂದುಬಿಟ್ಟಿತೆ–ಮುರಿದುಹೋಗೋವರೆಗೆ ? " ಅವನು ಆಶ್ಚರ್ಯ ಅಸಮಾಧಾನಗಳಿಂದ ಕೂಗಿಕೊಂಡ. ಅವಳೆದುರು ನಿಂತು ದುರುದುರನೆ ನೋಡಿದ, ' ಇವಳೇ, ಇಷ್ಟು ದಿನ ಇಷ್ಟಾನುವರ್ತಿಯಾಗಿದ್ದ ಮೃದು ಹೆಣ್ಣು, ಎನ್ನುವಂತೆ.

" ಉಹುಂ. ನೀವು ಅಲ್ಲಿಯವರೆಗೆ ಹೋಗಗೊಡುತ್ತೀರ ! "

" ನೀನು–ಅಲ್ಲಿಗೆ ತಂದೋಳು, ನಾನಲ್ಲ. ನಿನ್ನ ಈ ಪ್ರೇರಣೆ ಅನ್ನೋದು, ನಾವು ಇಷ್ಟು ದಿನ ಕಟ್ಟಿದ ಕಟ್ಟಡವನ್ನು ಕೆಡಹುವಷ್ಟು ಗಟ್ಟಿಯೆ? ಅದಕ್ಕೆ ಅಷ್ಟು ಅವಕಾಶ ಕೊಡುತ್ತೀಯ ? "

" ಎಷ್ಟು ಸಾರಿ ಹೇಳಲಿ–ಇದಕ್ಕೆ ಅಗತ್ಯವಿಲ್ಲ ಅಂತ. ನಾನು ಗರತಿಯಾಗಿಯೂ ನಟಿಯಾಗಿಯೂ ಮಾನದಿಂದ ಇರಬಲ್ಲೆ, ಹೆಚ್ಚು ಮಾನ ತರಬಲ್ಲೆ. ಹಾಗೇ ಯೋಚಿಸಿದರೆ ಎಲ್ಲ ನಟಿಯರಿಗೂ ಗೃಹಿಣಿಯಾಗಿರೋ ಅವಕಾಶವೂ ಇದ್ದರೆ ನಾಟಕದ ಹೊಲಸು ಎಷ್ಟೋ ಕಡಿಮೆಯಾದೀತು. ಯಾಕೆ, ನಟಿಯಾದೋಳಿಗೆ ಸಂಸಾರ ಅಗತ್ಯ ಅಂತಲೇ ಕಾಣುತ್ತೆ. ಆದರೆ ಅದು ರಕ್ಷಿಸೋ ಮನೆ ಆಗಿರಬೇಕು, ಅಡ್ಡಿ ಹಾಕೋ ಸೆರೆಮನೆಯಾಗಿರಬಾರದು, ಅಷ್ಟೆ. ಗರತಿಯಾಗಂತೂ ನಾನು ಎಂದೆಂದಿಗೂ ಇದ್ದೇ ಇರುತ್ತೀನಿ. ನಾಟಕವನ್ನೂ ಬಿಡಲಾರೆ. ಆ ಕರೆಯು ಸೆಳೆತ ಅಷ್ಟು. ನೀವು, ಮಗು ನನ್ನ ದೇಹ, ಉಸಿರು ಇದ್ದ ಹಾಗಿದ್ದರೆ ಈ ಕಲೆ ನನ್ನ ಆತ್ಮದ ಹಾಗಾಗಿದೆ. ಆತ್ಮವಿಲ್ಲದೆ ಎಂಥ ಬಾಳು ? "

" ಇದೆಲ್ಲ ಪುಸ್ತಕದ ಅಭಿಪ್ರಾಯ, ಮಾತು. ನಿಜವಾಗಿ ನಿನ್ನ ಹೆಜ್ಜೆ ಅಪಾಯದ್ದು. ನಿನ್ನ ದೇಹವನ್ನು ಕೊಲ್ಲೋದೆ. ನಿನ್ನ ಸುಖವನ್ನ ಹಾಳುಮಾಡೋದೆ. ಒಡಕು ಖಂಡಿತ. ನಾನು ಇದನ್ನು ಸಹಿಸೋದು ಸಾಧ್ಯವಿಲ್ಲ."

" ವಿಷಯ ಅಲ್ಲಿಗೇ ಬರೋದಿಲ್ಲ; ನಾನು ಅಷ್ಟೊಂದು ಬೆಲೇನೇ ಕೊಟ್ಟು ತೀರೋ ಹಾಗೇ ಮಾಡೋದಿಲ್ಲ ನೀವು ಅಂತ ನಂಬಿದೀನಿ."

" ಉಹುಂ, ಅಲ್ಲಿಗೆ ಬರದೆ ದಾರಿಯಿಲ್ಲ ಅನ್ನಿಸುತ್ತೆ. ಈ ವಿಷಯದಲ್ಲಿ ನಾನು ಬಹಳ ಖಂಡಿತವಾಗಿದೀನಿ. ಹೋಗಗೊಡೋದಿಲ್ಲ–ನೀನು ಹೆಂಡತಿಯಾಗಿ, ತಾಯಾಗಿ ಇರೋವರೆಗೆ. ಇದು ಬೆದರಿಕೆ ಅಂತ ತಿಳೀಬೇಡ. ನಿಜಸ್ಥಿತಿ. ಚೆನ್ನಾಗಿ ಯೋಚಿಸು."

" ಹೀಗೆ ಕಠಿಣವಾಗಬೇಡಿ. ನನ್ನ ಮನಸ್ಸನ್ನು ತಿಳಿದುಕೊಳ್ಳೋದಕ್ಕೆ ಸ್ವಲ್ಪ ಯತ್ನಿಸಿ. ನನ್ನನ್ನು ಉಳಿಸಿಕೊಳ್ಳಲು ಬಾಳಿಸಲು ನನಗೆ ನೀವು ಸಹಾಯವಾಗಬೇಕು. ಸ್ವಲ್ಪ ಸ್ವಾತಂತ್ರ್ಯ ದಾನಮಾಡಿ. ಬೇಡಿಕೋತೀನಿ."

" ಉಹುಂ, ಇನ್ನು ಯಾವುದರಲ್ಲಾದರೂ ಸರಿ–ಇದೊಂದನ್ನ ಬಿಟ್ಟು."

" ಹಾಗಾದರೆ ನಾನು ಸ್ವತಂತ್ರಿಸಿ ಬಂದದ್ದನ್ನೆಲ್ಲ ಉಣ್ಣಬೇಕು ಅಷ್ಟೆ."

" ಅಷ್ಟೊಂದು ಹುಚ್ಚಿಯಲ್ಲ ಅಂತ ತಿಳಿದಿದೀನಿ."

" ನೀವು ಏನು ಹೇಳಿದರೂ ಅಷ್ಟು ನಿರ್ದಯರಾಗಿ ಇರೋದಿಲ್ಲ ಅಂತ ನಂಗೆ ನಂಬಿಕೆ."

" ಪರೀಕ್ಷಿಸಬೇಡ, ನನ್ನ ವಿಷಯ ನಂಗೇ ನೆಚ್ಚಿಕೆಯಿಲ್ಲ."

" ನಂಗಿದೆ ವಿಶ್ವಾಸ–ನಿಮ್ಮ ಧಾರಾಳತನದಲ್ಲಿ."

" ಅಪಾಯದ ವಿಶ್ವಾಸ. ಆ ಯತ್ನ, ಆಟ ಬೇಡ. ರಂಗು, ನಾನು ಕಠಿಣ, ಒರಟು ಅಂದುಕೋಬೇಡ. ಈ ವಿಷಯುವನ್ನು ಚರ್ಚಿಸಿ ಫಲವಿಲ್ಲ. ಕಡೆಯದಾಗಿ ಕೇಳಿಕೋತೀನಿ, ಬಿಟ್ಟುಬಿಡು, ಈ ಯೋಚನೆ, ಸಂತೋಷ ವಾಗಿ ನಮ್ಮ ಸಂಸಾರ ನಡೆಯಲಿ."

ಇನ್ನು ಅವಳೇನನ್ನೂ ಹೇಳಲಿಲ್ಲ. ಆದರೆ ಅವಳ ಮೌನ ಅರ್ಥ ಗರ್ಭಿತವಾಗಿತ್ತು. ಸಂಜೆ ಕಳೆದು ಕತ್ತಲಾಗುತ್ತಿತ್ತು. ಇನ್ನೆಲ್ಲಿಯ ವಿಹಾರ? ಅವನು ಅಲ್ಲಿಂದ ಹೋದ. ತನ್ನ ಕೋಣೆಯಲ್ಲಿ ಸಿಗರೇಟನ್ನು ಸೇದುತ್ತ ಕುಳಿತ. ಅವಳು ಅಲ್ಲೇ ಮೆತ್ತೆಯ ಕುರ್ಚಿಯ ಮೇಲೆ ಕುಕ್ಕರಿಸಿಕೊಂಡಳು. ಚಿಂತೆಯಲ್ಲಿ ಮುಳುಗಿದಳು. ದಾದಿ ಬಂದು ದೀಪ ಹಚ್ಚಿಸಿ, ಚಂದು "ಅಮ್ಮಾ, ಊಟ" ಎಂದಾಗಲೇ ಅವಳಿಗೆ ಎಚ್ಚರ.

ಮುಂದಿನ ಎರಡು ನಾಟಕಗಳಿಗೆ ಇವರು ಹೋಗಲಿಲ್ಲ. ರಾಜ ಕೆಲಸದ ಉದ್ದಿಶ್ಯವಾಗಿ ತರೀಕೆರೆಗೆ ಹೋಗಿದ್ದ. ನಾಯಕಿಯ ಅಂತರ್ಯುದ್ಧ ಅವಳಿಗೆ ಬೇರೆ ಯೋಚನೆಗೇ ಅವಕಾಶ ಕೊಟ್ಟಿರಲಿಲ್ಲ. ಆದರೆ ಶಾಮಣ್ಣ ವಿಚಾರಿಸಲು ಬರುವ ಹೊತ್ತಿಗೆ ಅವಳಿಗೆ ಈ ಗ್ರಹದಿಂದ ಬಿಡುಗಡೆಯಾಗುತ್ತ ಬಂದಿತ್ತು. ಮಾತಾಡುತ್ತ ಶಾಮಣ್ಣ "ನಾಡಿದ್ದು 'ಕೀಚಕ ವಧೆ'ಯನ್ನಾದರೂ ನೋಡೋದಕ್ಕೆ ಬರುತ್ತೀಯಲ್ಲ" ಎಂದ.

" ನೋಡೋದಕ್ಕೆ ಯಾಕೆ, ಪಾರ್ಟು ಮಾಡೋದಕ್ಕೇ ಬಂದರೋ ?" ಅವಳು ನಸುನಗುತ್ತ ಕೇಳಿದಳು.

" ಓಹೋ, ತಮಾಷೆ ಮಾಡ್ತೀಯ ಮುದುಕನ ಹತ್ತಿರ? ನಂಗಿನ್ನೂ ಅಷ್ಟೊಂದು ಅರುಳು ಮರಳಿಲ್ಲ, ನಂಬುವಷ್ಟು" ಅವನೂ ನಕ್ಕ.

" ಇಲ್ಲ, ಅಪ್ಪ. ನಿಜವಾಗಿ–ನೀನು ಒಪ್ಪಿದರೆ" ಅವಳ ಗಂಭೀರ ಧ್ವನಿ ಅವನನ್ನು ಬೆಚ್ಚಿಸಿತು.

"ಅ ! ಇದೇನು ಮಗು ನೀನು ಹೇಳೋದು ?" ಅವನಿಗೆ ಆಶ್ಚರ್ಯ, ಸಂತೋಷ, ಭಯ ಎಲ್ಲವೂ ಒಟ್ಟಿಗೆಯೇ ಆದುವು.

"ಅದೇ ನಿರ್ಧಾರಕ್ಕೆ ಬಂದಿದೀನಿ."

"ನೀನು, ನಾಟಕಕ್ಕೆ–ಮತ್ತೆ! ನಂಬಲಾರೆ. ಆಗಲೇ ಒಪ್ಪದಿದ್ದೋಳು....'

"ಆಗ ನನ್ನ ಅಜ್ಞಾನದ ಬಂಧನದಲ್ಲಿದ್ದೆ."

"ನಿಮ್ಮ ಯಜಮಾನರು ಒಪ್ಪಿದಾರೇ ?"

"ನಾನು ಒಪ್ಪಿದೀನಿ. ಸಾಲದೇ ?"

"ಸಾಲದಮ್ಮ, ಮಗು. ಬಹಳ ನಿಧಾನವಾಗಿ ಯೋಚಿಸಬೇಕಾದ ವಿಚಾರ."

"ಅಪ್ಪ, ಒಂದು ದಿನದಲ್ಲಿ ಯೋಚಿಸಿ ಈ ನಿರ್ಧಾರಕ್ಕೆ ಬರೋದು ಸಾಧ್ಯವೇ ? ಎಷ್ಟೋ ವರ್ಷಗಳಿಂದ ಇದು ನಂಗೆ ತಿಳಿಯದ ಹಾಗೇ ನನ್ನಲ್ಲಿ ಮನೆ ಮಾಡಿಕೊಂಡು ಪೀಡಿಸುತ್ತಿತ್ತು. ಈಚೀಚೆಗಂತು ಅದರ ಸ್ಪಷ್ಟ ಸೆಳೆತ ಅಷ್ಟಿಷ್ಟಲ್ಲ. ಇದರ ಕನಸು ಎಷ್ಟನ್ನು ಕಂಡಿದೀನೋ, ಇದರ ಚರ್ಚೆಯಲ್ಲಿ ಎಷ್ಟು ರಾತ್ರಿ ನಿದ್ದೆಗೆಟ್ಟಿದೀನೋ. ನಾನೇ ಬಲ್ಲೆ, ಅದರ ಹೊಯ್ದಾಟ, ಸಂಕಟ, ಎಲ್ಲ. ಈಗ ಇದೇ ನಿರ್ಧಾರ. ಥಾಗಿಲ್ಲದೆ ನಂಗೆ ಬಾಳಿನಲ್ಲಿ ಸುಖವಿಲ್ಲ ಅಂತ ಅರಿತುಕೊಂಡಿದೀನಿ."

"ಅಮ್ಮ, ನೀನು ಕಂಪನಿ ಸೇರಿದರೆ ನಂಗೆ ಆಗೋ ಸಂತೋಷ, ಲಾಭ ಅಷ್ಟಿಷ್ಟೆ? ನಾನೇ ಒಂದು ಬಾರಿಯೇಕೆ ಅನೇಕ ಬಾರಿ ಕರೆದಿರಲಿಲ್ಲವೆ ? ಪ್ರೋತ್ಸಾಹಿಸಿರಲಿಲ್ಲವೆ ? ಆದರೆ ಈಗ ಸ್ಥಿತಿಗತಿ ಬದಲಾಯಿಸಿವೆ. ನಂಗೆ ನಿನ್ನ ಸುಖ ಹೆಚ್ಚು, ಸ್ವಾರ್ಥವಲ್ಲ. ಅವರು ಒಪ್ಪದೆ ಇಂಥ ಮನೆ, ಸಂಸಾರ, ಗೌರವ, ಎಲ್ಲಕ್ಕೂ ಧಕ್ಕೆ ಬಂದರೆ ನನ್ನನ್ನೇ ಕ್ಷಮಿಸಿಕೊಂಡೇನೆ ? ಆಗದಮ್ಮ. ಆತುರ ಬೇಡ."

"ಆತುರವೇನಿಲ್ಲ. ಅಪ್ಪ, ಯಾರಿಗಾದರೂ ಸರಿಯೆ, ಏನೇನಿದ್ದರೂ ಮನಸ್ಸಿನ ತೃಪ್ತಿಯಿರದಿದ್ದರೆ ಅವೆಲ್ಲಕ್ಕೂ ಬೆಲೆಯಿಲ್ಲ."

"ಇಷ್ಟರಲ್ಲಿ ನಿಂಗೆ ತೃಪ್ತಿಯಿರಬೇಡವೆ ?"

"ನನ್ನ ಅಭಿನಯದ ಹಸಿವನ್ನು ಇನ್ನು ಯಾವುದು ತಾನೆ ಹೋಗಲಾಡಿಸೀತು ?"

"ನಿನ್ನ ಹಸಿವೇನೋ ನ್ಯಾಯವಾದದ್ದೇ. ನಿನ್ನ ಹುಟ್ಟು ಬೆಳವಣಿಗೆ ಯೆಲ್ಲ ನಾಟಕದಲ್ಲಿರುವಾಗ, ಅಭಿನಯ ರಕ್ತದಲ್ಲೇ ಇರುವಾಗ, ಬೇರೆ ಹೇಗಿದ್ದೀತು ? ಇದರಲ್ಲಿ ನಿನ್ನ ಭವಿಷ್ಯ ಏನು ಅಂತಲೂ ಊಹಿಸಬಲ್ಲೆ. ಆದಕ್ಕೇ ಹಿಂದೆ ನೀನು ರಂಗವನ್ನು ಬಿಡಬಾರದು ಅಂತ ನಾನು ವಿರೋಧಿಸಿದ್ದು. ಆದರೆ ಈಗ....ಉಹುಂ, ಬಹಳ ತೂಕ ಹಾಕಬೇಕಾಗಿದೆ. ಸಂಗೇನೂ ತೋಚುತ್ತಿಲ್ಲ. ತಕ್ಷಣವೇ ಒಪ್ಪಲಿಲ್ಲ ಅಂತ ನೊಂದುಕೋಬೇಡ. ನೀನು ನಂಗೆ ಮೊದಲು ಮಗಳು, ಆಮೇಲೆ ನಟಿ. ಇನ್ನೊಂದು ಬಾರಿ ಮಾತಾಡೋಣ" ಇದರ ತೀರ್ಮಾನವನ್ನು ಆದಿನ ಮುಂದಕ್ಕೆ ಹಾಕಿದ.

ಮುಂದೆಷ್ಟು ಮಾತಾಡಿದರೂ ಪರಿಣಾಮವು ಒಂದೇ ಆಯಿತು. ಅವನು ಅವಳ ದೃಢ ನಿಶ್ಚಯವನ್ನು ತಿಳಿದೂ, ಅವಳಿಂದ ಕಲೆಗಾಗುವ ಲಾಭವನ್ನು ನೆನೆದೂ, ಅವಳ ದೊಡ್ಡ ಭವಿಷ್ಯವನ್ನು ಊಹಿಸಿಕೊಂಡೂ, ಅವಳ ಆಸೆಗಾಗಿ ಮರುಗಿಯೂ, ಅವಳ ಹಿತಕ್ಕಾಗೆಂದೇ ಅವಳ ಉತ್ಸಾಹವನ್ನು ಕುಂದಿಸಲು ಹೆಣಗಿ ವಿಫಲನಾದ. ಅವನ ಈ ಯತ್ನ ಅವನಿಗೇ ಆಶ್ಚರ್ಯವನ್ನುಂಟುಮಾಡಿತ್ತು. ಕಡೆಗೂ ಆದ ಸೋಲು ಅವನಿಗೆ ವ್ಯಸನವೆಷ್ಟನ್ನು ಕೊಟ್ಟಿತೋ ಅಷ್ಟೇ ಸಂತೋಷವನ್ನೂ ಕೊಟ್ಟಿತು. ಅವಳು "ಅಪ್ಪ, ನಿನ್ನ ತಡೆ ಮಾತಿನಿಂದ ಏನು ಪ್ರಯೋಜನ. ನಂಗೆ ಆಸ್ಪದ ಕೊಡೋದು ನಿಂಗೆ ಸರಿಯಾಗಿ ಕಾಣದಿದ್ದರೆ, ನಾನು ಬೇರೆ ಎಲ್ಲಾದರೂ ಯತ್ನಿಸುತ್ತೀನಿ, ಅಷ್ಟೆ" ಎಂದಾಗ ಅವನು ಅನುಮಾನಿಸದೆ ಒಪ್ಪಿಕೊಂಡುಬಿಟ್ಟ. ಅವಳಿಗೆ ಕಗ್ಗಂಟೊಂದನ್ನು ಕಡೆಗೆ ಬಿಚ್ಚಿದಂತಾಯಿತು. ಎದುರು ಪ್ರವಾಹದ ಮೇಲೆ ಈಸುತ್ತಿದ್ದು ಕೈಕಾಲು ಸೋತಿದ್ದಾಗ ದೋಣಿಯೊಂದು ಸಿಕ್ಕಿದಂತಾಯಿತು. ಆನಂದದ ಆವೇಶ ಹೊಂದಿದಳು. ಅಳುಕಿಲ್ಲದೆ ಇರಲಿಲ್ಲ ; ಆದರೆ ಅನಾಹುತವೇನನ್ನೂ ನಿರೀಕ್ಷಿಸಲಿಲ್ಲ. ಮುಂದಿನ ಸಂಭ್ರಮಕ್ಕೆ ಮೊದಲಾಯಿತು. ಶಾಮಣ್ಣನಿಗೆ ಇಹಪರಗಳೆರಡನ್ನೂ ದೊರಕಿಸಿಕೊಂಡವನ ಸಮಾಧಾನ.

ಇದು ನಿರ್ಧರವಾದ ಮೇಲೆ ಅವಳು ಯಾವ ನಾಟಕದಲ್ಲಿ ಮೊದಲು ಪಾತ್ರವಹಿಸಬೇಕೆಂದು ಚರ್ಚೆಯಾಯಿತು. ಶಾಮಣ್ಣ 'ಶಾಕುಂತಲ'ವನ್ನು ಸೂಚಿಸಿದ. ಆದರೆ ಅವಳು "ಅದು ಎರಡನೇದಾಗಲಿ ಮೊದಲು 'ಸತ್ಯವಾನ್-ಸಾವಿತ್ರಿ.' ಈಗ ಅವಕ್ಕೆ ಹೊಂದಿಕೊಳ್ಳೋದು ಸುಲಭ.

ಆಮೇಲೆ 'ಶಾಕುಂತಲ' " ಎಂದಳು. ಅವಳ ಜಯ ಯಾವುದರಲ್ಲಾದರೂ ದೊಡ್ಡದೇ ಎಂದುಕೊಂಡು ಶಾಮಣ್ಣ ಒಪ್ಪಿಕೊಂಡ. ಭಾನುವಾರದ ಮ್ಯಾಟನಿ ಮಾರನೆಯ ದಿನವೆ.

ಈ ಸುದ್ದಿ ತಿಳಿದು ನಟವರ್ಗದಲ್ಲಿ ಕೋಲಾಹಲವೆದ್ದಿತೆಂದು ಹೇಳಬೇಕಾಗಿಲ್ಲ. ರಾಮಯ್ಯ, ಲಿಂಗಪ್ಪ ಎಲ್ಲರೂ ಅವಳಿಗೆ ತಕ್ಕಂತೆ ಬಹಳವಾಗಿ ಶ್ರಮಿಸಬೇಕೆಂದು ನಿರ್ಧರಿಸಿದರು. ಆಗಿದ್ದ ನಟಿಯೊಬ್ಬಳು ಮಾತ್ರ ಅಸೂಯೆಯಿಂದ ಮೂಗು ಮುರಿದು ಮುನಿಸಿಕೊಂಡಳು. ಆದರೆ ಅವಳನ್ನು ಗಮನಿಸುವವರಾರು, ಇನ್ನು? ವಿಶೇಷ ಸಿದ್ಧತೆಗಳು ಅವರಲ್ಲೂ, ರಂಗದಲ್ಲೂ ನಡೆದುವು. ಕಂಪನಿಗೇ ಹೊಸ ಕಳೆ ಬಂದಿತ್ತು. ಹಾವು ಪರೆ ಬಿಟ್ಟ ಹಾಗಿತ್ತು. ಅದೇ ಸಂಜೆ ಬಹಳ ಹೊತ್ತಿನವರೆಗೂ 'ರಿಹರ್ಸಲ್' ನಡೆಯಿತು. ನಾಯಕಿಗೆ ಮಾತೆಲ್ಲ ಹಿಂದೆ ಪಾಠವಾಗಿದ್ದುದು ಈಗ ಬೇಗಲೇ ಬಾಯಿಗೆ ಬರುತ್ತಿತ್ತು. ರಾತ್ರಿ ಬೇರೆ ಇತ್ತಲ್ಲ.

ಅದೇ ಸಂಜೆ ಬೆಂಗಳೂರಿನ ಪತ್ರಿಕೆಗಳಲ್ಲಿ 'ಹಿಂದಿನ ಸುಪ್ರಸಿದ್ಧ ನಟಿ ರಂಗನಾಯಕಿ ಪುನಃ ರಂಗವನ್ನು ಪ್ರವೇಶಿಸುತ್ತಾಳೆ! ಅವಳ ಅಭಿನಯವನ್ನು ನೋಡಿ ಆನಂದಿಸಿ!! ಇಂಥ ಸುಸಮಯವನ್ನು ಕಳೆದುಕೊಳ್ಳಬೇಡಿ!!! 'ಸತ್ಯವಾನ್-ಸಾವಿತ್ರಿ'ಯಲ್ಲಿ' ಎಂದು ಮುಂತಾಗಿ ದಪ್ಪ ಅಕ್ಷರಗಳಲ್ಲಿ ಪ್ರಕಟನೆಯಾಗಿತ್ತು. ಭಾನುವಾರ ಬೆಳಿಗ್ಗೆ ಊರಿನ ಬೀದಿಗಳಲ್ಲೆಲ್ಲ ಇದೇ ಅರ್ಥದ ಪ್ರಕಟನೆಯ ಚೀಟಿಗಳು ಹಾರಾಡುತ್ತಿದ್ದುವು; ಕಂಪನಿಯ ಬರಹಗಾರ ರಾತ್ರಿಯೆಲ್ಲ ಬರೆದಿದ್ದ ತಡಿಕೆಯ ಬೋರ್ಡುಗಳು ಮುಖ್ಯವಾದ ಸ್ಥಳಗಳಲ್ಲಿ ತೂಗಾಡುತ್ತಿದ್ದುವು. ಮೂರು ನಾಲ್ಕು ಕುದುರೆಯ ಗಾಡಿ ಬ್ಯಾಂಡುಗಳೂ, ಅನೇಕಾನೇಕ ಹುಡುಗರ ತಡಿಕೆಯ ಪ್ರದರ್ಶನ, ಕೂಗು ಪ್ರಚಾರಗಳ ಗುಂಪುಗಳೂ ತಮ್ಮ ಕೆಲಸವನ್ನು ಬಹಳ ಜೋರಾಗಿ ನಡೆಸಿದ್ದುವು. ಈ ವಿಶೇಷ ಯತ್ನವನ್ನು ಬೆಂಗಳೂರು ಎದ್ದು ಕುಳಿತು ಗಮನಿಸಿತು.

ಪ್ರಚಾರ ವ್ಯರ್ಥವಾಗಲಿಲ್ಲ. ನಾಟಕ ಮಂದಿರ ಕಿಕ್ಕಿರಿದಿರದಿದ್ದರೂ ಎಂದಿನಂತೆ ಅರ್ಧ ಮುಕ್ಕಾಲು ಆಗಿರದೆ ತುಂಬಿದ್ದಿತು. ಹೊಸ ನಟಿಯ ಪ್ರವೇಶವನ್ನು ಕುತೂಹಲದಿಂದ ಕಾಯುತ್ತಿತ್ತು. ರಂಗದೊಳಗೆ ನಾಯಕಿ ಅತಿ ಸಡಗರದಿಂದ ತನಗಾಗಲೇ ಅಷ್ಟೊಂದು ಚೆನ್ನಾಗಿ ಗೊತ್ತಿದ್ದ ವೇಷ

ವನ್ನು ಧರಿಸಿ ಸಿದ್ಧವಾಗಿದ್ದಳು, ಆತುರವಾಗಿದ್ದಳು—ಮದುವೆಯ ಹಸೆಗೆ ಬರಲಿರುವ ವಧುವಿನಂತೆ. ಈಗ ಅವಳು ಸಾವಿತ್ರಿ—ರಂಗನಾಯಕಿಯಲ್ಲ-ಬೆಟ್ಟದಷ್ಟಿದ್ದ ಅವಳ ಭಯ, ಮಗು ಮನೆಗಳ ಚಿಂತೆ—ಎಲ್ಲವೂ ಈ ಗಳಿಗೆಯಲ್ಲಿ ಮರೆಯಾಗಿದ್ದುವು, ಮರೆತೇ ಹೋಗಿದ್ದುವು. ನೆನಪು ಒಂದೇ, ತನ್ನ ಪಾತ್ರದ್ದು. ಗೊಂದಲವಿಲ್ಲದ ಈ ಗಳಿಗೆಯಲ್ಲಿ ಅವಳ ಶಕ್ತಿಯೆಲ್ಲ ಒಮ್ಮುಖವಾಗಿತ್ತು. ಎದೆ ಹಗುರವಾಗಿತ್ತು.

ಪ್ರೇಕ್ಷಕರಿಗೆ ಆಶಾಭಂಗವಾಗಲಿಲ್ಲ. ಪ್ರಕಟನೆಗಳು ಸುಳ್ಳು ಹೇಳಿರಲಿಲ್ಲ. ಅವಳು ರಂಗಕ್ಕೆ ಅಡಿಯಿಟ್ಟಾಗಲೇ ತನ್ನ ರೂಪು, ನಿಲುವು ನಡೆ ನುಡಿಗಳಿಂದ ಆಕರ್ಷಿಸಿದಳು. ತನ್ನ ವೇಷದಲ್ಲಿ ನಾಯಕಿ ಇನ್ನೂ ಹುಡುಗಿಯಂತೇ ಕಂಡಳು—ಇಪ್ಪತ್ತೈದು ಇಪ್ಪತ್ತಾರು ವರ್ಷದ ತಾಯಿಯನ್ನು ಅವಳಲ್ಲಿ ಗುರುತಿಸುವುದು ತಿಳಿದವರಿಗೂ ಸುಲಭವಾಗಿರಲಿಲ್ಲ. ಆ ಮೆಲು ನಡೆ, ಇಂಪು ನುಡಿ, ನಿಲುವಿನ ಗಾಂಭೀರ್ಯ, ರಾಜಕುವರಿಯ ಹುಟ್ಟಿಗೆ ತಕ್ಕಂತಿದ್ದರೆ, ಅವಳ ಅಕೃತ್ರಿಮ ಸರಳತೆ, ಅರಮನೆಯ ಸುಕುಮಾರಿಯು ಕಾಡಿನ ಕಷ್ಟದಲ್ಲಿ ತೋರುತ್ತಿದ್ದ ಸಹನೆ, ಸಮಾಧಾನ, ಶಾಂತಿ ಸಂತೋಷ—ಇವೂ, ಅತ್ತೆ ಮಾವಂದಿರಲ್ಲಿ ತೋರಿಸುತ್ತಿದ್ದ ವಿನಯ ವಿಶ್ವಾಸಗಳೂ ಅವಳು ಸೇರಿದ್ದ ಮನೆಗೆ ಹೊಂದಿಕೊಂಡಿತ್ತು, ಅವಳ ಶ್ರೇಷ್ಠ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತಿದ್ದುವು. ತಾನು ತನ್ನಿನಿಯನ ನೆರಳೋ, ಇಬ್ಬರೂ ಒಂದೇಯೋ ಎನ್ನುವ ಆತ್ಮೀಯತೆ; ಒಂದು ಮಾತಿನ ಹೊರಳಿನಲ್ಲಿ, ದೃಷ್ಟಿಯ ಕೊನೆಯಲ್ಲಿ ಕಾಣುತ್ತಿದ್ದ ಪ್ರೇಮ, ಹಾಗೂ ಅವನ ಸಂಬಂಧದಲ್ಲೆಲ್ಲ ಅವನ ಗಂಡಾಂತರವನ್ನರಿತಿದ್ದ ಭಯದ ಛಾಯೆ, ಇವು ಅವಳು ನಟಿಯೆಂಬುದನ್ನು ತತ್ಕಾಲದಲ್ಲಿ ಮರೆಸುವಷ್ಟು ಸಹಜವಾಗಿದ್ದುವು. ಜನ ಅದು ಅದ್ಭುತ ನಟನೆಯೆಂದುಕೊಂಡುದುದು ಪರದೆ ಬಿದ್ದಮೇಲಿನ ಗಿಜಿಗಿಜಿಯಲ್ಲೇ. ಈ ದೃಶ್ಯಗಳಿಗೆ ಕಿರೀಟವಿಟ್ಟಂತೆ ಅವಳು ಯಮಧರ್ಮರಾಯನೊಡನೆ ನಡೆದುಕೊಂಡಾಗ ಅವಳಲ್ಲಿ ಕಂಡ ಗೆಲ್ಲುವ ನಯ, ಎದೆ ಕರಗಿಸುವ ಯಾತನೆಯ ಹೊದಿಕೆ, ತನ್ನ ಪ್ರೇಮ ಶಕ್ತಿಯಲ್ಲಿ ತನಗಿದ್ದ ಭರವಸೆಯ ಧೈರ್ಯ, ಸೋಲೊಪ್ಪದ ವಿಚಿತ್ರ ಸಹನೆ, ಯಮನನ್ನೇ ಮರುಳುಗೊಳಿಸಿದ ತನಗೇ ಅರಿವಿಲ್ಲದ ಸರಳ ಚಮತ್ಕಾರ—ಒಟ್ಟಿನಲ್ಲಿ ಆ ಆಶ್ಚರ್ಯದ ಪ್ರಾಮಾಣಿ

ಕತೆ, ಜಯದಲ್ಲಿ ತೋರಿಸಿದ ತೂಕ, ಇವೆಲ್ಲವೂ ಯಮುನನ್ನು ಗೆದ್ದಂತೆಯೇ ಪ್ರೇಕ್ಷಕರನ್ನೂ ಮುಗ್ಧಗೊಳಿಸಿದುವು. ಅಪ್ರಕೃತವಾಗಿ ಸಂಗೀತದ ಪ್ರದರ್ಶನಕ್ಕಾಗಿ ಅವಳು ಹಾಡಲಿಲ್ಲ. ಅವಳ ಮಾತೇ ಇಂಪಾದ ಗಾನದಂತಿತ್ತು. ಮನೆಯಲ್ಲಿ ಪೂಜೆಯ ವೇಳೆ, ಇನಿಯನೊಡನೆ ಕಾನನದಲ್ಲಿದ್ದಾಗ ಎದೆಯುಬ್ಬಿ ಬಂದಾಗ ಅಂದ ಮೆಲು ಸ್ವರದ ಹಾಡುಗಳು–ಸಂಗೀತವಲ್ಲ–ಚಪ್ಪಾಳೆಯ ಯಾಂತ್ರಿಕ ಮೆಚ್ಚಿಗೆಯನ್ನೂ, '**once more**' ನಾಟಕೀಯತೆಯನ್ನೂ ಮರೆಸಿದ್ದುವು. ನಾಟಕ ಮುಗಿದ ಮೇಲೇ ಜನ ಎಚ್ಚೆತ್ತಿತ್ತು 'ರಂಗನಾಯಕಿ!' 'ಸಾವಿತ್ರಿ!' ಎಂದು ಕೂಗಿಕೊಂಡರು. ಅವಳು ಪರದೆಯ ಮುಂದೆ ಬಂದು ಕೈ ಜೋಡಿಸಿ ನಮನಕ್ಕಾಗ ಒಂದು ನಾಟಕದ ಚಪ್ಪಾಳೆಯೆಲ್ಲ ಮಳೆಯಾಗಿ ಸುರಿಯಿತು. ಈವರೆಗೆ ಅಂಕಗಳ ಮಧ್ಯದ ವಿರಾಮದಲ್ಲಿ ಎಲ್ಲೆಲ್ಲಿಂದಲೋ ತಂದು ಈ ಸಮಯಕ್ಕಾಗಿ ಇಟ್ಟುಕೊಂಡಿದ್ದ ಹೂಮಾಲೆಗಳು ಹೊರಗೆ ಬಂದುವು.

ಕಡೆಯ ಮಾತಾಗಿ ಶಾಮಣ್ಣ "ಸದ್ಯದಲ್ಲೇ 'ಶಾಕುಂತಲ' ನಾಟಕ ನಡೆಯುವುದಿದೆ. ರಂಗನಾಯಕಿಯವರು ಭಾಗವಹಿಸುತ್ತಾರೆ. ಮಹಾಜನರೆಲ್ಲರೂ...." ಎನ್ನುವಷ್ಟರಲ್ಲೇ ಮತ್ತೆ ಕರತಾಡನ ಅವನ ಮುಂದಿನ ಮಾತನ್ನು ಮುಳುಗಿಸಿಬಿಟ್ಟಿತು. ಹಿಂದೆಂದೂ ಇಲ್ಲದ ಅರಳಿದ ಮುಖಗಳಿಂದ, ಗಿಜಿಗಿಜಿಯ ಮಾತುಗಳಿಂದ, ಜನರು ಮನೆಗಳಿಗೆ ಹೋದರು.

ರಂಗದೊಳಕ್ಕೇ ಬಂದು ಮೆಚ್ಚುಗೆಯನ್ನು ತೋರಿಸಿದವರೂ ಎಷ್ಟೋ ಜನ. ಅವಳಿಗೆ ಇದು ಹೊಸ ಅನುಭವವೇನಾಗಿರಲಿಲ್ಲ. ಅತಿ ವಿನಯದ ತಪ್ಪು ನಟನೆ ಮಾಡದೆ, ಅವರ ಅಭಿನಂದನೆಗಳನ್ನು ಒಪ್ಪಿಕೊಂಡು ಸಹಜವಾಗಿ ವಂದಿಸಿದಳು. ಬೆಂಗಳೂರಿನಲ್ಲಿ ನೆಲೆಸಿದ್ದ ಗುಜರಾತಿ ಸೇಟ್ ಕಪೂರ್‌ಚಂದರು "ನಾನು ಇಂಥ ಅಭಿನಯ ಕಂಡೇ ಇರಲಿಲ್ಲ. ಇಷ್ಟೊಂದು ಪ್ರಕಟನೆ ಮಾಡಿದ್ದೀರಲ್ಲ, ನೋಡೋಣ ಅಂತ ಬಂದೆ. ಸಾರ್ಥಕ ಆಯ್ತು. ಮುಂದೆ ತಪ್ಪೋದಿಲ್ಲ. ನಮ್ಮ ಮುಂಬೈನಲ್ಲಿ ಆಗಿದ್ದರೆ ಹಣದ ಮಳೆಯೇ ಸುರಿದುಹೋಗುತ್ತಿತ್ತು. ಅಲ್ಲಿ ನಮ್ಮ ಕಂಪನಿ ಇದೆ. ಒಳ್ಳೇ ಜನಕ್ಕೆ ಹುಡುಕ್ತಾಲೇ ಇರ್ತಾರೆ, ಸಿಕ್ಕೋದೇ ಇಲ್ಲ. ಬಹಳ ಸೊಗಸಾಗಿತ್ತು. ಒಂದು ಕಾಣ್ತಾ ಇರ್ತೀನಲ್ಲ" ಎಂದು ಹೊಗಳಿದರು, ಸೂಚ್ಯವಾಗಿ ತಮ್ಮ ಒಳ ಯೋಚನೆಯನ್ನೂ ತೋರಿಸಿದರು.

" ಇದು ಉಪಚಾರದ, ಅಭಿಮಾನದ ಮಾತಲ್ಲ ತಾನೆ?" ಎಂದು ಕೇಳುತ್ತ ನಾಯಕಿ ನಕ್ಕಳು.

" ಅಂಥಾದ್ದೆಲ್ಲ ಯಾಕೆ–ನಿಜವಾದ ಶಕ್ತಿ ಕಂಡಾಗ" ಸೇಟರು ಇನ್ನೂ ಸ್ವಲ್ಪ ಮಾತಾಡಿ ಹೊರಟುಹೋದರು. ಶಾಮಣ್ಣನೂ ಕೂಡ " ಮಗು, ಇಷ್ಟು ವರ್ಷದಲ್ಲಿ ನಿನ್ನ ಅಭಿನಯ ಏನನ್ನೂ ಕಳೆದುಕೊಂಡಿಲ್ಲ. ಇನ್ನೂ ಅದಕ್ಕೆ ಒಂದು ಹೊಸ ಮೆರಗು ಬಂದಿದೆ–ನಿನ್ನ ಮೇಲು ಜೀವನದ ಕೈವಾಡ ಅನ್ನಿಸುತ್ತೆ. ಹೀಗೇ ಸಂಸ್ಕೃತಿ ಇರೋ ಇತರರೂ, ಗಂಡಸರು ಹೆಂಗಸರು ಇಬ್ಬರೂ, ರಂಗಕ್ಕೆ ಸಹಾಯವಾದರೆ, ನಮ್ಮ ನಾಟಕದಲ್ಲಿ ಕ್ರಾಂತಿಯೇ ಆಗಿ ಅದರ ಮಟ್ಟ ತಟ್ಟನೆ ಮೇಲೆ ಹೋಗುತ್ತೆ. ಆಗ ಈ ಕಲೆಗೂ ಮರ್ಯಾದೆ ಹೆಚ್ಚುತ್ತೆ, ನಮ್ಮಂಥೋರ ತಾಪತ್ರಯವೆಲ್ಲ ಹರಿಯುತ್ತೆ. ಈಗ ಹಣಕ್ಕಾಗಿ ಪಡೋ ಕಷ್ಟ ಕಲೆಗಾಗಿ ಪಡಬಹುದು" ಅಂದ. ನಟವರ್ಗದವರೂ ಮುತ್ತಿಕೊಂಡರು. ಲಿಂಗಪ್ಪ " ಹೂವಿನ ಜತೆಗಿದ್ದ ನಾರಿನಂತೆ ನಮಗೂ ಒಂದು ಗೌರವ, ಉತ್ಸಾಹ ಈಗ ಬಂದಿದೆ" ಎಂದು ಅವರೆಲ್ಲರ ಅಭಿಪ್ರಾಯವನ್ನು ಸೂಚಿಸಿದ.

ಆ ರಾತ್ರಿ ಕಣ್ಣು ಬಿಟ್ಟುಕೊಂಡು ಹಾಸಿಗೆಯ ಮೇಲೆ ಮಲಗಿದ್ದ ನಾಯಕಿ, ಹೊಸ ರಂಗನಾಯಕಿ. ಹಳಬಳಿಗೆ ಪುನರ್ಜನ್ಮ ಬಂದಿತ್ತು. ತನ್ನನ್ನು ತಡೆದಿದ್ದ ಸಂಕೋಲೆ ಹರಿದಂತಿತ್ತು. ಜೀವನಕ್ಕೆ ವಿಶೇಷ ಅರ್ಥವೊಂದು ಬಂದಿತ್ತು. ಜಡತೆ ಹರಿದು ಮೈಯಲ್ಲಿ ರಕ್ತ ಚಲನೆಯ ಬಿಸಿ ಗೊತ್ತಾಗುತ್ತಿತ್ತು. ಹಾಳಾಗಿದ್ದ ನೆನಪು ಮತ್ತೆ ಬಂದಿತ್ತು. ಹಾಲನ್ನೇ ಉಂಡ ದೀರ್ಘಕಾಲದ ರೋಗಿಯ ನಾಲಿಗೆಗೆ ಉಪ್ಪಿನಕಾಯಿ ತಗುಲಿತ್ತು. ಮೃಷ್ಟಾನ್ನವೇ ಮುಂದೆ ಕಾದಿದ್ದ ಸಂತೋಷ ಇದಿರಿನಲ್ಲಿ ಕುಣಿಯುತ್ತಿತ್ತು. ಹತ್ತಿರದ ದೃಷ್ಟಿಯ ಕಣ್ಣಿಗೆ ಈ ಕನ್ನಡಕ ಬಂದು ವಿಶಾಲ ಜಗತ್ತನ್ನೆಲ್ಲ ಮತ್ತೆ ಕಾಣಿಸುತ್ತಿತ್ತು. ಇಷ್ಟವಾದುದನ್ನು, ಸಾರ್ಥಕವಾದುದನ್ನು ಸಾಧಿಸಿದ ಪೂರ್ಣತೃಪ್ತಿ, ಸಂಸಾರ ಒಂದೇ ಕೊಟ್ಟಿದ್ದ ಅರೆ ಸಮಾಧಾನವಲ್ಲ. ಎಷ್ಟೋ ಕಾಲದ ತಳಮಳ ಅಡಗಿದ ಶಾಂತಿ. ಸಾವಿರಾರು ಮೈಲಿ ಸಮುದ್ರವನ್ನು ಬಗೆದು ರೇವು ಮುಟ್ಟಿದ ಹಡಗಿನಂತೆ ಆಗಿದ್ದಳು. ಹಾಗೆಯೇ ಮುಂದೆ ಮುನ್ನುಗ್ಗುತ್ತಿದ್ದ ಹೊಸ ದಾರಿಯ ಯೋಚನೆಯ ಅಲೆಗಳ, ಸವಿ ನೋಟದ

ಕನಸುಗಳ ಅಶಾಂತಿಯೂ ಇತ್ತು. ಆದರೆ ಅದು ಹಿತವಾದ ಅಶಾಂತಿ. ಗೋಲ್‌ಗೆ ಚೆಂಡನ್ನು ಕೊಂಡೊಯ್ಯುವವನ ಆತುರದ ಅಶಾಂತಿ. 'ನನ್ನ ಭವಿಷ್ಯಕ್ಕೆ ಈ ದಿನ ಒಳ್ಳೇ ಅಸ್ತಿಭಾರ ಹಾಕಿದೀನಿ" ಎಂದು ಸಂತೋಷ. ಇದರ ಹಿಂದೆಲ್ಲ 'ಈ ಸಂಸಾರದ ವಿಷಯ ಹೇಗಾದೀತು?' ಎನ್ನುವ ಭಯದ ನೆರಳು, 'ಸರಿಹೋಗಿಸಿಕೊಳ್ಳುತ್ತಾರೆ, ಅಷ್ಟು ಪ್ರೀತಿಸುತ್ತಾರೆ' ಎನ್ನುವ ಅರೆನಂಬಿಕೆ, ದುರ್ಬಲ ಸಮಾಧಾನ. ಹೀಗಿತ್ತು ಅವಳ ಸಿಡುಗಣ್ಣಿನ ಸಿದ್ದ್ವಿ.

-೯-

ಮಾರನೆಯ ಬೆಳಿಗ್ಗೆ ಕಾಫಿಯ ಹೊತ್ತಿನಲ್ಲಿ 'ತಾಯಿನಾಡು' ಪತ್ರಿಕೆಯನ್ನು ತಿರಿವಿಹಾಕಿದಾಗ 'ಅದ್ಭುತ ಅಭಿನಯ' ಎಂದಿದ್ದ ಶಿರೋನಾಮೆಯು ಅವಳ ಕಣ್ಣಿಗೆ ಬಿದ್ದಿತು. ಕೆಳಗೇ 'ರಂಗನಾಯಕಿಯವರ ರಂಗಪ್ರವೇಶ' 'ಆಶ್ಚರ್ಯ ಪ್ರತಿಭೆ' ಎಂದೂ ಇತ್ತು. ವಿಮರ್ಶಕ ಅವಳ ಸೂಕ್ಷ್ಮ ಪರಿಚಯವನ್ನು ಮಾಡಿಕೊಟ್ಟು ಒಂದು ಕಾಲಂ ಪೂರ್ತಿಯಾಗಿ ವಿಮರ್ಶಾತ್ಮಕವಾದ ಪ್ರಶಂಸೆ ಮಾಡಿದ್ದ. 'ಹೊಸ ರೀತಿ,' 'ದೊಡ್ಡ ಭವಿಷ್ಯ' 'ಮೈಮರೆಸುವ ಕಲೆ' ಎಂದು ಮುಂತಾಗಿ ಬಹಳವಾಗಿ ಮೆಚ್ಚಿ... ತೋರಿಸಿದ್ದ. ನಾಯಕಿಯ ಮುಖ ಬೆಳಗಿತು, ಅರಳಿತು. ಅ...ಳಿಗೆ ಬಹಳ ಹೆಮ್ಮೆಯಾಯಿತು, ತನ್ನಲ್ಲಿ ಭರವಸೆ ಹೆಚ್ಚಿತು. ತಾನು ಇಟ್ಟ ಹೆಜ್ಜೆ ಸರಿಯೆಂದು ಇನ್ನೂ ಹೆಚ್ಚು ವಿಶ್ವಾಸ ಹುಟ್ಟಿತು. ಅದನೆ...ೇ ಮತ್ತೆ ಮತ್ತೆ ಆತುರದಿಂದ, ನಿಧಾನವಾಗಿ ನಾಲ್ಕಾರು ಬಾರಿ ಓದಿದ...ು, ಚಪ್ಪರಿಸಿದಳು, ಆವೇಶ ಹುಟ್ಟಿತು. 'ವಿಶ್ವಕರ್ಣಾಟಕ' 'ಜನ...ವಾಣಿ' ಹೀಗೆ ಇದ್ದ ದಿನ ಪತ್ರಿಕೆಗಳನ್ನೆಲ್ಲ ತರಿಸಿದಳು, ಎಲ್ಲೆಲ್ಲೂ ...ದೇ ರೀತಿಯಾದ ಪ್ರಶಂಸೆ! 'ನಾಟಕದ ನವೋದಯ' 'ಸುಸಂಸ್ಕೃತ ಮಹಿಳೆಯ ಕಲಾ ಪ್ರತಿಭೆ' ಎಂದು ಬೇರೆ ಬೇರೆ ಶಿರೋನಾಮೆಗಳ ಕೆಳಗೆ ...ಉದ್ದವಾದ ವಿಮರ್ಶೆ. 'ಒಂದೇ ರಾತ್ರಿಯಲ್ಲಿ ಹಿಂದಿನ ಖ್ಯಾತಿಯ ಹತ್ತರ...ಷ್ಟು, ನೂರರಷ್ಟು ಬಂದು ಬಿಟ್ಟಿತು' ಎಂದು ಹಿಗ್ಗಿದಳು.

ತರೀಕೆರೆಯಲ್ಲಿ ರಾಜನೂ ಪತ್ರಿಕೆಯ...ನ್ನು ತಿರಿವಿಹಾಕುತ್ತ ಇದನ್ನು ಕಂಡಾಗ ಅವಳಿಗೆ ಥಳಕು ಹೊಡೆದಂತಾ...ಯಿತು. ತನ್ನ ಕಣ್ಣನ್ನೇ ನಂಬದೆ

ಉಜ್ಜಿಕೊಂಡು ಮತ್ತೆ ಮತ್ತೆ ನೋಡಿದ. ಅದೇ. ಅದೇ. ಅವನ ಎದೆ ಹೊಡೆದುಕೊಂಡಿತು, ತುಟಿ ನಡುಗಿತು, ಹಲ್ಲು ಕಚ್ಚಿತು, ಹುಬ್ಬು ಗಂಟಿಕ್ಕಿತು, ರಕ್ತ ಮುಖಕ್ಕೆ ನುಗ್ಗಿತು, ಸೊಂಟ ತಗ್ಗಿತು. ಆಶ್ಚರ್ಯ, ಕೋಪ, ವ್ಯಥೆ ಏನೇನೋ ಒಟ್ಟಿಗೆಯೇ ಉಂಟಾಗಿ ಮನಸ್ಸಿನಲ್ಲಿ ಕೋಲಾಹಲವಾಯಿತು. ಏನು ಮಾಡಬೇಕೆಂದು ತೋಚದೆ ಹಾಗೇ ಕುರ್ಚಿಯಲ್ಲಿ ಒರಗಿ ಕುಳಿತ. ಯೋಚಿಸಿದ, ಯೋಚಿಸಿದ. ಅದೆಷ್ಟು ಹೊತ್ತು ಕುಳಿತಿದ್ದನೋ ಹಾಗೇ.

ಬುದ್ಧಿ ಕೊಂಚ ತಿಳಿಯಾದಾಗ ಬೆಂಗಳೂರಿಗೆ ತಕ್ಷಣವೇ ಹೊರಟು ಬಿಡಬೇಕೆಂಬ ಆತುರವಾಯಿತು. ಆದರೆ ತಾಯಿ ಹಾಸಿಗೆ ಹಿಡಿದು ಮಲಗಿದ್ದಳು. ಅವನು ವ್ಯವಹಾರಕ್ಕೆ ಬಂದಾಗಲೇ ಕಾಯಿಲೆಯಾಗಿದ್ದವಳ ಸ್ಥಿತಿ ದಿನದಿನಕ್ಕೂ ಕೆಡುತ್ತಿತ್ತು. ಊರನ್ನು ಬಿಡುವಂತಿರಲಿಲ್ಲ. ಕೂಡಲೇ ಕಾಗದವನ್ನು ಬರೆಯಲು ಮನಸ್ಸು ಮಾಡಿದ. ಬರೆಯುವಾಗ ಭಾವಾವೇಶದಿಂದ ಕೈ ನಡುಗುತ್ತ ಅಕ್ಷರ ಕೋಚುಪಾಚಾಗುತ್ತಿತ್ತು. ಹೇಗೋ ನಾಲ್ಕು ಸಂಗ್ತಿಗಳನ್ನು ಗೀಚಿದ.

"ಮುದ್ದು ರಂಗು,

ಪತ್ರಿಕೆಯನ್ನು ಓದಿ ನನ್ನ ಮನಸ್ಸು ಹೇಗಾಗಿದೆಯೆಂದು ತಿಳಿಸಲಾರೆ. ನೀನು ಅಷ್ಟಿಷ್ಟು ಊಹಿಸಬಲ್ಲೆಯೆಂದು ನಂಬುತ್ತೇನೆ. ವಿಷಯ ನಮ್ಮ ಮಧ್ಯೆ ಎಷ್ಟೋ ಬಾರಿ–ಸ್ವಲ್ಪ ದಿನಗಳ ಕೆಳಗೂ ಕೂಡ–ಚರ್ಚೆಯಾಗಿ ನನ್ನ ಅಭಿಪ್ರಾಯ ಸ್ಪಷ್ಟವಾಗಿದ್ದರೂ ಹೀಗೆ ದುಡುಕಿ ತಪ್ಪುಮಾಡಿ ನಮ್ಮ ಮನೆಗೆ ಕಳಂಕವನ್ನು ತಂದಿದ್ದೀಯೆ. ಈಗಲೂ ಇದೇ ಕಡೆಯಾಗಿ ಹೋಗಲಿ. ಮುಂದುವರಿಯಬೇಡ. ಇಗೋ ಬೇಡುತ್ತಿದ್ದೇನೆ. ಇಲ್ಲದಿದ್ದರೆ ಮನೆಯೊಡೆಯುವುದು ಖಂಡಿತ. ಮುಂದೆ ಇಬ್ಬರೂ ಬದುಕಿರುವವರೆಗೂ ವ್ಯಥೆಯನ್ನು ಅನುಭವಿಸಬೇಕಾಗುತ್ತದೆ. ಈ ಕಡೆಯ ಎಚ್ಚರಿಕೆಯಾದರೂ ನಿನ್ನನ್ನು ತಡೆಯಲಿ. ನಿನ್ನಿಂದ ಈ ಭರವಸೆ ಬರುವವರೆಗೂ ನಂಗೆ ಶಾಂತಿಯಿಲ್ಲ, ಸುಖವಿಲ್ಲ. ನಿನ್ನ ಕಾಗದವನ್ನೇ ಅತ್ಯಾತುರದಿಂದ ಇದಿರುನೋಡುತ್ತಿದ್ದೇನೆ.

ನಿನ್ನ
ರಾಜ"

ಕಾಗದವನ್ನು ತಾನೇ ಹಾಕಿಬಂದ.

ಇದನ್ನು ಓದಿದಾಗ ನಾಯಕಿಗೆ ಆಶ್ಚರ್ಯವಾಗಲಿಲ್ಲ. ಈ ರೀತಿಯು ದೊಂದನ್ನು ನಿರೀಕ್ಷಿಸಿದ್ದರೂ ಅದು ಇಷ್ಟು ಖಂಡಿತವಾಗಿಯೂ ಕಟುವಾಗಿಯೂ ಇರುವುದೆಂದುಕೊಂಡಿರಲಿಲ್ಲ. ಪೆಟ್ಟಿನ ನೋವು ಗೊತ್ತಾಗುವುದು ಕೊಂಚ ಹೊತ್ತಿನ ಮೇಲೇ. ಮೊದಲು ಅವಳು 'ಹುಂ, ಬರೆಯಲಿ. ನೋಡೋಣ. ದಾರಿಗೆ ತಂದರಾಯಿತು' ಎಂದು ಹಗುರವಾಗಿಯೇ ಭಾವಿಸಿದಳಾದರೂ ಮುಂದಿನ ಕ್ಷಣದಲ್ಲಿ ಆ ಕಾಗದದ ನಿರ್ಧಾರ, ಪರಿಣಾಮ ಇವು ಮುಂದೆ ನಿಂತಾಗ ಅವಳ ಎದೆ ನಡುಗಿತು, ನೊಂದಿತು, ಕಳವಳ ಹೊಂದಿತು. ಏನು ಮಾಡಬೇಕು, ಏನು ಬರೆಯಬೇಕೆಂದು ತಿಳಿಯಲಿಲ್ಲ. ಕೂಡಲೇ ಬರೆಯದೆ ಕಾಲ ತಳ್ಳಿದಳು. ಮೆಲ್ಲಮೆಲ್ಲಗೆ ಧೈರ್ಯ ಬಂದಿತು. 'ಇವರಿಗೆ ನನ್ನ ಭಾವನೆಗಳನ್ನೆಲ್ಲ ಬಿಚ್ಚಿ ತೋರಿಸಿದರೂ ಹೀಗೆ ಕಡೆಗಾಣುತ್ತಿದಾರಲ್ಲ. ಇದು ಎಂಥ ಹಟ. ಸ್ವಲ್ಪ ಯೋಚಿಸಿ ನನ್ನ ದೃಷ್ಟಿಯನ್ನು ತಿಳಿದುಕೊಳ್ಳಲು ಇಷ್ಟವಿಲ್ಲ. ನಾನೇಕೆ ಸೋಲಬೇಕು, ಇದಕ್ಕಾಗಿ ನನ್ನ ಆಸೆಗಳನ್ನು ಬಲಿಕೊಡಬೇಕು? ನನಗೆ ಇಷ್ಟು ಸ್ವಾತಂತ್ರ್ಯವಿಲ್ಲವೆ? ಇದೆಂತಹ ಬಾಳು' ಎಂದು ಸಿಟ್ಟಿನ ಕಿರಿಕಿರಿಯಾಯಿತು. 'ಅಲ್ಲದೆ ಹೀಗೊಂದು ಹೆಜ್ಜೆಯಿಟ್ಟು, ಇಷ್ಟೆಲ್ಲ ಪುರಸ್ಕಾರ ಪಡೆದು ಈಗ ಮತ್ತೆ ಹಿಂದೆ ಸರಿಯುವುದೆ? ಏನು ಹೀನಾಯ! ಇಷ್ಟಕ್ಕೂ ಯಾಕೆ, ಒಬ್ಬರ ತಪ್ಪು ತೃಪ್ತಿಗೆ. ಉಹುಂ, ನನಗಾಗಿ ನಾನು ನಿಲ್ಲಬೇಕು. ಬಂದದ್ದು ಬರಲಿ' ಎಂಬ ಹಟ. ಅವನನ್ನು ಮರ್ಯಾದೆಯ ಅಂಕುಶ ತಿವಿದಂತೆ ಇವಳನ್ನು ಆತ್ಮ ಗೌರವದ ಅಂಕುಶ ತಿವಿಯುತ್ತಿತ್ತು. ಅಲ್ಲದೆ ತನ್ನ ಇಷ್ಟವನ್ನು ಅದುವಿ ತನ್ನ ದೃಷ್ಟಿಯ ಹೊಸ ಜಗತ್ತನ್ನು ಒಡೆಯುವ ಕಲ್ಪನೆಯನ್ನೂ ಕೂಡ ಸೈರಿಸಲಾರಳು. 'ಅವರು ತಾಳ್ಮೆಯಿಂದ ಇದನ್ನು ಯೋಚಿಸಿದಾಗ, ನನ್ನ ಯತ್ನದ ಫಲವೆಂತಹದೆಂದು ಅವರೇ ಕಂಡುಕೊಂಡಾಗ, ಖಂಡಿತವಾಗಿಯೂ ಸರಿಹೋಗಿಸಿಕೊಳ್ಳುತ್ತಾರೆ. ಬರೆದಂತೆ ಎಂದಿಗೂ ಮಾಡುವುದಿಲ್ಲ' ಎಂದು ಅವನಿಂದ ಕೆಡುಕನ್ನು ನಂಬಲಾರದ ಭರವಸೆ. ಎಷ್ಟೆಷ್ಟೋ ಅಳೆದು ಸುರಿದು ಬರೆದು ಹರಿದು ಕಡೆಗೆ ಈ ಕಾಗದವನ್ನು ಹಾಕಿದಳು.

" ನನ್ನ ದೇವರೆ,

ಎಲ್ಲ ತಿಳಿದವರಿಗೆ ಏನನ್ನು ಹೇಳಲಿ? ಹೇಳುವುದಾದರೂ ಇನ್ನೇನು ಉಳಿದಿದೆ? ನನ್ನ ಹುಟ್ಟಿನ ಹವ್ಯಾಸವೇ ನಾಟಕವೆಂಬ ತಿಳಿವಳಿಕೆ ನನಗಾಗಿದೆ. ಅದನ್ನು ಬಿಟ್ಟು ಸುಖದಿಂದ ಬಾಳಲಾರೆ. ಮನೆಯ ಮರ್ಯಾದೆಗೆ ಧಕ್ಕೆ ತಗುಲದಂತೆ ನಡೆದುಕೊಳ್ಳುವ ಭಾರ ನನ್ನದು. ಬಿಡಬೇಕೆಂಬ ಬಲವಂತ ಬೇಡ. ನಿಮ್ಮ ಮಾತನ್ನು ಮೀರಿದ ಸಂಕಟ ನನಗಾಗದಿರಲಿ. ನನ್ನ ಈ ಮೊದಲ ಯತ್ನದ ಯಶಸ್ಸು ನನ್ನ ಹೆಬ್ಬಯಕೆಗಾಗಿ ನಿಮ್ಮಲ್ಲಿ ಸ್ವಲ್ಪ ಕನಿಕರ ಸಹಾನುಭೂತಿಗಳನ್ನು ಹುಟ್ಟಿಸಿದರೆ ಅದು ಅಭಿವೃದ್ಧಿ ಹೊಂದಿದಂತೆಲ್ಲ ಈ ಸಂದರ್ಭವನ್ನು ಸರಿಹೋಗಿಸಿಕೊಳ್ಳುವುದು ಸಾಧ್ಯವಾಗುತ್ತದೆ. ದಯವಿಟ್ಟು ತಾಳ್ಮೆಗೆಡದೆ ಚಿಂತಿಸಿದರೆ ನಾನು ತಪ್ಪೇನನ್ನೂ ಮಾಡಿಲ್ಲವೆಂದು ನಿಮ್ಮ ಮನಸ್ಸಿಗೆ ಬರದೆ ಇರುವುದಿಲ್ಲವೆಂಬ ಭರವಸೆ ನನಗಿದೆ. ನನ್ನ ಆಸೆಯ ಸೆಳೆತದಲ್ಲಿ ನಿಸ್ಸಹಾಯಳಾಗಿದ್ದೇನೆ. ಹೆಜ್ಜೆ ಹಿಂದಿಡುವಂತಿಲ್ಲ. ನಾವು ಸೇರಿದಾಗ ಎಲ್ಲವನ್ನೂ ತಿಳಿಸುತ್ತೇನೆ. ಅಲ್ಲಿಯವರೆಗೆ ಸಮಾಧಾನದಿಂದಿರಬೇಕೆಂದು ಬೇಡುತ್ತೇನೆ. ಮಾ|| ಅತ್ತೆಯವರು ಹೇಗಿದ್ದಾರೆ? ಬರುವುದು ಯಾವಾಗ?

ಹೇಗೆ ಬರೆಯಬೇಕೆಂದು ತೋಚದೆ ಭಾಷೆ ತಪ್ಪಿದ್ದರೆ ಕ್ಷಮಿಸಿ.

ನಿಮ್ಮವಳೇ
ರಂಗು."

ರಾಜ ಕಾಗದವನ್ನು ಬರೆದ ಮೇಲೆ ಅವನಿಗೆ ಉತ್ತರದ ಯೋಚನೆಯೇ ಆಗಿತ್ತು. 'ಒಪ್ಪಿಕೊಂಡಾಳು' ಎಂಬ ಆಸೆ, 'ಒಪ್ಪದಿದ್ದರೆ?' ಎಂಬ ಭಯ. ಒಪ್ಪಿಕೊಂಡರೆ ಎಂಥ ಪ್ರೇಮ ಸೂಸುವ ಕಾಗದವನ್ನು ಬರೆಯಬೇಕೆಂದು ಯೋಚಿಸಿಕೊಳ್ಳುತ್ತಿದ್ದ, ತನ್ನ ಬುದ್ಧಿವಂತಿಕೆಯನ್ನೆಲ್ಲ ಖರ್ಚುಮಾಡುತ್ತಿದ್ದ. ಅವನ ಬುದ್ಧಿಯಲ್ಲಿ ಈ ಕಾಗದದ ಗಾತ್ರ ಗಳಿಗೆ ಗಳಿಗೆಗೂ ಬೆಳೆಯುತ್ತಿತ್ತು–ಹನುಮಂತನ ಬಾಲದಂತೆ. ಹಾಗೇ ಒಪ್ಪದಿದ್ದರೆ ಏನು ಬರೆಯಬೇಕೆಂಬುವ ಚಿಂತೆ. ಯಾವ ರೀತಿಯೂ ಅವನಿಗೆ ಒಪ್ಪಲಿಲ್ಲ. ಎಷ್ಟೆಷ್ಟೋ ವಾದ ಪುಸಲಾವಣೆಗಳನ್ನೆಲ್ಲ ಯೋಚಿಸಿಕೊಂಡ. ಆದರೆ ಎಲ್ಲವೂ ಹಳೆಯವೇ ಹೇಳಿದುವೇ ಎಂದೆನ್ನಿಸಿತು. ಕಡೆಗೆ ಏನು

ಬರೆವೇನೆಂದು ನಿರಾಸೆ ಹೊಂದಿ ಸಂಕ್ಷೇಪವಾಗಿರುವುದೆಂದೇ ತೀರ್ಮಾನಿಸಿದ. ಅವಳ ಕಾಗದ ತಲ್ಪಿದಾಗ ಅವನಿಗೆ ಸಿಟ್ಟೇ ಬಂದಿತು. ಕಾಗದವನ್ನು ನಿಧಾನವಾಗಿ ಕಿವುಚಿ ಉಂಡೆಮಾಡುತ್ತ 'ಎಂಥ ಹಟ, ಎಂಥ ಅವಿವೇಕ!' ಎಂದುಕೊಂಡು ತನ್ನಲ್ಲೇ ಕೂಗಾಡಿಕೊಂಡ. ಆದರೆ ಕೂಡಲೇ ಬರೆಯಲು ಮನಸ್ಸಾಗಲಿಲ್ಲ. ಆ ರಾತ್ರಿಯೆಲ್ಲ ಹಾಸಿಗೆಯಲ್ಲಿ ಹೊರಳಾಡಿದ. ಹಿಂದಿನದೆಲ್ಲವನ್ನೂ ನೆನೆಸಿಕೊಂಡ. 'ಅವಳನ್ನು ಆ ಹೊಲಸಿನಿಂದ ಎತ್ತಿದ್ದನ್ನೆಲ್ಲ ಅಲಕ್ಷ್ಯಮಾಡಿಬಿಟ್ಟಿದಾಳಲ್ಲ' ಎಂದು ಕೋಪ, 'ಅಯ್ಯೋ, ಅಂಥ ಹುಡುಗಿ!' ಎಂದು ಹಿಂದೆಯೇ ಕೊರಗು, ಮರುಕ. 'ನಾನೇನು ಮಾಡಲಿ, ಅವಳೇ ಆರಿಸಿಕೊಂಡಿದಾಳೆ. ಅನುಭವಿಸಲಿ' ಎಂಬ ಸಿಡ್ಕಾರ. 'ಛೇ, ಬೇರೆ ದಾರಿಯಿಲ್ಲವೆ?' ಎಂದು ಹಿಂದೆಯೇ ವ್ಯಥೆ. 'ಉಹುಂ, ಏನಾದರೂ ಆಗಲಿ, ಖಂಡಿತವಾಗೇ ಇರಬೇಕು, ಆಗಲಾದರೂ ಬುದ್ಧಿ ಬಂದೀತು. ಮರ್ಯಾದೆಯನ್ನಂತೂ ಮತ್ತೊಮ್ಮೆ ಒಗೆಯಲು ಸಿದ್ಧನಿಲ್ಲ. ನನ್ನ ಮರ್ಯಾದೆ, ಮಗನ ಭವಿಷ್ಯ, ಅವಳ ಸುಖ........ಉಹುಂ, ಅವಳಿಗೆ ಸೋಲುವ ಹಾಗಿಲ್ಲ. ನಾನು ಸರಿಯಾಗಿ ಹೇಳಿದೀನಿ. ಬರೆದಿದೀನಿ. ಹಿಂತಿರುಗಿಸುವಂತಿಲ್ಲ' ಎಂದು ತೀರ್ಮಾನ. 'ಇದಕ್ಕಾದರೂ ಬಗ್ಗಿಯಾಳೋ? ಹುಂ, ಸನ್ನಿ ಬಿಡಬೇಕಾದರೆ ಚಿಟಕಿ ಹಾಕಬೇಕಾದೀತು' ಎಂದು ಸಮಾಧಾನ. ಅಂತೂ ಬೆಳಿಗ್ಗೆ ಮನಸ್ಸುಮಾಡಿ ಬರೆದೇಬಿಟ್ಟ.

"ಪ್ರಿಯೆ ರಂಗು,

ನನ್ನ ಬೇಡಿಕೆಯೆಲ್ಲ ವ್ಯರ್ಥವಾಯಿತು. ನನಗೆ ಇದು ಸಮ್ಮತವಲ್ಲದ ವಿಷಯವೆಂದು ಗೊತ್ತಿದ್ದರೂ ನೀನು ನಿನ್ನ ಇಷ್ಟವನ್ನೇ ನಡೆಸಲು ನಿರ್ಧರಿಸಿರುವುದರಿಂದ, ನಾವೆಲ್ಲರೂ ಇದರ ಪರಿಣಾಮವನ್ನು ತಪ್ಪಿಸಿಕೊಳ್ಳುವಂತಿಲ್ಲ. ಈಗಲೂ ನಿನ್ನಲ್ಲಿ ಬದಲಾವಣೆಯಾಗದಿದ್ದರೆ ನಮಗೆಷ್ಟು ಇಷ್ಟವಿಲ್ಲದಿದ್ದರೂ, ನೋವಾದರೂ ಇಷ್ಟು ವರ್ಷಗಳ ಪ್ರೇಮ ಸಂಸಾರವನ್ನು ಕೊನೆಗಾಣಿಸಿ, ನಾವು ಬೇರೆಯಾಗದೆ ದಾರಿಯಿಲ್ಲ. ಆ ಸಣ್ಣ ಮಗುವಿಗಂತೂ ಬಹು ದೊಡ್ಡ ಪೆಟ್ಟು. ಆದರೆ ಈ ಸಂದರ್ಭದಲ್ಲಿ ಅವನ ಅಭಿವೃದ್ಧಿಗೂ ಇದು ಬೇಕಾಗುತ್ತದೆಯೆಂದು ನನ್ನ ಅಭಿಪ್ರಾಯ. ಇನ್ನು ನನ್ನೆದೆಯನ್ನು ಕಲ್ಲು ಮಾಡಿಕೊಂಡು ನೀನು ಒಡನಿಲ್ಲದ ಬಾಳನ್ನು ನಡೆಸಲು ಯತ್ನಿಸಬೇಕಾಗುತ್ತದೆ.

ನೀನು ಅಲ್ಲೇ ಇರುವುದಾದರೆ ನಾನು ಇಲ್ಲೇ ಇರುತ್ತೇನೆ. ನೀನೇ ಬೇರೆ ಹೋಗಲು ಇಷ್ಟಪಟ್ಟರೆ ನಿನಗೆ ಬೇಕಾದುದನ್ನೆಲ್ಲ ತೆಗೆದುಕೊಂಡು ಹೋಗಬಹುದು. ಯಾವುದಕ್ಕೂ ಕೊರತೆಪಟ್ಟುಕೊಳ್ಳಬೇಡ. ಹೇಗೇ ಆದರೂ ನಮ್ಮ ಸ್ಥಿತಿಗತಿಗೆ ತಕ್ಕಂತೆ ಮಾಸಾಶನಕ್ಕೆ ಏರ್ಪಡಿಸುತ್ತೇನೆ.

ಈಗ ಒಂದು ವೇಳೆ ನನ್ನನ್ನು ನೀನು ತೊರೆದರೂ ಎಂದು ನಾಟಕ ಜೀವನವನ್ನು ಬಿಟ್ಟು ನನ್ನ ಬಳಿಗೆ ಬರುವೆಯೋ ಎಂದು ನನ್ನ ಮನೆ, ಎದೆ, ತೋಳುಗಳು ಸದಾ ತೆರೆದುಕೊಂಡಿರುತ್ತವೆ.

ಎಂದಿಗೂ ನಿನ್ನ
ರಾಜ."

ಆ ಕಾಗದವನ್ನು ಓದುತ್ತಿದ್ದಂತೆ ಅವಳ ಕಣ್ಣಿನಿಂದ ನೀರು ಕಾಗದದ ಮೇಲೆ ಪಟಪಟನೆ ಬಿದ್ದಿತು. ತೊಡೆಯ ಮೇಲೆ ಕುಳಿತಿದ್ದ ಚಂದು ತನ್ನ ತಲೆಯೆತ್ತಿ ಅವಳ ಗಲ್ಲವನ್ನು ಹಿಡಿದು ದಿಟ್ಟಿಸಿ ನೋಡುತ್ತ "ಅಕಮ್ಮ ಅತ್ತೀ ?" ಎಂದು ಕೇಳಿದ. ಅವಳು ಬೇಗಬೇಗನೆ ಸೆರಗಿನಿಂದ ಕಣ್ಣೊರಸಿ ಕೊಳ್ಳುತ್ತ "ಇಲ್ಲವಲ್ಲ, ಕಂದ. ನಮ್ಮಮ್ಮ ಚಂದೂ...." ಎಂದು ಅವನನ್ನು ಎದೆಗವುಚಿಕೊಂಡು, ತಲೆ ಸವರುತ್ತ, ಎದೆಯೊಡೆಯುವುದೋ ಎನ್ನುವಂತೆ ಬಿಕ್ಕಳಿಸಿ ಅತ್ತಳು. ಚಂದು ಕ್ಷಣಕಾಲ ಬೆರಗಾಗಿ ನೋಡುತ್ತಿದ್ದು ತಾನೂ ಅಳಲು ಮೊದಲುಮಾಡಿದ. ದಾದಿ ಬಂದಾಗ ನಾಯಕಿ ಅಳುವನ್ನು ಮರೆಸಿ ಕೊಂಡು ಚಂದುವನ್ನು ಸಮಾಧಾನಪಡಿಸಿದಳು. ಒಂದು ಬಾರಿ 'ಈ ನಾಟಕ ಹಾಳಾಗಿ ಹೋಗಲಿ. ಯಾಕೆ ಬಂತೋ ಹುಚ್ಚು, ಅವರಿಗೆ ಭರವಸೆ ಕೊಟ್ಟು ಬರೆದುಬಿಡುತ್ತೀನಿ' ಎಂದುಕೊಂಡಳು. ಚಂದುವನ್ನು ಕೆಳಗಿಳಿಸಿ ದಾದಿಗೆ ಒಪ್ಪಿಸಿ ಪಾರ್ಕಿಗೆ ಕರೆದುಕೊಂಡು ಹೋಗುವಂತೆ ಹೇಳಿ ಬರೆಯುಲು ಕಾಗದವನ್ನು ತೆಗೆದುಕೊಂಡಳು, ಒತ್ತಿನ ಪುಸ್ತಕಕ್ಕೆ ಕೈ ಹಾಕಿ ದಾಗ ಸಿಕ್ಕಿದುದು 'ಶಾಕುಂತಲ' ನಾಟಕದ ಪುಸ್ತಕ. ತಡೆದಳು. ಬರೆಯ ಲಿಲ್ಲ. ಪ್ರತಿಮೆಯಂತೆ ಎಷ್ಟೋ ಕಾಲ ಕುಳಿತಿದ್ದಳು. 'ಉಹುಂ,' ಅವಳ ಮನಸ್ಸು ಹಿಂದೆಗೆಯಿತು. 'ಇಲ್ಲ, ತಪ್ಪು ಮಾಡುತ್ತಿದೀನಿ. ನನ್ನನ್ನು ನಾನೇ ಮೋಸಮಾಡಿಕೊಳ್ಳುತ್ತಿದೀನಿ, ನನಗೆ ಅನ್ಯಾಯ ಮಾಡಿಕೊಳ್ಳು ತ್ತಿದೀನಿ. ಈಗ ಸೋಲಬಾರದು—ದೌರ್ಬಲ್ಯ. ಅವರು ಎದೆಯನ್ನು ಕಲ್ಲು

ಮಾಡಿಕೊಂಡಿಲ್ಲವೆ?' ಎಂದು ಯೋಚಿಸಿಕೊಂಡಳು. ಜಾರಿಯೇ ಹೋಗಿದ್ದ ಧೈರ್ಯ ಮತ್ತೆ ಸಿಕ್ಕಿತು. ಎಷ್ಟೋ ಹೊತ್ತು ಅಳಿದು ಸುರಿದು ಅವಳು ಕಾಗದವನ್ನು ಬರೆದಾಗ ಅದು ಹೀಗಿದ್ದಿತು.

"ನನ್ನ ದೇವರೇ,

ನಿಮ್ಮ ಧಾರಾಳ, ಪ್ರೇಮ ನನ್ನನ್ನು ಜಯಿಸಿಯೇ ಬಿಟ್ಟಿದ್ದುವು. ನನ್ನ ನಿಶ್ಚಯ ತಪ್ಪಲ್ಲವೆಂದು ನನಗೆ ಇಷ್ಟು ಖಂಡಿತವಾಗಿ ಗೊತ್ತಿರದಿದ್ದರೆ ಈ ಸೋಲನ್ನು ಸ್ವಾಗತಿಸುತ್ತಿದ್ದೆ. ಆದರೆ ನಾನು ಹುಚ್ಚಿಯೇ ಇರಬೇಕು. ಅದಕ್ಕೇ ನನ್ನ ಹುಚ್ಚಿಗಾಗಿ ನೀವು ಸೂಚಿಸುವ ಬೆಲೆಯನ್ನೂ ಕೊಡಲು ಒಪ್ಪಿಬಿಟ್ಟಿದೀನಿ. ಒದಗಿದ ದುಃಖವನ್ನು ಅನುಭವಿಸಿಯೇ ತೀರಬೇಕು.

ನಾನೇ ಮನೆಯನ್ನು ಬಿಡುವುದು ಸರಿ. ಒಂದು ತಿಳಿವಳಿಕೆಯ ಮೇಲೆ ನಾನು ಇಲ್ಲಿ ಒಡತಿಯಾಗಿದ್ದೆ. ಅದಕ್ಕೆ ಭಂಗ ತಂದು ಎಲ್ಲ ಅಧಿಕಾರವನ್ನೂ ಕಳೆದುಕೊಂಡಿದ್ದೇನೆ. ಮಾಸಾಶನಕ್ಕಾಗಲೀ ಮತ್ತೆ ಯಾವುದಕ್ಕಾಗಲೀ ನನಗೆ ಅರ್ಹತೆಯಿಲ್ಲ. ಉಟ್ಟ ಸೀರೆಯೊಂದನ್ನು ಬಿಟ್ಟು ಬೇರೆ ಯಾವುದನ್ನೂ ತೆಗೆದುಕೊಂಡು ಹೋಗಲಾರೆ. ಅಂದರೆ ಕೊರತೆಪಡುವುದಿಲ್ಲ. ನನ್ನ ಸಂಪಾದನೆ ಸಾಕಾಗಬೇಕು.

ಚಂದು ನನ್ನಷ್ಟು ನಿರ್ಭಾಗ್ಯನಲ್ಲ. ನೀವು ಇದ್ದೀರಿ. ಇನ್ನು ನೀವೇ ತಂದೆ ತಾಯಿ ಇಬ್ಬರೂ. ದಾದಿಗೆ ತಾಳ್ಮೆ ತಿಳಿವಳಿಕೆ ಎರಡೂ ಕಡಿಮೆ. ಅವಳಿಗೇ ಬಿಡಬೇಡಿ.

ಸಾಧ್ಯವಾದಷ್ಟು ಬೇಗ ಬನ್ನಿ. ನಾನು ಈ ರಾತ್ರಿಯೇ ಹೊರಟು ಹೋಗುತ್ತೀನಿ.

ನನ್ನ ತಪ್ಪು ತಿಳಿದಂದು ನಿಮ್ಮಲ್ಲಿಗಲ್ಲದೆ ಇನ್ನೆಲ್ಲಿಗೆ ಹೋಗಲಿ?

ಎಂದೆಂದಿಗೂ ನಿಮ್ಮವಳೇ
ರಂಗು"

ಕಾಗದವನ್ನು ಕಳುಹಿಸಿಬಿಟ್ಟಳು. ಆ ಸಂಜೆ ಚಂದುವನ್ನು ದಾದಿಯೊಡನೆ ಪಾರ್ಕಿಗೆ ಕಳುಹಿಸಲಿಲ್ಲ. ಅವನನ್ನು ಎಡಬಿಡದೆ ಅವನೊಡನೆ ಆಟವಾಡುತ್ತಿದ್ದಳು, ತಡೆತಡೆದು ಮಾತಾಡುತ್ತಿದ್ದಳು. ಚಂದು "ಅಮ್ಮಾ, ಸಾಕು ಬ್ಯಾಡ್ವೆ ಬ್ಯಾಡ. ನಿನ್ನೆ, ನಾಳೆ, ಇನ್ನೂ ತುಂಬ ದಿನ ಜತೇಯೇ

ಇತ್ತೀಯಾ ? " ಎಂದು ಕೇಳಿದ. ಆವಳು ತುಂಬಿದ ಕಣ್ಣುಗಳಿಂದ ನೋಡುತ್ತ ಮೇಲೆ ಕೆಳಗೆ ತಲೆಯಾಡಿಸಿ ಬಾಗಿ ಮುತ್ತಿಟ್ಟಳು, ಎತ್ತಿಕೊಂಡು ಕೋಣೆಯಲ್ಲಿ ಅತ್ತಿತ್ತ ಓಡಾಡಿದಳು. ಅಂದಿನ ಆನಂದದಲ್ಲಿ ಅವನು ಬಿಡು ವಿಲ್ಲದಂತೆ ಮಾತು ಹುರಿಯುತ್ತಿದ್ದ. ಅವಳು ಅವನ ಪ್ರಶ್ನೆಗಳಿಗೆಲ್ಲ ಸನ್ನೆ ಯಿಂದಲೇ ಉತ್ತರ ಕೊಡುತ್ತಿದ್ದಳು. ಎದೆ ತುಂಬುವ ಮಾತಾಡಿದಾಗ ಮೌನವಾಗಿ ಎದೆಗಪ್ಪಿಕೊಳ್ಳುತ್ತಿದ್ದಳು. ರಾತ್ರಿ ಊಟವನ್ನು ನಿಧಾನವಾಗಿ ಮಾಡಿಸಿದಳು. ತನಗೆ ಹಸಿವಿಲ್ಲವೆಂದು ಹೇಳಿ ಆವನೊಡನೆ ಹೊರಟು ಹೋದಳು. ಮಗುವನ್ನು ತೊಡೆಯ ಮೇಲೆ ಎಷ್ಟೋ ಹೊತ್ತು ತಟ್ಟಿದಳು. ಅವನು "ಅಮ್ಮ ಕತೆ" ಅಂದ. ಅವಳು "ನಾಳೆ ಹೇಳ್ತೀನಿ ಕಂದ. ಇವತ್ತು ಎಲ್ಲ ಮರೆತು ಹೋಗಿದೆ" ಅಂದಳು. ಅವನು "ಆಡು ?" ಎಂದು ಕೇಳಿದ. ಕಂಠದಲ್ಲೇ ಒಂದನ್ನು ಮೊದಲು ಮಾಡಿದಳು. ಅದು ಮೊದಲ ಪಲ್ಲವಿಗೇ ಕತ್ತರಿಸಿ ಹೋಯಿತು. "ಯಾಕಮ್ಮ ನಿಯ್ಯಿತಿದೆ ?" ಬಂತು ಪ್ರಶ್ನೆ. "ಗಂಟಲು ಕೆಟ್ಟುಹೋಗಿದೆಯಮ್ಮ. ಹಾಗೇ ಮಲಗಿಕೊ, ಚಿನ್ನ. ಇದನ್ನೇ ಕಲಿಯಬೇಕು–ಇನ್ನು" ಮಗುವು ಮಲಗಿ ಎಷ್ಟು ಹೊತ್ತಾದರೂ ಅವನನ್ನು ತೊಡೆಯಿಂದ ಇಳಿಸಲೇ ಇಲ್ಲ. ಹಾಗೆ ಕುಳಿತಿದ್ದಳು–ಯೋಚನೆ ಯಲ್ಲಿ ಮುಳುಗಿ. ಎಷ್ಟೋ ಹೊತ್ತಿನ ಮೇಲೆ ದಾದಿಯೇ ಬಂದು ಮಗು ವನ್ನು ಎತ್ತಿಕೊಂಡು ಹಾಸಿಗೆಯಲ್ಲಿ ಮಲಗಿಸಿದ ಮೇಲೂ ಹಾಗೆಯೇ ಕುಳಿತಿದ್ದಳು. ಮಗುವಿನ ಬಳಿ ತಾನೇ ಮಲಗುವುದಾಗಿ ದಾದಿಗೆ ಹೇಳಿ "ನೀನು ಬೇರೆ ಕಡೆ ಮಲಗಿಕೊ, ಹೋಗು. ನಾಳೆ ಮುಂಚೆಯೇ ನಾನು ಹೊರಗೆ ಹೋಗಬೇಕಾಗಿದೆ. ನಾಲ್ಕಾರು ದಿನ ಹಿಂದಿರುಗೋದಿಲ್ಲ ಅಂತ ಕಾಣುತ್ತೆ. ನಾನಿಲ್ಲದಾಗ ಮಗೂನ ಚೆನ್ನಾಗಿ ನೋಡಿಕೋಬೇಕು, ಅ ? ಅವರೂ ನಾಳೆ ಬರ್ತಾರೆ" ಎಂದಳು. ದಾದಿ "ಡ್ರೈವರಿಗೆ ಹೇಳ್ತೀನಿ, ಎಷ್ಟು ಹೊತ್ತಿಗೆ ?" ಎಂದು ಕೇಳಿದಾಗ "ಬೇಕಿಲ್ಲ. ನಾನೇ ಹೋಗ್ತೀನಿ. ಸ್ವಲ್ಪ ದೂರ ಅಷ್ಟೆ. ಅಲ್ಲಿಂದ...." ಅವಳಿಗೆ ಮುಂದೇನು ಹೇಳಬೇಕೆಂದು ತಿಳಿಯಲಿಲ್ಲ. ನಾಯಕಿಯ ಹಾಸಿಗೆಯನ್ನು ತಂದು ಮಗುವಿನ ಪಕ್ಕದಲ್ಲಿ ಹಾಸಿ ದಾದಿ ಹೊರಟುಹೋದಳು. ಯಾವಾಗಲೋ ಎದ್ದು ನಾಯಕಿ ತನ್ನ ಒಡವೆಗಳನ್ನೆಲ್ಲ ತೆಗೆದು ಪೆಟ್ಟಿಗೆಯಲ್ಲಿಟ್ಟಳು. ಸಾಧಾರಣದ ಸೀರೆಗೆ

ಬದಲಾಯಿಸಿಕೊಂಡು ಉಟ್ಟಿದ್ದ ರೇಷ್ಮೆಯ ಸೀರೆಯನ್ನು ಬೀರುವಿಗೆ ಸೇರಿಸಿದಳು. ಯಾವಾಗಲೋ ಮಗುವಿನ ಪಕ್ಕದಲ್ಲಿ ಉರುಡಿಕೊಂಡು ಅವನನ್ನು ಸೋಕುವಂತೆ ಮೆಲ್ಲಗೆ ಎಳೆದುಕೊಂಡಳು.

ನಿದ್ದೆ ಬಂದೀತೆ? ಆಗಾಗ ಕೇವಲ ಆಯಾಸದಿಂದ ಜೊಂಪು ಹತ್ತುತ್ತಿತ್ತು; ಕೆಲವು ನಿಮಿಷಗಳಲ್ಲೇ ತಟ್ಟನೆ ಎಚ್ಚರವಾಗುತ್ತಿತ್ತು. 'ಒಂದು, ಒಂದೂವರೆ, ಎರಡು' ಗಂಟೆಗಳನ್ನು ಎಣಿಸುತ್ತಿದ್ದಳು. 'ನಾಲ್ಕು!' ತಟ್ಟನೆ ಎದ್ದಳು. ದೀಪ ಹತ್ತಿಸಿ ಹತ್ತಿರದ 'ವಾಷ್ ಬೇಸನ್'ನಲ್ಲಿ ಮುಖ ತೊಳೆದು ಕುಂಕುಮವಿಟ್ಟಳು. ಮಗುವಿನ ಬಳಿಗೆ ಬಂದು ಸುಮ್ಮನೆ ದಿಟ್ಟಿಸುತ್ತ ನಿಂತುಬಿಟ್ಟಳು. 'ನಾಲ್ಕೂವರೆ!' ಬೆಚ್ಚಿದಳು. ಬಗ್ಗಿ ಮಗುವಿನ ಮುಖವನ್ನು ಮೃದುವಾಗಿ ಸವರಿದಳು. ಅವಳ ಮುಂಗೈಯ ಮೇಲೆ ಬೆಚ್ಚನೆಯ ಹನಿ ಬಿತ್ತು. ತಲೆಯನ್ನು ಹಿಂದಕ್ಕೆ ತೆಗೆದುಕೊಂಡು, ಅವನ ಹೊದಿಕೆಯನ್ನು ಸರಿಪಡಿಸಿ ಹಿಂದಿರುಗಿ ನೋಡುವ ಧೈರ್ಯವಿಲ್ಲದೆ ಬಾಗಿಲನ್ನು ಹಾಯ್ದುಬಿಟ್ಟಳು. ಪಕ್ಕದಲ್ಲಿದ್ದ ತಮ್ಮಿಬ್ಬರ ಕೋಣೆಗೂ ಭೇಟಿ ಕೊಡಬೇಕೆಂಬ ಮನಸ್ಸು. ಆದರೆ ತಡೆದುಕೊಂಡಳು. ಹೆಬ್ಬಾಗಿಲನ್ನು ದಾಟಿದಾಗ ಕಾವಲಿನವನು "ನಾನೂ ಬರ್ತೀನಿ, ತಾಯಿ" ಅಂದ. ಅವಳು ಅತ್ತಿತ್ತ ತಲೆಯಾಡಿಸಿದಳು. ಅವಳನ್ನು ಕಂಡು, ಅವಳೊಡನೆ ಹೋಗಲೇಬೇಕೋ ಬಾರದೋ ಗೊತ್ತಾಗದೆ ಅವನು ಬೆಪ್ಪಾಗಿ ಅವಳು ಮರೆಯಾಗುವವರೆಗೂ ಅವಳ ಕಡೆಗೆ ನೋಡುತ್ತ ನಿಂತುಬಿಟ್ಟ.

ಮುಂಜಾನೆಯಲ್ಲಿ ತಟ್ಟಿದ ಬಾಗಿಲನ್ನು ತೆರೆದು, ಕಣ್ಣುಜ್ಜಿಕೊಂಡು ನೋಡಿದಾಗ ಶಾಮಣ್ಣನಿಗೆ ದಿಗ್ಭ್ರಮೆಯಾಯಿತು. 'ಎಲ' ಎನ್ನುತ್ತ ಮತ್ತೊಮ್ಮೆ ಕಣ್ಣುಜ್ಜಿದ.

"ಅಪ್ಪ, ನಾನು ಬಂದಿದೀನಿ–ಮತ್ತೆ."

"ಮಗು! ಇದೇನಮ್ಮ ಇಷ್ಟು ಹೊತ್ತಿನಲ್ಲಿ–ಹೀಗೆ!"

"ಇಲ್ಲೇ ಇರುತ್ತೀನಿ–ನಿನ್ನ ಮಗಳಾಗಿ ಮಾತ್ರ."

"ಆ!"

ಸ್ವಲ್ಪ ಕಾಲ ಮೌನ.

"ಬಾ ಮಗು, ಒಳಗೆ," ದಾರಿ ಬಿಟ್ಟ. "ಇಲ್ಲಿಗೆ ಬಂದುಬಿಟ್ಟತೇನಮ್ಮ?"

" ನಾನೇ ಆಯ್ದು ಕೊಂಡೆ–ಇದನ್ನೂ. ಅವರ ತಪ್ಪಿಲ್ಲ."

ಶಾಮಣ್ಣನಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ. ಸುಮ್ಮನೆ ಒಳ ಗಡೆಗೆ ಹೆಜ್ಜೆಯಿಟ್ಟ. ಅವಳು ಹಿಂಬಾಲಿಸಿದಳು. ಹಜಾರಕ್ಕೆ ಬಂದಾಗ ಅದೇ ಬಿಡಾರದಲ್ಲಿದ್ದ ರಾಮಯ್ಯ, ಲಿಂಗಪ್ಪ ಮೊದಲಾದ ಕೆಲವು ನಟರು ಎದ್ದು ಬಂದರು. ಅವಳನ್ನು ನೋಡುತ್ತ " ಏನಾಯ್ತು? ಏನಾಯ್ತು? " ಎಂದರು. ಅವರ ಮಾತಿಗೆ ಉತ್ತರ ಸಿಕ್ಕಲಿಲ್ಲ.

" ಸರಿಯಾಯಿತೆ ಮಗು ? " ಶಾಮಣ್ಣ ಅನುಮಾನ ವ್ಯಥೆಗಳಿಂದ ಕೇಳಿದ.

" ತಪ್ಪಾಗಲಿಲ್ಲ.... ಸ್ವಾತಂತ್ರ್ಯ ಉಳಿಸಿಕೊಂಡಿದೀನಿ–ಸಂಸಾರವನ್ನೇ ಕೊಟ್ಟು."

" ನೀನು ತಿಳಿದೋಳಮ್ಮ. ನಿಂಗೆ ಒಪ್ಪಿಗೆಯಾದರೆ ಸರಿ."

" ನನ್ನಿಂದ ತೊಂದರೆಯೇನಾದರೂ...."

" ಛಿ! ಛೀ! ಅದರ ಯೋಚನೆ ·ಉಂಟೇನಮ್ಮ? ನನ್ನ ಬಳಿಗೆ ನೀನು ಬಂದದ್ದು ನೀನು ಹುಟ್ಟಿದಾಗ ಆದ ಹಾಗೇ ಆಗಿದೆ, ನಂಗೆ. ಇವತ್ತೇ ತಕ್ಕ ಏರ್ಪಾಡು ಮಾಡೋಣ."

ಇತರ ಗೆಳೆಯರಿಗೆ ಅವಳನ್ನು ನೋಡಿಯೇ ಸಾಕಾಯ್ತು. ಮಾ ನಾಡಿಸಲು ಮನಸ್ಸಾಗಲಿಲ್ಲ.

" ಅಪ್ಪ, ಇನ್ನೊಂದು."

" ಏನು ತಾಯಿ ? "

" ಹೀಗೇ ಇದ್ದರೆ ಹುಚ್ಚಿಯೇ ಆಗ್ತೀನೇನೋ ಅನ್ನೋ ಹಾಗಿದೆ. ಆಮೇಲೆ ನನ್ನಿಂದ ಏನೂ ಪ್ರಯೋಜನವಾಗೋದಿಲ್ಲ. ನಾನು ಬಹಳ ಮರೀಬೇಕಾಗಿದೆ–ನನ್ನನ್ನೇ, ಸಾಧ್ಯವಾದರೆ. ಹೊಸದು ಕಲೀಬೇಕಾಗಿದೆ ಬೇಗ ಬೇಗ. ನಿತ್ಯವೂ ನಾಟಕವೋ ಅಲ್ಲ ರಿಹರ್ಸಲ್ಲೋ ಏನಾದರೂ ಒಂದು ನಡೀತಿರಲಿ–ಕೊಂಚ ಕಾಲದವರೆಗೆ........ಅ ? ತುಂಬ ಸಹಾಯ ವಾಗುತ್ತೆ."

" ಆಗಲಿ. ಇವತ್ತೆ ' ಶಾಕುಂತಲ.' "

" ಓ, ಹೌದು."

" ಮುಂದಕ್ಕೆ ಹಾಕಿಬಿಡೋಣ, ಅಲ್ಲವೆ ? ಈ ಸ್ಥಿತಿಯಲ್ಲಿ...."

" ಬೇಡ....ನಂಗೆಲ್ಲ ಪಾಠವಾಗಿದೆ. ರಂಗದ ಮೇಲೆ ನನ್ನೇ ಮರೀಬಲ್ಲೆ ಅಂತ ಅನ್ನಿಸುತ್ತೆ," ಸ್ವಲ್ಪ ಹೊತ್ತು ಯೋಚಿಸಿ ನಿರ್ಧರಿಸಿದಳು.

ಶಾಮಣ್ಣ 'ವಿಚಿತ್ರ!' ಎಂದುಕೊಂಡ.

ಆ ದಿನವೇ ನಟವರ್ಗದವರೆಲ್ಲ ಬೇರೆಯ ಮನೆಗೆ ಬದಲಾಯಿಸಿ ಕೊಂಡರು. ತಂದೆ ಮಗಳ ಸಂಸಾರ ಮೊದಲಾಯಿತು. ಕ್ರಮೇಣ ಆ ಮಾತು ಈ ಮಾತಿನಿಂದ ಅವಳ ಕತೆಯೆಲ್ಲ ಶಾಮಣ್ಣನಿಗೆ ತಿಳಿಯಿತು.

'ಸತ್ಯವಾನ್-ಸಾವಿತ್ರಿ'ಗೆ ಮಾಡಿದ ಪ್ರಕಟನೆಯೇ 'ಶಾಕುಂತಲ'ಕ್ಕೂ ನಡೆದಿದ್ದಿತು–ಅನವಶ್ಯಕವಾಗಿ. ಹಿಂದಿನ ನಾಟಕವೇ ಸಾಕಾಗಿತ್ತು. ಈ ರಾತ್ರಿ ಮಂದಿರ ಕಿಕ್ಕಿರಿದು ತುಂಬುವುದಿರಲಿ, ಎಲ್ಲೆಲ್ಲಿಂದಲೋ ತಂದ ಹಳೆಯ ಕುರ್ಚಿ, ಮುರುಕಲು ಬೆಂಚು ಸ್ಟೂಲುಗಳು, ಹರಕು ಚಾಪೆ, ಇವುಗಳ ಮೇಲೆ ಸಂದಿಗೊಂದಿಗಳಲ್ಲೆಲ್ಲ ಜನರನ್ನು ಕುಳ್ಳಿರಿಸಿದ ಮೇಲೂ ಇನ್ನೂ ಒಂದು ನಾಟಕದ ಜನ ಹೊರಗೇ ಉಳಿದರು. ಟಿಕೀಟುಗಳಿಗೆ ನೂಕು ನುಗ್ಗು ಹೇಳತೀರದಾಗಿತ್ತು. ಕೆಟ್ಟ ಜನರು ಹೆಚ್ಚುಕೊಂಡು ಎರಡು ಮೂರರಷ್ಟು ಬೆಲೆಗಳಿಗೆ ಮಾರಿದುದೂ ಉಂಟು. ನಾಟಕ ಮೊದಲಾಗುವುದು ಇನ್ನೂ ಅರ್ಧ ಗಂಟೆ ಇದ್ದಾಗಲೇ ಹೊರಗಿನ ಜನ ಪೋಲೀಸರ ಕೈಗೂ ಮಿತಿಮೀರಿಹೋಗಿ ಬಾಗಿಲನ್ನೊಡೆದು ಒಳಗೆ ನುಗ್ಗಿ ಧಾಂದಲೆ ಮಾಡುವ ಪರಿಸ್ಥಿತಿ ಬಂದುಬಿಟ್ಟಿತ್ತು. ಶಾಮಣ್ಣನಿಗೆ ದಿಕ್ಕು ತೋಚದಂತಾಯಿತು. ತಲೆ ಹಿಡಿದುಕೊಂಡು " ಅಯ್ಯೋ, ಏನು ಗತಿ ! ನಾಟಕಕ್ಕೆ ಅವಕಾಶ ಕೊಡ್ತಾರೋ ಇಲ್ಲವೋ–ನನ್ನ ಮಕ್ಕಳು ! " ಎಂದು ಬೈದಾಡುತ್ತಿದ್ದ. ಈ ವಿಷಮ ಸ್ಥಿತಿಯನ್ನು ತಿಳಿದು ನಾಯಕಿಗೆ ಹೆಮ್ಮೆ ಹೆದರಿಕೆಗಳೆರಡೂ ಆದುವು. ಅವಳು. ಯೋಚಿಸಿ ಶಾಮಣ್ಣನಿಗೆ " ನಾಳೆಯೂ ನಾಟಕ ಅಂತ ಹೇಳಿ ನೋಡಿದರೋ ? " ಎಂದು ಸೂಚಿಸಿದಳು. ಅವನು ನಟವರ್ಗವನ್ನೆಲ್ಲ ಕೇಳಿ ಹಾಗೇ ಜನರಿಗೆ ತಿಳಿಸಿದ. ಅವರು " ಟಿಕೀಟು ! ಟಿಕೀಟು ನಾಳೆಗೆ ! " ಎಂದು ಕೂಗಿಕೊಂಡರು. ಟಿಕೀಟನ್ನು ಕೊಟ್ಟ ಮೇಲೆ ಜನ ಮನಸ್ಸಿಗೆ ಬಂದಂತೆ ಬೈದುಕೊಂಡು ಹೋದರು. ನಾಟಕ ಸಾಧ್ಯವಾಯಿತು.

'ಶಾಕುಂತಲ' ಹಿಂದಿನ ನಾಟಕದಂತೆಯೇ–ಅದಕ್ಕಿಂತ ಹೆಚ್ಚಾಗಿಯೇ, ಯಶಸ್ವಿಯಾಯಿತೆಂದು ಹೇಳಲೇಬೇಕಾಗಿಲ್ಲ. ಜನರ ಉತ್ಸಾಹ, ಪ್ರೋತ್ಸಾಹ ಮೇರೆ ಮುಟ್ಟಿದಂತಿತ್ತು. ನಾಯಕಿ ನಾಟಕದ ಆವೇಶದಲ್ಲಿ ತನ್ನ ದುಃಖ, ತನ್ನನ್ನೇ ಮರೆತು ಬೇರೆಯ ಲೋಕವನ್ನೇ ಸೃಷ್ಟಿಸಿಕೊಂಡಿದ್ದುದು ನಾಟಕದವರೆಲ್ಲರಿಗೂ ಅತ್ಯಾಶ್ಚರ್ಯವನ್ನುಂಟುಮಾಡಿತ್ತು. ಶಾಮಣ್ಣ "ಇದು ಅವಳಿಗೆ ಸಾಧ್ಯವೇ, ಅನ್ನಿಸಿತ್ತಪ್ಪ" ಎಂದು ಕಡೆಯಲ್ಲಿ ಧಾರಾಳವಾಗಿ ಉಸಿರೆಳೆದಾಗ ಲಿಂಗಪ್ಪ "ಈ ಕಲೆಯ ಮೇಲೆ ಅಷ್ಟೊಂದು ಹುಚ್ಚಿಲ್ಲವೇ ಇದ್ದರೆ ಅಂಥ ಮನೆ, ಗಂಡ, ಮಗು ಎಲ್ಲಾನೂ ಬಿಟ್ಟು ಬರೋದಕ್ಕೆ ಸಾಧ್ಯವಾಗುತ್ತಿತ್ತೆ?" ಎಂದ. ಕಪೂರ್‌ಚಂದರು ಎಂದಿನಂತೆಯೇ ಬಂದು ಬೇಕಾದಷ್ಟು ಪ್ರಶಂಸೆಮಾಡಿ "ನೀವು ಹಿಂದೂಸ್ತಾನೀನೂ ಕಲೀಬೇಕಮ್ಮ. ಈ ಕಲೆ ಇನ್ನೂ ದೊಡ್ಡ ಜಗತ್ತಿಗೆ ಯೋಗ್ಯವಾದ್ದು" ಎಂದು ಹೇಳಿದರು. ಅಂತೂ ನಾಯಕಿಯ ಪ್ರಖ್ಯಾತಿಯ ಹೆದ್ದಾರಿಯಲ್ಲಿ ಇದೊಂದು ಮೈಲಿಗಲ್ಲು.

ನಾಟಕ ಮುಗಿಯುವ ಹೊತ್ತಿಗೆ ನಟರಿಂದ ಹೇಗೆ ಹೇಗೋ ನಾಯಕಿಯ ಸ್ವಂತ ಕತೆಯ ಸುಳಿವು ಜನರಿಗೆ ತಿಳಿಯುತ್ತ ಬಂದಿತ್ತು. ಪತ್ರಿಕೆಯ ನಾಯಿಗಳು ಭೇಟಿಗಾಗಿ ಕಾದಿದ್ದುವು. ನಾಯಕಿ "ನಂಗೆ ಮೈಯಲ್ಲಿ ಚೆನ್ನಾಗಿಲ್ಲ, ಕ್ಷಮಿಸಿ" ಎಂದು ಎಷ್ಟು ಹೇಳಿದರೂ ಅವರ ಗಮನಕ್ಕೆ ಬರಲೇ ಇಲ್ಲ. ಕಲೆಯ ವಿಷಯ–ಮುಖ್ಯವಾಗಿ ಅವಳು ಮನೆಯನ್ನು ತೊರೆದ ವಿಚಾರ, ಹೀಗೆ ನೂರಾರು ಪ್ರಶ್ನೆಗಳನ್ನು ಕೇಳುವುದಕ್ಕೇ ಮೊದಲು ಮಾಡಿಬಿಟ್ಟರು. ಅವಳು ತಪ್ಪಿಸಿಕೊಳ್ಳಲು ಅವಕಾಶವನ್ನೇ ಕೊಡಲಿಲ್ಲ. ಆದರೆ ನಾಯಕಿ ಏನನ್ನೂ ಹೇಳಲಿಲ್ಲ. ಅವಳ ಸ್ಥಿತಿಯನ್ನು ತಿಳಿದಿದ್ದ ಶಾಮಣ್ಣ ಅವರಿಗೆ ಅಡ್ಡ ಬಂದು "ಈಗಲ್ಲ, ಇನ್ನೊಂದು ದಿನ" ಎಂದು ಅವಳನ್ನು ಕರೆದುಕೊಂಡುಹೋದ. ಅವನಿಗೆ ಮುತ್ತಿಗೆ ಹಾಕಿದವರಿಗೆ ಬಾಯಿಗೆ ಬಂದಂತೆ ಒಂದೊಂದು ಮಾತು ಹೇಳಿ ಬೇಗನೆ ಅಲ್ಲಿಂದ ಅವಳೊಡನೆ ನುಣಿಚಿಕೊಂಡ.

ಬೆಳಿಗ್ಗೆ ಕೆಲವು ಪತ್ರಿಕೆಗಳಲ್ಲಿ "ಕಲೆಗಾಗಿ ಬಲಿದಾನ" "ಸುಸಂಸ್ಕೃತ ಮಹಿಳೆ ಕಲೆಗಾಗಿ ಮನೆಯನ್ನು ತೊರೆಯುತ್ತಾಳೆ" "ಆಶ್ಚರ್ಯ ಕಲಾಪ್ರೇಮ" "ಅದ್ಭುತ ಸಾಹಸ" ಹೀಗೆಲ್ಲ ಶಿರೋನಾಮೆಗಳ ಕೆಳಗೆ ಉದ್ದ

ವಾಗಿ ಹುಳಿ ಉಪ್ಪು ಕಾರ ಹಚ್ಚಿದ ವರದಿಗಳು ಕಾಣಿಸಿಕೊಂಡುವು. ಇನ್ನು ಕೆಲವು ಹಳದಿ ಪತ್ರಿಕೆಗಳು 'ಕಲೆ'ಯನ್ನು ಬೇಕಾಗಿ ಮರೆತು "ಮೇಲು ಸಮಾಜದ ಮಹಿಳೆ ಮನೆ ಬಿಟ್ಟಳು!" "ಗರತಿ ಗಂಡನನ್ನು ಬಿಡುತ್ತಾಳೆ!! ಗಂಡ ಹೆಂಡಿರ ಮನಸ್ತಾಪವೇ ಕಾರಣ" ಎಂದು ಮುಂತಾಗಿ ಪ್ರತಿನಿಧಿಯ ಬುದ್ಧಿ ಚಮತ್ಕಾರದಿಂದ ಹೊರಟ ಹಲವು ಕತೆಗಳನ್ನು ಕಾಣಿಸಿ ಗುಲ್ಲೆಬ್ಬಿಸಿದುವು. ಈ ಗದ್ದಲದಲ್ಲಿ ಶಾಕುಂತಲದ ವಿಶೇಷ ಪ್ರಶಂಸಾ ವಿಮರ್ಶೆಯನ್ನು ಬರೆದು ನಾಯಕಿಗೆ ಉಜ್ವಲ ಭವಿಷ್ಯ ಹೇಳಿ, ಅದೃಷ್ಟವನ್ನು ಕೋರಿದ್ದ ವರದಿಗಳನ್ನು ಓದಿದವರು ಬಹಳವಾಗಿರಲಿಲ್ಲ. ಅವಳು ಅತ್ಯುತ್ತಮ ನಟಿಯೆಂದು ಆಗಲೇ ಅವರು ನಿರ್ಧರಿಸಿಕೊಂಡಿದ್ದುದೂ ಇದಕ್ಕೆ ಒಂದು ಕಾರಣ.

-೧೦-

ನಾಯಕಿ ನಾಟಕದ ಪ್ರವಾಹದ ಮೇಲೇ ಅಷ್ಟು ಕಾಲವಾದರೂ ಆ ರಾತ್ರಿ ತೇಲುತ್ತಿರುತ್ತಿದ್ದಳೋ ಏನೋ. ಆದರೆ ಪತ್ರಿಕಾ ಪ್ರತಿನಿಧಿಗಳ ಒರಟಾಟ ಅವಳ ಮನಸ್ಸನ್ನು ತನ್ನ ಹಿಂದಿನ ಮನೆಗೆ ತಿರುಗಿಸಿತು. ಆಗಲೇ ಎಷ್ಟೋ ದಿನದಿಂದ ಬಿಟ್ಟಿದ್ದ ಹಾಗೆ ಮಗುವಿಗಾಗಿ ಅವಳ ಎದೆ ನೋಯುತ್ತಿತ್ತು. ಆದರೆ ಆ ಮನೆಗೆ ಮತ್ತೆ ಹೋಗುವಂತಿರಲಿಲ್ಲ. ಮಗು ದಾದಿಯೊಡನೆ ಸಂಜೆಯ ಹೊತ್ತು ಪಾರ್ಕಿಗೆ ಹೋಗುತ್ತಿರಲಿಲ್ಲವೆ? ಅಲ್ಲಿ ಅವನನ್ನು ಕಾಣುವುದೆಂದು ನಿರ್ಧರಿಸಿದಳು. ರಾತ್ರಿ ಬೆಳಗ್ಗೆ ಮಧ್ಯಾಹ್ನಗಳೆಲ್ಲ ಬಹಳ ನಿಧಾನವಾಗಿ ಸಾಗಿದುವು. ಸಂಜೆಯಾದೊಡನೆ ಬಾಡಿಗೆಯ ಮೋಟಾರು ಕಾರಿನಲ್ಲಿ ಬಂಗಲೆಯ ಮುಂದಿನ ಪಾರ್ಕಿಗೆ ಬಂದಳು. ಅಗೋ ಅಲ್ಲೇ ಆಡುತ್ತಿದ್ದ ಅವಳ ಚಂದು!

"ಚಂದೂ!" ಕಾರಿನಿಂದ ಹಾರಿದಳು.

"ಅಮ್ಮಾ! ಅಮ್ಮಾ!" ತಿರುಗಿನೋಡಿ ಚಂದು ಕೂಗಿಕೊಂಡು ಅವಳ ಬಳಿಗೆ ಓಡಿಬಂದ. ತಟ್ಟನೆ ಮೇಲೆತ್ತಿಕೊಂಡಳು. ಮುಖ ಸವರಿ ಅವನ ಕೆನ್ನೆಯನ್ನು ತನ್ನ ಕೆನ್ನೆಗೆ ಒತ್ತಿಕೊಂಡಳು.

"ಅಮ್ಮಾ, ಅಮ್ಮಾ...ಉಂ, ಉಂ, ಮತ್ತೆ, ಎಲ್ಲಿ ಓಗಿದ್ದೆ?"

"ಸ್ವಲ್ಪ ಕೆಲಸವಿತ್ತು ಚಿನ್ನ."

" ಬಿದಮ್ಮ, ಬೆಇಗ್ಗೆ ಎಬ್ಬಿತಯೇ ಇಯ್ಯ. ಊಟಾನೂ...."

" ಯಾರು ಮಾಡಿಸಿದರು ಮರಿ, ಊಟಾನ ? "

" ನಾನೇ, ನಾನೇ."

" ಅಯ್ಯೋ, ಬಹಳ ಹಟಮಾಡಿತವ್ವ–ನಿಮ್ಮನ್ನೇ ನೆನೆಸಿಕೊಂಡು. ಆಮೇಲೆ ಯಾರು ಮಾಡಿಸೋಕೂ ಒಪ್ಪಲೇ ಇಲ್ಲ- ತಾನೇ ಮಾಡಿತು," ದಾಧಿ ಹೇಳಿದಳು.

" ಅದು ಯಾಕಮ್ಮ ಹಟ ಮಾಡಿದೆ. ಹಾಗೆ ಮಾಡಬಾರದು ಚಿನ್ನ."

" ನೌನೇ, ನಾನೇ ಮಾದಿದೆ ಊತ. ಊಂ." ಹೆಮ್ಮೆಯಿಂದ ಹೇಳಿಕೊಂಡ.

" ಅದು ಸರಿ. ನೀನು ದೊಡ್ಡೋನಾಗ್ತಾ ಬಂದೆ ಕಂದ. ನೀನೇ ಮಾಡಬೇಕು "

" ಎಯ್ಯಮ್ಮ ನಿನ್ನ ವಾಯೆ, ಬಯೆ........" ಚಂದು ಅವಳನ್ನೇ ದಿಟ್ಟಿ ಸುತ್ತಾ ಕೇಳಿದ.

" ಏನೋ ಭಾರವಾಯ್ತು. ತೆಗೆದಿಟ್ಟದೀನಿ," ಅವನನ್ನು ಅಪ್ಪಿಕೊಂಡಳು. " ಆಡೋಣೇ ಮರಿ ? ಬಾ," ಮಾತನ್ನು ಬದಲಾಯಿಸಿದಳು. ಅವನು ಇಳಿದು ಚೆಂಡನ್ನು ತೆಗೆದುಕೊಂಡು ದೂರ_ಹೋದ, ಅವಳಿಗೆ ಎಸೆಯುವುದಕ್ಕೆ.

" ಇದೇನ್ರವ್ವ, ಅರ್ಥವೇ ಆಗೋಕಿಲ್ಲ ನಂಗೆಲ್ಲ," ದಾದಿ ಕೇಳಿದಳು. ನಾಯಕಿ ಸುಮ್ಮನೆ ಅರ್ಥಗರ್ಭಿತವಾಗಿ ಅವಳ ಕಡೆಗೆ ದೃಷ್ಟಿಸಿ ನೋಡಿ ಸುಮ್ಮನಿದ್ದಳು.

" ಪೇಪರ್‌ನಾಗೆಲ್ಲಾ ಏನೇನೋ ಬಂದಿದೆಯಂತೆ," ದಾದಿ ಮುಂದುವರಿಸಿದಳು.

" ನಿಜ ; ನಂಗೆ ಬಂಗಲೇಲಿ ಇನ್ನು ಸ್ಥಳವಿಲ್ಲ."

" ಉಂಟೇನವ್ವ, ಹಾಗಂದರೆ ! "

" ನೀನು ತಿಳೀಲಾರೆ ಚಿಕ್ಕಿ. ಅಗತ್ಯ ಬಂತು. ಅಷ್ಟು ಸಾಕು."

" ನಾನು ಏನು ಹೇಳಲವ್ವ–ತಿಳಿದೋರು ನಿಮ್ಮಂಥೋರಿಗೆ."

" ಅದಿರಲಿ. ಚಂದು ತುಂಬ ಹಟಮಾಡಿದನೆ ? "

"ಹುಂ ಕಣವ್ವ."

"ಊರಿಂದ ಕಾಗದ ಬಂತೆ?"

"ಇಲ್ಲ."

"ಅವರು ಬಂದ ಮೇಲೆ ಸರಿಹೋಗ್ತಾನೆ. ಅಲ್ಲೀವರೆಗೆ ಸ್ವಲ್ಪ ನೋಡಿಕೋ ಚೆನ್ನಾಗಿ."

ಮಗನೊಡನೆ ಆಡಿದಳು, ಮಾತಾಡಿದಳು. ಅವನನ್ನು ಮನಸ್ಸು ತೃಪ್ತಿಯಾಗುವಂತೆ ಮುದ್ದಿಸಿದಳು. ಕತ್ತಲಾಗುತ್ತ ಬಂತು.

"ಚಿಕ್ಕಿ, ಕರೆದುಕೊಂಡು ಹೋಗು ಒಳಕ್ಕೆ. ಇಬ್ಬನಿ ಬೀಳ್ತಾ ಇದೆ."

ಚಿಕ್ಕಿ ಅವನನ್ನು ಎತ್ತಿಕೊಳ್ಳಹೋದಳು.

"ಉಹುಂ, ಅಮ್ಮ."

"ಇಲ್ಲ ಕಂದ, ನೀನು ಮುಂಚೆ ಹೋಗು. ನಾನು ಸ್ವಲ್ಪ ಹೊತ್ತಿನ ಮೇಲೆ ಬರ್ತೀನಿ."

"ಉಹುಂ, ನೀನೂ."

"ನೋಡಿದೆಯಾ ಕಂದ. ಹಟ ಮಾಡಬಾರದು."

"ನೀನೂ ಬಾ."

"ನಂಗೆ ಕೆಲಸವಿದೆ ಅಂದರೆ ಒಪ್ಪಬೇಕಪ್ಪ ಮತ್ತೆ."

"ಎಲ್ಲಿಗೆ ಓಗ್ತಿ?"

"ನಾಟಕಕ್ಕೆ." ತಟ್ಟನೆ ಉತ್ತರ ಬಾಯಿಗೆ ಬಂದುಬಿಟ್ಟಿತು.

"ನಾನೂ."

"ನೋಡಿದೆಯಾಪ್ಪ."

"ನಾನೂ ನೋಡೋಕೆ."

"ನೋಡೋಕೆ ಹೋಗೋದಿಲ್ಲ ಮರಿ, ಆಡೋಕೆ."

"ನಾನೂ."

"ನೀನೂ ಆಡ್ತೀಯ ನಾಟಕಾನ?" ಅವಳಿಗೆ ಆ ಸಂಕಟದಲ್ಲೂ ನಸುನಗೆ ಬಂದಿತು.

"ಊಂ."

"ಆಗಲಿ, ಕಂದ. ಆಡೋವಂತೆ, ಸ್ವಲ್ಪ ದೊಡ್ಡೋನಾದ ಮೇಲೆ. ದೊಡ್ಡ ನಟ ಆಗೇ ಆಗ್ತೀಯ–ಆಡಿದರೆ." ಅವನ ಗಲ್ಲವನ್ನು ಮುಟ್ಟಿ, ಹಣೆಗೆ

ನೆಟ್ಟಗೆ ಮುರಿದಳು. " ಈಗ ಹೋಗು ಮರಿ, ನಿಂಗೆ ಏನಾದರೂ ಆಟದ ಸಾಮಾನನ್ನು ತೆಗೆದುಕೊಂಡು ಬರ್ತೀನಿ."

" ಏನು ? "

" ಏನು ಬೇಕು ? "

" ಕುದ್ರೆ, ಆನೆ, ಸಿಂಹ,....ಎಲ್ಲಾ."

" ಆಗಲಿ. ಹೋಗಿ ಬರಲೋ ? "

" ನಾನೂ."

" ಅಯ್ಯೋ ' ನಾನೇ.' ಏನು ಮಾಡಲಿ ಕಂದ," ಅವಳು ಅತ್ತಳು.

ಅವಳು ಅರ್ಧ ಸಮಾಧಾನಪಡಿಸಿ, ಅರ್ಧ ಬಲವಂತದಿಂದ ದಾದಿಗೆ ಕೊಟ್ಟು ಹಿಂತಿರುಗಿ ನಾಲ್ಕು ಹೆಜ್ಜೆಯಿಟ್ಟಾಗ " ಅಮ್ಮಾ! ಅಮ್ಮಾ! " ಎಂದು ಅಳುವಿನ ಕೂಗು ಕೇಳಿಸಿತು. ಕಿವಿ ಮುಚ್ಚಿಕೊಂಡು ಮೋಟಾ ರನ್ನು ಹತ್ತಿದಳು.

ಅಂದಿನಿಂದ ಪಾರ್ಕಿಗೆ ಬರಲು ಎಷ್ಟು ಆತುರವೋ ಅಷ್ಟೇ ಭಯ— ಹೇಗೆ ಬಿಟ್ಟು ಹೋಗುವುದೆಂದು. ಆದರೂ ಸಂಜೆಯಾದೊಡನೆ ಬರದೆ ತಪ್ಪುತ್ತಿರಲಿಲ್ಲ. ಹೋಗುವಾಗ ಅದೇ ಏನಾದರೂ ಸುಳ್ಳು, ಪುಸಲಾವಣೆ, ಕಡೆಗೆ ಅಳು. ಬಂದಾಗ ಏನನ್ನಾದರೂ ಆಟದ ಸಾಮಾನು ತಿಂಡಿಗಳನ್ನು ತಂದುಕೊಡುತ್ತಿದ್ದಳು. ಹೋಗುವಾಗ ಮತ್ತೆ ತರುವುದಾಗಿ ಮಾತು ಕೊಡುತ್ತಿದ್ದಳು. ಅವನು " ನೀನು ಮನೆಗೆ ಬರ್ವೋದೇ ಇಲ್ಲ. ಬತ್ತೀನಿ ಬತ್ತೀನಿ ಅಂತಿ " ಎಂದು ದೂರುತ್ತಿದ್ದ. " ಇವತ್ತು ಬತ್ತಿಯಾ ತಾಚಿ ಮಾದೋಕೆ, ಆಡು ಏಯೋಕೆ ? " ಎಂದು ಕೇಳುತ್ತಿದ್ದ. ಅವಳು ಏನಾದ ರೊಂದನ್ನು ಹೇಳಿ ಸಮಾಧಾನಪಡಿಸುತ್ತಿದ್ದಳು. ದುಃಖ ಉಕ್ಕಿ ಬಂದಾಗ ಮಾತನ್ನು ತಿರುಗಿಸುತ್ತಿದ್ದಳು, ಇಲ್ಲ ಸುಮ್ಮನಿದ್ದುಬಿಡುತ್ತಿದ್ದಳು. ಈ ಕಾಲ ದಲ್ಲಿ ದಾದಿಯಿಂದ "ಅವನು ಚೆನ್ನಾಗಿ ಮಲಗಿದ್ದನೇ ? ಊಟಮಾಡಿದನೇ ? ಹಟಮಾಡಿದನೇ ? " ಎಂದು ಮುಂತಾಗಿ ನಿತ್ಯವೂ ವಿಚಾರಿಸಿಕೊಂಡು ಬೇಕಾದ ಸಲಹೆಗಳನ್ನು ಕೊಡುತ್ತಿದ್ದಳು. ದಿನದಲ್ಲೆಲ್ಲ ಅವನಿಗೆ ಕೊಡು ತ್ತಿದ್ದ, ತಾನು ಅವನಿಂದ ಪಡೆಯುತ್ತಿದ್ದ ಸುಖವನ್ನೆಲ್ಲ ಸಂಜೆ ಸ್ವಲ್ಪ ಹೊತ್ತಿನಲ್ಲೇ ವಿನಿಮಯ ಮಾಡಿಕೊಳ್ಳುತ್ತಿದ್ದಳು. ಈ ದಿನದ ಭೇಟಿ

ಅಭ್ಯಾಸವಾಗಿಹೋಯಿತು. ಇದು ಅವಳಿಗೆ ಆಹಾರ ನಿದ್ರೆಗಳಿಗಿಂತಲೂ ಹೆಚ್ಚು.

ಒಂದು ದಿನ ರಾಜನ ತಾಯಿ ತೀರಿಕೊಂಡದ್ದು ಗೊತ್ತಾಯಿತು. ಹತ್ತು ಹನ್ನೆರಡು ದಿನಗಳ ಮೇಲೆ ಅವನು ಬರುವುದಾಗಿ ತಿಳಿಯಿತು. 'ಛೆ, ಇದೂ ಈಗಲೇ ಆಯಿತೆ' ಅಂದು ನೊಂದುಕೊಂಡಳು.

ನಾಲ್ಕನೆಯ ನಾಟಕವನ್ನಾಡಿದ ಮೇಲೆ ಒಂದು ದಿನ ಸೇಠರು ಅವಳ ಮನೆಗೇ ಬಂದು ಭೇಟಿಯಾದರು. ಹಾಗೇ ಅವಳ ಪ್ರತಿಭೆಯ ಮಾತನಾಡುತ್ತ "ನೀವು ಒಪ್ಪಿದರೆ ಒಂದು ವಿಷಯ ಮಾತಾಡಬೇಕು ಅಂತಿದೀನಿ" ಅಂದರು. ನಾಯಕಿ ಸುಮ್ಮನಿದ್ದಳು. ಅವರು "ನಾನು ಹಿಂದೇ ಸೂಚಿಸಿದೀನಿ. ನೀವು ಇಷ್ಟು ಸಣ್ಣ ಜಾಗದಲ್ಲೇ ಇರೋದು ನಿಮಗೂ ಕಲೆಗೂ ಅನ್ಯಾಯ. ಮುಂಬೈನಲ್ಲಿ ನಮ್ಮ ಕಂಪನಿಗೆ ಬರೆದಿದ್ದೆ. ಅವರೂ ಒಪ್ಪಿದಾರೆ. ಶುರುನಲ್ಲಿ ಸಾವಿರ ರೂಪಾಯಿ ಸಂಬಳ ಕೊಡೋದಕ್ಕೆ ತಯಾರಿದಾರೆ. ಮುಂದೆ ಬೇಕಾದಷ್ಟು ಹೆಚ್ಚು ಮಾಡ್ತಾರೆ; ನಾನೇ ಭರವಸೆ ಕೊಡ್ತೀನಿ. ನೀವು ಆರು ತಿಂಗಳು ಹಿಂದೂಸ್ತಾನಿ ಕಲಿಯೋದಕ್ಕೆ ಮೇಷ್ಟರನ್ನು ಗೊತ್ತುಮಾಡಿ ಎಲ್ಲ ಸಹಾಯ ಮಾಡ್ತಾರೆ. ಹೋದ ಕೂಡ್ಲೆ ಮನೆ, ಆಳು, ಎಲ್ಲ ಸಿದ್ಧವಾಗಿರುತ್ತೆ. ನೀವು ಒಪ್ಪಿಕೋಬೇಕು" ಎಂದು ವಿಷಯವನ್ನು ವಿಸ್ತಾರವಾಗಿ ವಿವರಿಸಿದರು. ನಾಯಕಿ ಎಲ್ಲವನ್ನೂ ಕೇಳಿ "ಸೇಠಜೀ, ನಿಮ್ಮ ವಿಶ್ವಾಸಕ್ಕೆ ಬಹಳ ವಂದನೆಗಳು. ಆದರೆ ನಾನು ಈ ಊರನ್ನು ಬಿಡೋ ಮಾತೇ ಇಲ್ಲ. ಇಲ್ಲಿ ನನ್ನ ಮಗೂನ ಮುಖಾನಾದರೂ ಆಗಾಗ ನೋಡ್ತಾ ಇರಬಹುದು........ಉಹುಂ, ಸಾಧ್ಯವಿಲ್ಲ" ಎಂದುಬಿಟ್ಟಳು–ಖಂಡಿತವಾಗಿ. ಇದರ ಮುಂದೆ ಸೇಠರು ಏನನ್ನು ಹೇಳಾರು? ಅವರ ಮುಖ ಪೆಚ್ಚಾಯಿತು. ಅವರು ಅವಳ ಕತೆ, ಈಗ ಸುಮಾರಾಗಿ ದಿನವೂ ಇದ್ದ ಅಭ್ಯಾಸ, ಎಲ್ಲವನ್ನೂ ತಿಳಿದಿದ್ದರು.

"ಹಾಗಾದರೆ ನಾನು ಹೆಚ್ಚು ಹೇಳಿ ಏನೂ ಪ್ರಯೋಜನವಿಲ್ಲ" ಎಂದು ಸುಮ್ಮನಾದರು.

ರಾಜ ಕರ್ಮಗಳನ್ನು ಹೇಗೆ ಹೇಗೆ ಮುಗಿಸಿದನೋ, ಅದೇ ರಾತ್ರಿಯೇ ಹೊರಟು ಊರಿಗೆ ಹಿಂದಿರುಗಿದ. ತರೀಕೆರೆಯಲ್ಲೇ ನಿತ್ಯ ತಳಮಳಕ್ಕೆ

ಸಿಕ್ಕಿದ್ದ ಮನಸ್ಸಿನಲ್ಲಿ ಈಗ, ಅಲ್ಲೋಲ ಕಲ್ಲೋಲವೇ ಆಗುತ್ತ ಮನೆ ಹತ್ತಿರವಾದಂತೆಲ್ಲ ಹೆಚ್ಚು ಹೆಚ್ಚಾಗುತ್ತಿತ್ತು. ತನ್ನನ್ನೇ ಹಿಡಿತದಲ್ಲಿಟ್ಟು ಕೊಳ್ಳಲು ಹೆಣಗುತ್ತಿದ್ದ. ಕಾರು ಪೋರ್ಟಿಕೋ ಕೆಳಗೆ ನಿಂತಾಗ ಹೆಬ್ಬಾಗಿಲ ಕಡೆಗೆ ನೋಡಿದ. ಯಾರೂ ಇಲ್ಲ. ಅವಳ ಮುಗುಳುನಗೆಯ ಮುಖದ ಸ್ವಾಗತವಿಲ್ಲ. ನಿಟ್ಟುಸಿರು ಬಿಡುತ್ತ ಇಳಿದ. ಹಜಾರದಲ್ಲಿ ಮಗು "ಅಪ್ಪಾ!" ಎನ್ನುತ್ತ ಓಡಿ ಬಂದಿತು. ಅವಳಿದ್ದರೆ ಇವನನ್ನು ಎತ್ತಿಕೊಂಡೇ ಬಂದು ಇದಿರುಗೊಳ್ಳುತ್ತಿದ್ದಳು. ಮಗು ಬಂದದ್ದೂ ಇರದವಳ ಕಡೆಗೇ ಗಮನವನ್ನು ತಂದಿತು. ಮಗುವನ್ನು ಮೌನವಾಗಿ ಎತ್ತಿಕೊಂಡು ವ್ಯಥೆಯ ನಸುನಗೆಯಿಂದ ತಲೆ ಸವರಿದ. ಅವನ ಕಣ್ಣು ಹಸಿಗೂಡಿತು.

"ಅಮ್ಮ ಇಯ್ಯ. ನಾತಕಕ್ಕೆ ಓಗಿದಾಳೆ. ನಾನೂ ಓಗ್ತೀನಿ ನಿನ್ನೆ ಥೋದ್ದ ಪಾತು ಮಾತೀನಿ........" ಮಗು ಏನೇನನ್ನೋ ಬಡಬಡಿಸಿತು. ಅವನು ಸುಮ್ಮನೆ ಎಲ್ಲಕ್ಕೂ ತಲೆದೂಗುತ್ತ ಹತ್ತಿರದ ಸೋಫದ ಮೇಲೆ ಕುಸಿದ-ಮಗುವನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತ. ಕೂಡಲೇ ಪಕ್ಕದಲ್ಲಿ ಪರಿಚಿತವಾದ, ಅಷ್ಟು ಹಿತವಾದ ಒತ್ತು, ಕೆನ್ನೆಯ ಮೇಲೆ ಬಿಸಿಯುಸಿರು, ಮೆಲು ಮಾತು-ಉಹುಂ, ಯಾವುದೂ ಇಲ್ಲ. ಎಲ್ಲ ತಣ್ಣಗೆ, ಎಲ್ಲ ಖಾಲಿ, ಎಲ್ಲ ಖಿನ್ನ. ಮಗುವೂ ಕೂಡ ಅವನನ್ನು ಎಚ್ಚರಿಸ ಲಿಲ್ಲ. ಅವನಿಗೆ ಉತ್ಸಾಹ ತರಲಿಲ್ಲ. ಅವಳ ವಿನೋದ! ನಗು! ಹೇಗೆ ಹೊಳಲು ಕೊಡಬೇಕು ಇಲ್ಲೆಲ್ಲ! ಇದೇನು ನಿಶ್ಶಬ್ದ ಈಗ! ಅವನು ಆಗ ತಾನೆ ಬಂದಿದ್ದರೂ ಸಂಭ್ರಮದ ಕೂಗಿಲ್ಲ-'ನಾರಣಪ್ಪನೋರೆ ಕಾಫಿ ತನ್ನಿ! ಸಿದ್ದ, ಸಿಗರೇಟು ತಾರೋ ದಣಿಯೋರಿಗೆ....' ಯಾವುದೂ ಇಲ್ಲ. ಸೇವಕರ ಗದ್ದಲವೇ ಇಲ್ಲ. ಸ್ಮಶಾನದ ನಿಶ್ಶಬ್ದ. ಅಡಿಗೆಯವನೂ ಮೌನವಾಗಿಯೇ ಟ್ರೇನಲ್ಲಿ ಕಾಫಿಯನ್ನು ತಂದಿಟ್ಟು ಕ್ಷಣಕಾಲವೇ ನಿಂತಿದ್ದು, ದಣಿಯ ಮುಖ ವನ್ನು ನೋಡಿ ಸುಮ್ಮನೆ ಹಿಂತಿರುಗಿದ, ರಾಜನ ಕೈ ರೇಡಿಯೋ ತಿರುಗಿಸಲು ಹೋಯಿತು; ನಿಂತಿತು. ಯಾವ ಪ್ರೋಗ್ರಾಂ? ತನಗೇನು ಗೊತ್ತು-ಎಲ್ಲ ಅವಳಿಗೇ. ಬೇಕಾಗಿಯೇ ಒಂದೊಂದು ವೇಳೆ 'ಆಕಾಶವಾಣಿ ಚೆನ್ನಾಗಿದೆ, ಟ್ರಿಚಿ ಚೆನ್ನಾಗಿದೆ' ಎಂದು ತಪ್ಪುತಪ್ಪಾಗಿ ಜಗಳ ಕಾಯುತ್ತಿದ್ದುದು ಒಂದೇ ಗೊತ್ತು ತನಗೆ.

ಏನು ಮಾಡಬೇಕೆಂದು ತೋರದೆ ಡಿಕಾಕ್ಷನ್ ಬಟ್ಟಲಿಗೆ ಬಗ್ಗಿಸಿದ. ಹುಂ, ಅವಳೇ ತನಗೆ ಕಾಫಿ ಬೆರಸಿ ಕೊಡುತ್ತಿದ್ದಳು. ಸಕ್ಕರೆ 'ಒಂದೂವರೆ ಚಮಚ ಸರಿ', 'ಇಲ್ಲ ಎರಡು' ಎಂದು ಎಷ್ಟೋ ದಿನ ಸಣ್ಣ ಜಗಳವೇ ಆಗಿತ್ತು. ಸಕ್ಕರೆ ಎಷ್ಟು ಬೇಕೆಂದು ಅವಳಿಗೇ ಗೊತ್ತಿತ್ತು. ಹೇಗೋ ಹಾಲು ಸಕ್ಕರೆಗಳನ್ನು ಹಾಕಿ ಒಂದೆರಡು ಬಾರಿ ತುಟಿಗೆ ಹಿಡಿದು ಕೆಳಗಿಟ್ಟು ಬಿಟ್ಟ. ತಟ್ಟನೆದ್ದು ಮಗುವನ್ನೆತ್ತಿಕೊಂಡು ಮಹಡಿ ಹತ್ತಿದ. ಮಗುವಿನ 'ಅಮ್ಮನ' ಮಾತಿಗೆ ಉತ್ತರ ಕೊಡಲಾರದೆ, ಸುಮ್ಮನಿರಲಾರದೆ, ಅವನ ಮಾತೇ ಸಹಿಸದಂತಾಯಿತು. ದಾದಿಯನ್ನು ಕೂಗಿ ಮಗುವನ್ನು ಅವಳಿಗೆ ಒಪ್ಪಿಸಿ ಪಾರ್ಕಿಗೆ ಕರೆದುಕೊಂಡು ಹೋಗುವಂತೆ ಹೇಳಿ, ಬಟ್ಟೆ ಬದಲಾಯಿಸಲು ಕೋಣೆಗೆ ಬಂದ. ಕೋಟನ್ನು ತಗಲುಹಾಕಲು ಹೋದಾಗ ಹತ್ತಿರದಲ್ಲೇ ಇತ್ತು ಅವಳ ನಿಲುವುಗನ್ನಡಿ. ಅವಳೇ ಆರಿಸಿಕೊಂಡಿದ್ದುದು. ಅದರ ಕಟ್ಟಿನ ಕೆತ್ತನೆಯ ಕೆಲಸಕ್ಕೆ ಮೋಸಹೋಗಿದ್ದಳು, ಹುಡುಗಿ! ಅಗೋ, ಅಲ್ಲೇ ಕನ್ನಡಿಯ ಮುಂದೆ ಹರಡಿದೆ ಅವಳ ಅಲಂಕಾರದ ಅಂಗಡಿ, ಇನ್ನೂ ಹಾಗೆಯೇ. ಪೌಡರ್ ಪಫ್, ಸೆಂಟ್, ಎಣ್ಣೆ, ಬಾಚಣಿಗೆ–ಎಲ್ಲ, ಎಲ್ಲ; ಹೇರ್‌ಪಿನ್ನೂ ಕೂಡ. ಅವನು ಮುಖ ತಿರುಗಿಸಿಕೊಂಡ. ಕನ್ನಡಿಯಲ್ಲಿ ನೋಡಿಕೊಳ್ಳಲೇ ಇಲ್ಲ. ಹುಂ, ಈ ಅಲಂಕಾರದ ವಿಷಯದಲ್ಲಿ ದಿನದಿನವೂ ಅದೆಷ್ಟು ಮಾತಾಗುತ್ತಿತ್ತು! ಅದೆಷ್ಟು ಸೂಕ್ಷ್ಮ, ಅವಳು ಈ ವಿಚಾರದಲ್ಲಿ! ಈಗಲೋ ಅವನನ್ನು ಕೇಳುವರೇ ಇಲ್ಲ. ಬಿದ್ದಿವೆ. ಒಡತಿಯಿಲ್ಲದ ಒಡವೆ. ಎಲ್ಲವನ್ನೂ ಬಿಟ್ಟು ಹೋಗಿದ್ದಾಳಲ್ಲ! ಅಲ್ಲಿಂದ ಯಾರೋ ಅವನನ್ನು ತಳ್ಳಿದ ಹಾಗಾಯಿತು. ಷರಾಯಿ, ಷೂ, ಟೈ ಯಾವುದನ್ನೂ ಬಿಚ್ಚದೆಯೇ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದುಕೊಂಡ, ಕೈ ನೀಡಿದ. ಪಕ್ಕದ ಹಾಸಿಗೆ! ಹಾಸಿದಂತೆಯೇ ಇತ್ತು. ತನ್ನ ದಿಂಬಿನಿಂದ ಅವಳ ತಲೆಯ ಕಂಪು! ಗಾಳಿ ಸುಯ್ಯೋ ಎಂದು ಬೀಸಿತು–ಅವಳು ಪಿಸಿಗುಟ್ಟುತ್ತಿದ್ದಂತೆ! ಅವನು ಪುಟನೆಗೆದಂತೆ ಎದ್ದು ಕುಳಿತ. ಉಹುಂ, ಇಲ್ಲಿರಲಾಗದು–ಈ ಮನೆಯಲ್ಲೇ. ಗಂಟೆಯೊತ್ತಿದ. ಆಳು ಬಂದ. "ಡ್ರೈವರ್‌ಗೆ ಹೇಳೋ ಕಾರು ತರೋದಕ್ಕೆ." ಆಳು ಹೋದ. ಕ್ಲಬ್ಬಿಗೆ ಯಾವ 'ಟೈ' ಹಾಕಿಕೊಂಡು ಹೋಗಬೇಕು? ಇತರ ಟೈಗಳೆಲ್ಲ ಎಲ್ಲಿ? ತನಗೆ ಗೊತ್ತಿಲ್ಲ. ಅವಳೇ

ಎಲ್ಲೋ ಇಟ್ಟಿದ್ದಳು. ಸಂದರ್ಭಕ್ಕೆ ತಕ್ಕದ್ದನ್ನು ತಂದುಕೊಡುತ್ತಿದ್ದಳು. ಟೈ ಕೊಳ್ಳುವಾಗ ಅವಳಿರಲೇ ಬೇಕಾಗಿತ್ತು. ಒಂದೆರಡು ಸಾರಿ ತಾನೇ ಸ್ವತಂತ್ರಿಸಿ ಚೆನ್ನಾಗಿ ಬೈಗಳ ತಿಂದಿದ್ದ. ಎಷ್ಟೋ ವಾಗ್ವಾದ ನಡೆದರೂ ಅವಳು ಒಪ್ಪಿದ 'ಟೈ'ಯನ್ನೇ ತಾನು ಧರಿಸುತ್ತಿದ್ದ. ಸ್ನೇಹಿತರೆಲ್ಲ ತನ್ನ ಅಭಿರುಚಿಯನ್ನು ಹೊಗಳುತ್ತಿದ್ದರು. ಈಗ ಬೇರೆಯ ಟೈಗಾಗಿ ಆ ಬೀರು ಈ ಬೀರುಗಳನ್ನೆಲ್ಲ ಎಳೆದ. ಎಲ್ಲೆಲ್ಲೂ ಅವಳ ಸೀರೆಗಳೇ, ಜಾಕೆಟ್ಟು, ಲಂಗ 'ಬಾಡಿ'ಗಳೇ. ಒಡವೆಯ ಪೆಟ್ಟಿಗೆಯೂ ಸಿಕ್ಕಿತು. ಅದೆಷ್ಟು ಆಸೆ ಅವಳಿಗೆ ಬಟ್ಟೆ ಒಡವೆಗಳೆಂದರೆ! ಎಷ್ಟು ಬಾರಿ ತಾನು ಕಠಿಣವಾಗಿ ಹೇಳಿದ್ದ. ಈಗ ಅವೆಲ್ಲವೂ ಇಲ್ಲೇ. ಇಲ್ಲೇ! 'ಅಯ್ಯೋ, ಉಟ್ಟ ಸೀರೆಯಲ್ಲೇ ಹೋಗಿ ದಾಳೆ–ನಿಜ ನಿಜ. ಬರೆದಿದ್ದ ಹಾಗೇ! ....ಟೈ ಹಾಳಾಗಲಿ. ಇದೇ ಸಾಕು.' ಬೀರುಗಳನ್ನು ದಬದಬನೆ ದಬ್ಬಿ ಮತ್ತೆ ಗಂಟೆಯೊತ್ತಿದ. ಆಳು ಬಂದಾಗ ಗದ್ಗದ ಕಂಠದಲ್ಲಿ ಕರ್ಕಶ ಸ್ವರವನ್ನು ಯತ್ನಪೂರ್ವಕವಾಗಿ ಹುಟ್ಟಿಸಿಕೊಂಡು "ಈ ಬೀರು ಗೀರು, ಅಮ್ಮಾವರದ್ದನ್ನೆಲ್ಲ ಸ್ಟೋರ್ ರೂಮಿಗೆ ಸಾಗಿಸಿಬಿಡ ಬೇಕು, ಗೊತ್ತಾಯ್ತು? ಇವತ್ತೆ" ಎಂದು ಆಜ್ಞಾಪಿಸಿ, ಕೋಟನ್ನು ಕೈಗೆ ತೆಗೆದುಕೊಂಡು ಕೋಣೆಯಿಂದ ಹೊರಗೆ ನುಗ್ಗುತ್ತಿದ್ದಾಗ ಬಾಗಿಲಿನ ಮೇಲೆ ಅವರಿಬ್ಬರ ಚಿತ್ರದಿಂದ ಅವಳು ನಸುನಗುತ್ತಿದ್ದುದು ಕಂಡಿತು. ಅದನ್ನು ಕಿತ್ತು, ಒಡೆದು, ಹರಿದುಹಾಕಿದ. ಅಲ್ಲಿದ್ದ ಬಾಕಿಯ ಚಿತ್ರಗಳಿಗೂ ಅದೇ ಗತಿಯಾಯ್ತು. ದಭಾರನೆ ಬಾಗಿಲನ್ನು ಒಡಿದುಕೊಂಡು ಮಗುವಿನ ಕೋಣೆಗೆ ನುಗ್ಗಿ ಅಲ್ಲಿ ತಾಯಿ ಮಕ್ಕಳು ಒಟ್ಟಿಗಿದ್ದ ಚಿತ್ರಗಳಿಗೂ ಅದೇ ಗತಿ ಕಾಣಿಸಿದ. ದಡದಡನೆ ಮಹಡಿಯಿಳಿದು ಹಜಾರಕ್ಕೆ ಬಂದು ಅಲ್ಲಿಯೂ ಚಿತ್ರನಾಶವನ್ನು ಪೂರ್ತಿಗೊಳಿಸಿದ. ಇಬ್ಬರೂ ಒಟ್ಟಿಗಿಲ್ಲದೆ ಬೇರೆ ಬೇರೆಯಾಗಿದ್ದ ಚಿತ್ರಗಳೇ ಇಲ್ಲದಿದ್ದು ಮನೆಯಲ್ಲಿ ಇವರಿಬ್ಬರ ಚಿತ್ರಗಳೂ ಒಟ್ಟಿಗೆ ಹಾಳಾದುವು. ಆವನ ಹುಚ್ಚಿನಿಂದ ಉಳಿದುಕೊಂಡಪ್ಪೆಂದರೆ ಚಂದು ಬೇರೆಯಾಗಿದ್ದ ಕೆಲವು ಚಿತ್ರಗಳು ಮಾತ್ರ. ನಾಯಕಿಯ ಸಾಕ್ಷಿಯನ್ನೆಲ್ಲ ದೂರ ಮಾಡಿ ರಾಜ ಮನೆಯಿಂದ ಹೊರಗಡೆಗೆ ಓಡಿದ.

ಕಬ್ಬನ್‌ಪಾರ್ಕ್ ಕ್ಲಬ್ಬಿನಲ್ಲಿ ಸ್ನೇಹಿತರು ಇವನ ಕಡೆಗೆ ಸ್ವಲ್ಪವೇ ನೋಡಿ ಮುಖ ತಿರುಗಿಸಿಕೊಂಡರು. ಒಬ್ಬಿಬ್ಬರು "ಬನ್ನಿ ಸೆಟ್ಟರೆ, ಬಹಳ

ದಿನವಾಯ್ತು" ಎಂದು ಉತ್ಸಾಹವಿಲ್ಲದ ಧ್ವನಿಯಲ್ಲಿ ಹೇಳಿದರು. ರಾಜ ಪೋಕರ್‌ಗೆ ಕುಳಿತ. ಅವನು ಸೋಲುತ್ತಿದ್ದುದೇ ಅಪೂರ್ವ. ಆದರೆ ಈಗ ಇಪ್ಪತ್ತು ನಿಮಿಷದಲ್ಲಿ ಇನ್ನೂರು ರೂಪಾಯಿ ಸೋತ. ಸಾಕಾಯಿತು. ತಲೆಗೆ ಬೆರಳನ್ನು ಸೋಕಿಸುತ್ತ "ಬುದ್ಧಿ ಕೆಟ್ಟಿದೆ" ಎಂದು ಎದ್ದ. ಸ್ನೇಹಿತರು ಅವನ ಕಡೆಗೆ ನೋಡಿ ಸುಮ್ಮನಿದ್ದರು. 'ಬಾರ್'ಗೆ ಹೋದ. ಮದ್ಯದ ಮಾಣಿಗೆ ಅತ್ಯಾಶ್ಚರ್ಯ. ಅವನು ಅಲ್ಲಿಗೆ ಹೋದದ್ದೇ ಇಲ್ಲ. ಸಂತೋಷಕೂಟಗಳ ಸಮಯದಲ್ಲಿ ಮಾತ್ರ ಜತೆಗೋಸ್ಕರ ಕೊಂಚವೇ ಕೊಂಚ ಮದ್ಯವನ್ನು ರುಚಿ ನೋಡುತ್ತಿದ್ದ, ಅಷ್ಟೆ. ಈಗ ಒಂದು ಸೀಸೆಯನ್ನೇ ತರಿಸಿದ. ಒಬ್ಬನೇ ಕುಳಿತು ಬಟ್ಟಲು ಬಟ್ಟಲಾಗಿ ಕುಡಿಯಲಾರಂಭಿಸಿದ. ಮದ್ಯ ಮರೆಸುತ್ತದೆಯೆಂಬುದನ್ನು ಕೇಳಿದ್ದ. ಕುಡಿದ, ಕುಡಿದ, ಕುಡಿದೇ ಕುಡಿದ. ಸ್ವಲ್ಪ ಹೊತ್ತಿನ ಮೇಲೆ ಗೊಜಗೊಜನೆ ಮಾತಾಡುತ್ತ, ತೂರಾಡುತ್ತ ಸೀಸೆಯೊಡನೆಯೇ ಹೊರಗೆ ಬಂದ. ಅಲ್ಲೆಲ್ಲ ಗುಲ್ಲಾಯಿತು. ಅಷ್ಟಿಷ್ಟು ಹೊತ್ತಾಗಿ ಅವನು ಸುಸ್ತಾದಂತೆ ಕಂಡಾಗ ಕೆಲವು ಸ್ನೇಹಿತರು ಸೇರಿಕೊಂಡು ಅವನನ್ನು ಕಾರಿನೊಳಕ್ಕೆ ಸೇರಿಸಿದರು. ಯಾರೋ ಒಬ್ಬಾತ "ಹೆಂಡತಿ ಓಡಿಹೋದರೆ ಇಷ್ಟೆಲ್ಲ ಪಾಡೆ?" ಎಂದು ನಸುನಕ್ಕ. ಇನ್ನೊಬ್ಬಾತ "ಕೆಲವರು ಬಹಳ ಸೂಕ್ಷ್ಮ, ಪಾಪ" ಎಂದು ಅನುತಾಪ ತೋರಿಸಿದರು. 'ಬನ್ನಿ, ಆಟ ಅರ್ಧಕ್ಕೆ ಉಳಿದಿದೆ' ಎಂದುಕೊಂಡು ಒಳಗೆ ಹೋದರು.

ಕಾರು ಬಂಗಲೆಯನ್ನು ತಲುಪಿದಾಗ ರಾಜನಿಗೆ ಗಾಢ ನಿದ್ದೆ–ಮೈಮರೆವು. ಆಳುಗಳು ಎತ್ತಿಕೊಂಡು ಹೋಗಿ ಹಾಸಿಗೆಯಲ್ಲಿ ಮಲಗಿಸಿ, ಬಟ್ಟೆ ಬದಲಾಯಿಸಿದರು. ಮದ್ಯ ನಿಜವಾಗಿಯೂ ಮರೆಸಿತ್ತು, ಅವನ ವ್ಯಥೆಯನ್ನೆಲ್ಲ. ರಾಜನಿಗೆ ಈ ಮರೆವು ನಿತ್ಯವೂ ಅವಶ್ಯಕವಾಗಿ ತೋರಿತು, ಬಾಧಿಸಿತು. ಮದ್ಯ ಅಗತ್ಯವಾಗಿ ಕೆಲವು ದಿನಗಳಲ್ಲೇ ಅಭ್ಯಾಸ ಚೆನ್ನಾಗಿ ಆಗಿಹೋಯ್ತು. 'ಬಾಟಲ್'ಗಳು ಮನೆಗೇ ಬಂದುವು.

ರಾಜ ಊರಿಗೆ ಬಂದ ಮೂರನೆಯ ದಿನವೇ ಪತ್ರಿಕಾ ಪ್ರತಿನಿಧಿಗಳು ಅವನ ಮನೆಯನ್ನು ಮುತ್ತಿಗೆ ಹಾಕಿದರು. ಅವನು ಹಜಾರದ ಸೋಫದ ಮೇಲೆ ಕುಳಿತು ಇನ್ನೂ ಜೂಗರಿಸುತ್ತಿದ್ದ. ಬಂದವರು ಯಾರೆಂದು ಆಳು

ತಿಳಿಸಿದೊಡನೆ ರೇಗಿ "ಆ! ಆ ಹೇಸಿಗೆ ಹರಡೋರು ಇಲ್ಲಿಗೂ ಬಂದರೆ? ಅವರ ಧೈರ್ಯ! ತರೀಕೆರೆಯಲ್ಲಿ ತಳ್ಳಿಸಿಕೊಂಡಿದ್ದು ಸಾಲದಾಯ್ತೋ, ಅವರಿಗೆ? ಅವರ ಮುಖದ ಮುಂದೇ ಬಾಗಿಲು ಬಡಿ. ಕಟುಕರು! ಎದೆ ಯಿಲ್ಲ. ದುಃಖದಿಂದಲೂ ದುಡ್ಡೆಳೆಯೋ ಪಾಪಿಗಳು! ಲೋಕದಲ್ಲಿ ನಡೆಯೋದೆಲ್ಲ ಇವರ ಕುಣಿತಕ್ಕೇ ಅಂತ ಕಾಣುತ್ತೆ. ಬಡಿ ಬಾಗಿಲು!" ಎಂದುಬಿಟ್ಟ. ಬಡ ಪ್ರತಿನಿಧಿಗಳಿಗೆ ಹಿಡಿಯನ್ನವೂ ಸಿಕ್ಕಲಿಲ್ಲ.

ಕಾಲ ಕಳೆದಂತೆಲ್ಲ, ಅವಳ ಬಗ್ಗೆ ಅವನ ನಿರೀಕ್ಷೆ ಆಸೆಗಳು ನಿರಾಸೆಗೆ ಎಡೆಗೊಟ್ಟಂತೆಲ್ಲ, ಅವಳಿಲ್ಲದ ಜೀವನ ಒಗ್ಗುತ್ತ ಬಂದಂತೆಲ್ಲ, ಮದ್ಯದ ಅಭ್ಯಾಸ ಹೆಚ್ಚಾದಂತೆಲ್ಲ, ಅವನ ಸವಿಯ ಸ್ವಭಾವ ಕಹಿಯಾಗತೊಡಗಿತು, ಗುಣವಾಗದ ವ್ಯಥೆ ವ್ಯಂಗ್ಯಕ್ಕೆ ತಿರುಗಿತ್ತು, ಕರಗುವ ಎದೆ ಕಲ್ಲಾಗುತ್ತ ಬಂತು, ಮರ್ಯಾದೆಯ ಕಿಚ್ಚು ಹಟದ ರೂಪವನ್ನು ಹೊಂದುತ್ತಿತ್ತು. ಕುಡುಕನಾದ, ಕಠಿಣನೂ ಆಗುತ್ತ ಬಂದ. ನಾಟಕದವರೆಂದರೆ ತಿರಸ್ಕಾರವೇ, ದ್ವೇಷವೇ ಹುಟ್ಟಿತು. ಎಂದೆಂದಿಗೂ ನಾಟಕಕ್ಕೆ, ಸಿನಿಮಾಕ್ಕೆ, ಹೋಗುವು ದಿಲ್ಲವೆಂದು ಶಪಥ ಮಾಡಿಕೊಂಡ. ಹೆಣ್ಣಿನ ವಿಷಯದಲ್ಲೇ ಆಳವಾದ ಅಪ ನಂಬಿಕೆ, ಅಪಹಾಸ್ಯಗಳು ಮನೆ ಮಾಡಿಕೊಳ್ಳುತ್ತಿತ್ತು. ಬೀಳು ಬಾಳಿನಲ್ಲಿ ಪ್ರತಿಷ್ಠೆಯೊಂದನ್ನೇ ಬೆಳೆಸಿ ತುಂಬಿಕೊಂಡು, ಅಕಾಲ ಮುಪ್ಪಿಗೆ ತುತ್ತಾಗಿ, ಸಿಡಿಕಿನ ಮುದುಕನಾಗುವ ಸೂಚನೆಗಳು ಹುಟ್ಟಿಕೊಳ್ಳುತ್ತಿದ್ದುವು.

ಒಂದು ದಿನ ನಾಯಕಿ ಪಾರ್ಕಿಗೆ ಬಂದಾಗ ಚಂದು ಇನ್ನೂ ಬಂದಿರ ಲಿಲ್ಲ. ಕಾಯುತ್ತ ಕುಳಿತಳು. ಅಷ್ಟಿಷ್ಟು ಹೊತ್ತಾಯಿತು. ಇನ್ನೂ ಬರಲಿಲ್ಲ. ಅವಳ ಕಣ್ಣುಗಳು ಬಂಗಲೆಯ ಕಡೆಗೇ ನೆಟ್ಟಿದ್ದುವು. ಸಂಜೆ ಯಾಗುತ್ತ ಬಂದರೂ ಚಂದುವಿನ ಸುಳಿವಿಲ್ಲ. 'ಏನಾಯಿತು? ಯಾಕೆ ಬರಲಿಲ್ಲ? ನನಗಿಂತ ಎಷ್ಟೋ ಮುಂದೇ ಬಂದಿದ್ದು ಕಾಯುತ್ತಿರುತ್ತಿದ್ದನಲ್ಲ? ಏನು ಕಾರಣವೋ. ಏನು ಸಂದರ್ಭವೊ ಮನೆಯಲ್ಲಿ, ಈ ದಿವಸ' ಎಂದು ಕೊಂಡಳು. ನಾಟಕಕ್ಕೆ ಹೊತ್ತಾಗುತ್ತ ಬಂತು. ನಿರಾಶಳಾಗಿ ಹಿಂದಿರು ಗಿದಳು. ಮಾರನೆಯ ದಿನ ಹೆಚ್ಚು ಆತುರ. ಇನ್ನೂ ಮುಂಚೆಯೇ ಬಂದಳು. ಕಾಯ್ದಳು, ಕಾಯ್ದಳು. ಹಿಂದಿನ ದಿನದಂತೆಯೇ. ಎಷ್ಟು ಹೊತ್ತಾದರೂ ಚಂದು ಬರಲೇ ಇಲ್ಲ. ಈ ದಿನ ನಾಟಕವಿಲ್ಲವಿದ್ದು ರಾತ್ರಿಯ

ವರೆಗೂ ಕಾಯುತ್ತಿದ್ದಳು. ಮನೆಯ ಕಡೆ ನೋಡಿದಾಗ ದೀಪವೂ ಕಾಣಲಿಲ್ಲ. 'ಏನಾಗಿದೆ? ಎಲ್ಲಾದರೂ ಹೋಗಿರಬಹುದೆ? ಏನೋ. ಅಥವ ಚಂದೂಗೆ ಮೈಯಲ್ಲಿ... ಉಹುಂ, ಇರಲಾರದು. ಹೇಗೋ. ಹೋಗಿ ವಿಚಾರಿಸಲೆ? ....ಉಹುಂ. ಅಲ್ಲಿಗೆ ಹೋಗುವುದು ಸರಿಯಲ್ಲ. ನಾಳೆ ನೋಡೋಣ.' ಆ ದಿನವೂ ಭಾರದ ಎದೆಯಿಂದ ಹೊರಟುಹೋದಳು. ಇನ್ನೆರಡು ದಿನವೂ ಇದೇ ರೀತಿ. ಚಂದುವಿನ ಸುಳಿವೂ ಇಲ್ಲ, ಬಂಗಲೆಯಲ್ಲಿ ದೀಪವೂ ಇಲ್ಲ. ಐದನೆಯ ದಿನ ಅವಳಿಗೆ ತಡೆಯಲಾಗಲಿಲ್ಲ. ಎದೆಯ ವಿಚಿತ್ರ ವೇದನೆ ಮುಂದಕ್ಕೆ ನೂಕಿತು. ಬಂಗಲೆಗೆ ಸೆಳೆದೊಯ್ದಿತು. ಬಂಗಲೆಯ ಕೈತೋಟದ ರಸ್ತೆಯಲ್ಲಿ ನಡೆದಾಗ ಕಾವಲಿನವನಾಗಲೀ ಮತ್ತೆ ಯಾರಾಗಲೀ ಕಾಣಲಿಲ್ಲ. ಅವಳ ಎದೆ ಢವಢವನೆ ಹೊಡೆದುಕೊಳ್ಳು ತ್ತಿದ್ದುದು ಅವಳಿಗೆ ಕೇಳಿಸುತ್ತಿತ್ತು. ಪೋರ್ಟಿಕೋ ದಾಟಿ ವರಾಂಡದಲ್ಲಿ ನಡೆದು ಹೆಬ್ಬಾಗಿಲಿಗೆ ಬಂದಳು. ಒಳಗೆಲ್ಲ ಕತ್ತಲೆ ಬಿಕೋ ಅನ್ನುತ್ತಿತ್ತು. 'ಹಿಂದುಗಡೆ ಯಾರಾದರೂ ಇದಾರೋ?' ಎಂದುಕೊಂಡಳು. ಕಡೆಯ ಆಶಾಕಿರಣ. ನಡುಗುವ ಕೈಗಳಿಂದ ಬಾಗಿಲನ್ನು ತಟ್ಟಿದಳು. ಆ ಶಬ್ದದ ಪ್ರತಿಧ್ವನಿ ಮನೆಯಲ್ಲೆಲ್ಲ ಸುತ್ತಿ ಮತ್ತೆ ಇವಳ ಕಿವಿಗೇ ಬಂದಿತು. "ಯಾರು! ಯಾರೂ! ...." ಆರ್ತ ಸ್ವರದಲ್ಲಿ ಕೂಗಿಕೊಂಡಳು. ಅದೇ ಹೊಳಲೇ ಉತ್ತರ. "ಅಯ್ಯೋ, ದೇವರೇ! ದೇವ...." ಮೆಲ್ಲನುಸಿರುತ್ತ ನಿಸ್ಸಹಾಯಳಾಗಿ ಅಲ್ಲೇ ಕುಸಿದುಬಿಟ್ಟಳು. ಅವಳು ಒರಗಿದ ಬಾಗಿಲು ನಡುಗಿದಂತೆ ಶಬ್ದಮಾಡಿತು, ಹೊಳಲು ತಂದಿತು. ಅಷ್ಟಿಷ್ಟು ಹೊತ್ತಾ ದರೂ ನಾಯಕಿ ಕಾರಿಗೆ ಹಿಂದಿರುಗದಿದ್ದಾಗ ಡ್ರೈವರು ತಾನೇ ಹುಡುಕಿ ಕೊಂಡು ಬಂದ. ದೂರದಿಂದ "ಅಮ್ಮಾವ್ರೆ, ಅಮ್ಮಾವ್ರೆ" ಎಂದು ಮೆಲ್ಲಗೆ ಕೂಗಿದ. ಉತ್ತರ ಬರದೆ ವರಾಂಡಕ್ಕೇ ಬಂದು ಕತ್ತಲೆಯಲ್ಲಿ ಟಾರ್ಚನ್ನು ಒತ್ತಿದ. ಬಾಗಿಲ ಬಳಿ ಬಿದ್ದಿದ್ದ ಕುಪ್ಪೆಯನ್ನು ಕೈದೀಪ ಕಾಣಿಸಿತು. ಅವನು ಗಾಬರಿಯಾಗಿ "ಅಮ್ಮಾವ್ರೆ! ಅಮ್ಮಾವ್ರೆ! ಏಳಿ ತಾಯಿ!" ಎಂದು ಗಟ್ಟಿಯಾಗಿ ಕೂಗಿದ. ಸ್ವಲ್ಪ ಹೊತ್ತಿನ ಮೇಲೆ ಕುಪ್ಪೆ ಚಲಿಸಿತು. ಅದರಿಂದ ದೀನ ದೃಷ್ಟಿಯ ಕಣ್ಣಾಳೆರಡು ಇವನ ಕಡೆಗೆ ನೋಡಿದುವು. "ಎಲ್ಲಿ, ಇವರೆಲ್ಲ ಎಲ್ಲಿ? ಚಂದೂ...." ಪಿಸಿಮಾತಿನಂತೆ ಹೊರಡದೆ ಹೊರಟ

ಸ್ವರ ಕೇಳಿಸಿತು. "ನೀವು ಕಾರಿಗೆ ಬನ್ನಿ, ತಾಯಿ. ಅಲ್ಲಿಲ್ಲಿ ವಿಚಾರಿಸಿ ಕೊಂಡು ಬರ್‍ತೀನಿ" ಅವನು ಬೇಡಿಕೊಂಡ. "ಹೋಗು, ಹೋಗು, ಕೇಳು–" ಅದೇ ಸ್ವರ ಹೇಳಿತು. ಅವನು ಹೊರಟುಹೋದ. ಅವನು ಎಷ್ಟೋ ಹೊತ್ತಿನ ಮೇಲೆ ಹಿಂದಿರುಗಿದಾಗ ಅವಳು ಕಾರಿಗೆ ಹೋಗಿದ್ದಳು.

"ಯಜಮಾನರು ಊರನ್ನೇ ಬಿಟ್ಟುಬಿಟ್ಟರಂತೆ ತಾಯಿ," ಡ್ರೈವರ್ ಕುಳಿತುಕೊಳ್ಳುತ್ತ ಹೇಳಿದ.

"ಆ!" ಅದೇ ಹ್ರಸ್ವ ಸ್ವರವೇ, ಹಿಂದಿನಿಂದ.

"ಮನೇನೂ ಮಾರಿಬಿಟ್ಟು ಆಳು ಕಾಳು ಎಲ್ಲ ವಜ ಮಾಡಿ ಬಿಟ್ಟರಂತೆ."

"ನಿಜವೇ ?"

"ಎರಡು ಮೂರು ಮನೇಲಿ ವಿಚಾರಿಸಿದೆ."

"ಎಲ್ಲಿ, ಎಲ್ಲಿಗೆ...."

"ಅದು ಯಾರಿಗೂ ಗೊತ್ತಿಲ್ಲ. ಮನೆಯೋರಿಗೂ ಹೇಳಲೇ ಇಲ್ಲ ವಂತೆ. ಹೋಗಿ ಆಗಲೇ ನಾಲ್ಕು ದಿನವಾಯ್ತಂತೆ."

ಅವನಿಗೊಂದು ಬಿಕ್ಕಳಿಕೆ ಕೇಳಿಸಿತು. ಕಾರು ನಡೆಯುತ್ತಿರುವಾಗಲೂ ಬಾಯೊತ್ತಿದ ಅಳು ಕೇಳಿಸುತ್ತಿತ್ತು.

ಮೂರು ದಿನಗಳ ಮೇಲೆ ನಾಯಕಿಗೊಂದು ಕಾಗದ ಬಂತು.

"ರಂಗು,

ನಮನಮಗೆ ಸಂಪರ್ಕವಿಲ್ಲದಿರುವುದೇ ಎರಡು ಕಡೆಗೂ ಸರಿಯಾದ ದ್ದೆಂದು ಬೆಂಗಳೂರನ್ನು ಎಂದೆಂದಿಗೂ ಬಿಟ್ಟುಬಿಟ್ಟದ್ದೇನೆ. ನನಗೆ ಹೇಗೆ ನನ್ನ ಹೆಂಡತಿ ನಟಿಯಾಗಿದ್ದಾಳೆಂಬುದನ್ನು ಮರೆಯಲು ಇಷ್ಟವೋ, ಹಾಗೇ ಚಂದುವಿಗೂ ಅವನ ತಾಯಿ ನಟಿಯಾಗಿದ್ದಾಳೆಂದು ತಿಳಿಯಲೇ ಕೂಡ ದೆಂದು ನನ್ನ ಇಚ್ಛೆ. ಇದು ಅವನ ಅಭಿವೃದ್ಧಿಗೆ ಒಳ್ಳೆಯದೆಂದು ನನ್ನ ದೃಢವಾದ ನಂಬಿಕೆ. ಈ ಬಗ್ಗೆ ನಿನ್ನ ಸಹಕಾರ ಬೇಕು. ನೀನು ನಮ್ಮನ್ನು ಹುಡುಕುವ ಯತ್ನವನ್ನು ಮಾಡದಿರಬೇಕು. ಅವನಿಗೆ ನಿಜಸ್ಥಿತಿ ತಿಳಿಯಲೂ ಕಾರಣವಾಗಬಾರದು. ಇದನ್ನಾದರೂ ಖಂಡಿತವಾಗಿ ನಡೆಸಿಕೊಡು ; ಇಲ್ಲ ದಿದ್ದರೆ ಅನರ್ಥವೇ ಸಂಭವಿಸೀತು. ಎಚ್ಚರಿಸಿದ್ದೇನೆ.

ನೀನು ನಮ್ಮಲ್ಲಿಗೆ ಹಿಂದಿರುಗಬೇಕೆಂದಾಗ ಮುಖ್ಯ ಪತ್ರಿಕೆಗಳಲ್ಲೆಲ್ಲ ಹಾಕಿಸು. ನಾನು ಇದನ್ನೇ ನೋಡುತ್ತಿರುತ್ತೇನೆ.

ರಾಜ."

ವಿಳಾಸವಿಲ್ಲ, ತಾರೀಕಿಲ್ಲ. ಕವರನ್ನು ತಿರುಗಿಸಿ ನೋಡಿದಳು ಬೊಂಬಾಯಿನ ಮುದ್ರೆ ಕಾಣಿಸಿತು. ಈಗ ಅವಳಿಗೆ ಅಳು ಬರಲಿಲ್ಲ. ಕಾಗದವನ್ನು ಹಾಗೇ ಹಿಡಿದುಕೊಂಡು ಕಲ್ಲಿನಂತೆ ಕುಳಿತುಬಿಟ್ಟಳು—ಎಷ್ಟೋ ಹೊತ್ತು. ಈ ಛಳುಕು ತಲೆಯನ್ನು ಖಾಲಿ ಮಾಡಿತ್ತು. ಭಾವನೆಗಳು ಅಳಿಸಿಹೋಗಿದ್ದುವು. ವ್ಯಥೆಗೂ ಅವಕಾಶವಿಲ್ಲ—ಅಷ್ಟು ಹೊತ್ತು. ಈ ಮೂಕ ಪೆಟ್ಟಿನಿಂದ ಚೇತರಿಸಿಕೊಂಡು, ನೋವು ಕಂಡು, ದೊಡ್ಡ ಜಗತ್ತೇ ತಲೆಯೊಳಗೆ ಹಾಯ್ದು, ತಡೆಯೊಡೆದ ಕೆರೆಯ ನೀರಿನಂತೆ ಅವಳ ಎದೆಯ ದುಃಖ ರಭಸದಿಂದ ಹರಿದಾಗ ಅವಳಿಗೆ ನಿಜವಾಗಿಯೂ ಪರಿಹಾರವೇ ಆದಂತೆ ಆಯಿತು.

ಮಾರನೆಯ ದಿನ ಪ್ರಹ್ಲಾದಚರಿತ್ರೆಯಲ್ಲಿ 'ಕಯಾದು'ವಿನ ಮುಖದ ಮೇಲೆ ಕಂಡ ವ್ಯಥೆ, ನೋವು, ಸಹನೆಗಳ ಮುದ್ರೆಯನ್ನು ಕಂಡು ಜನ ಬೆರಗಾದರು. ಬತ್ತಿದ ಮುಖ, ನಿಸ್ತೇಜವಾದ ಕಣ್ಣುಗಳು, ಗದ್ಗದ ಧ್ವನಿ ಇವು ದೃಶ್ಯಗಳ ಮಧ್ಯೆ ಚರ್ಚೆಗೆ ಕಾರಣವಾದುವು. 'ಇದೇನು ನಿಜವೋ, ಅಭಿನಯವೋ?' 'ಏನಾದರೂ ಸ್ವಂತ ದುಃಖ ಒದಗಿದೆಯೇ?' 'ಮೈಯಲ್ಲಿ ಚೆನ್ನಾಗಿಲ್ಲವೆ?' ಎಂಬ ಪ್ರಶ್ನೆಗಳು ಎದ್ದುವು. ತೃಪ್ತಿಕರವಾದ ಉತ್ತರ ದೊರೆಯಲಿಲ್ಲ. ಪ್ರಹ್ಲಾದನ ವಿಷಪಾನದ ದೃಶ್ಯವಂತೂ ಮೊದಲಾದುವೇ ಹೃದಯಭೇದಕವಾಗಿತ್ತು. ತಾಯಿ ಮಗನಿಗೆ ವಿಷದ ಬಟ್ಟಲನ್ನು ಕೊಟ್ಟು ಅತ್ತ ನೋಡಲಾರದೆ ಕಣ್ಣಿಗೆ ತೋಳನ್ನು ಮರೆಮಾಡಿ, ತಲೆ ತಿರುಗಿಸಿ ಬಿದ್ದುಬಿಡುವಂತೆ ದೇಹವನ್ನು ಬಗ್ಗಿಸಿ ತತ್ತರಿಸುತ್ತ "ಅಯ್ಯೋ, ಕಂದ, ಲೋಕದಲ್ಲಿ....ಹೆಣ್ಣಾದವಳು—ಹಲವು ಕಾಲ ಹಂಬಲಿಸಿ....ಪೂಜೆ, ವ್ರತಗಳನ್ನು ಮಾಡಿ........ಹರಕೆ ಹೊತ್ತು, ಸಂತಾನವನ್ನು ಹೊಂದಿ ಸಂತೋಷದಿಂದ ಮೈಮರೆತಿರುತ್ತಾಳೆ........ಮುಂದೆಂದೂ ಅವಳಿಗೆ ಒದಗಿದ ದುಃಖದ ಕತ್ತಲೆಯಲ್ಲಿ ಅದೇ ನಂದಾದೀಪ, ಮುಪ್ಪನ್ನು ಮರೆಸುವ ಅಮೃತ....ಆದರೆ, ಆಹಾ ನಾನೆಂಥ ನಿರ್ಭಾಗ್ಯೆ!....ನಿರ್ವಾಹವಿಲ್ಲದೆ........

ಕಠಿಣ ಮನಸ್ಕಳಾಗಿ....ಕೈಯಾರ....ಸ್ವಂತ ಕೈಗಳಿಂದಲೇ....ನನ್ನ ಒಂದೇ ಒಂದು ಹಸುಳೆಯನ್ನು ಕಳೆದುಕೊಳ್ಳುತ್ತಿರುವೆನಲ್ಲಾ...." ಎಂದು ಹೇಳುತ್ತ ಹೇಳುತ್ತ ಆಯುಗಾಣದೆ ಬಿದ್ದೇ ಬಿಟ್ಟಳು. ಪ್ರೇಕ್ಷಕವೃಂದ ಉಸಿರು ಹುಯ್ಯದೆ ನೋಡುತ್ತಿತ್ತು. ನಾಟಕದವರೂ ತಮ್ಮನ್ನು ತಾವು ಮರೆತಿದ್ದರು. ಇಂತಹ ಅಭಿನಯವನ್ನು ಅವರೂ ಕಂಡಿರಲಿಲ್ಲ. ಕ್ಷಣಕಾಲ ಮಂದಿರವೆಲ್ಲ ಸ್ತಬ್ಧವಾಗಿತ್ತು. ಪ್ರಹ್ಲಾದ ವಿಷಕುಡಿದು ತಾಯಿಯನ್ನು ಮಾತಾಡಿಸಿದಾಗ ಅವಳು ಏಳಲಿಲ್ಲ, ಮಾತಾಡಲಿಲ್ಲ. ನಾಟಕದವರಿಗೆ ಗಾಬರಿಯಾಯಿತು. "ಮೂರ್ಛೆ! ಮೂರ್ಛೆ!" ಎಲ್ಲೆಲ್ಲೂ ಕೂಗುಗಳು, ಅಂಕದ ಫರದೆ ಕೆಳಗೆ ಬಿತ್ತು. ನಾಟಕದವರೂ, ಕೆಲವು ಪ್ರೇಕ್ಷಕರೂ ರಂಗದೊಳಕ್ಕೆ ನುಗ್ಗಿದರು. ಶೈತ್ಯೋಪಚಾರ ಮೊದಲಾಯಿತು. ಪ್ರೇಕ್ಷಕರಲ್ಲಿ ಗುಜುಗುಜು, ಆದರೆ ಎದ್ದು ಯಾರೂ ಗಲಭೆ ಮಾಡಲಿಲ್ಲ. ಅವರು ಪ್ರಶಂಸಾ ಚರ್ಚೆಯಲ್ಲಿ ಮುಳುಗಿದ್ದರು. ಹಲವು ನಿಮಿಷದ ಮೇಲೆ ನಾಯಕಿ ಕಣ್ಣು ತೆರೆದಳು. ಏನಾಗಿತ್ತೆಂದು ಅವಳಿಗೇ ಆಶ್ಚರ್ಯ. ಇನ್ನೂ ಕೆಲವು ನಿಮಿಷ ಕಳೆದಮೇಲೆ ಶಾಮಣ್ಣ "ಏನು ಮಗು, ನಾಟಕ ನಿಲ್ಲಿಸಿಬಿಡೋಣ ಇಲ್ಲಿಗೆ, ಅಲ್ಲವೆ? ನಾಳೆ ಮತ್ತೆ ಇದನ್ನೇ ಆಡಿದರಾಯ್ತು" ಎಂದಾಗ ಅವಳು "ಯಾಕೆ? ಏನೋ ತಲೆ ಸುತ್ತಿರಬೇಕು, ಅಷ್ಟೆ. ಈಗ ಹುಷಾರಾಗಿದೀನಿ" ಎಂದಳು. ಶಾಮಣ್ಣ ಅಂಕದ ಫರದೆಯ ಮುಂದೆ ಬಂದು, ನಾಯಕಿ ಎಚ್ಚೆತ್ತ ಸಮಾಚಾರವನ್ನು ತಿಳಿಸಿದಾಗ ಜನರು ಚಪ್ಪಾಳೆ ತಟ್ಟಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅವನು ನಾಟಕವನ್ನು ಮುಂದುವರೆಸಲು ಅವಳು ಒಪ್ಪಿರುವುದಾಗಿ ತಿಳಿಸಿದಾಗಲಂತೂ ಚಪ್ಪಾಳೆ, 'ಭೇಷ್! ಭಲೆ!'ಗಳ ಕೂಗಿಗೆ ಕೊನೆಯಿಲ್ಲವಾಯಿತು.

ನಾಟಕವಾದ ಮೇಲೆ ಮತ್ತೆ ಕಪೂರ್‌ಚಂದರು ಅವಳ ಕೋಣೆಯಲ್ಲಿ ಭೇಟಿಯಾಗಿ "ಓ, ಈ ದಿನವಂತೂ, ವಿಷಪಾನದ ಸೀನ್ ಅಂದರೆ........" ಎಂದು ಸರಿಯಾದ ಪದಗಳು ಸಿಕ್ಕದೆ ನಿಲ್ಲಿಸಿ "ಹುಂ, ಇಂಥ ಅದ್ಭುತ ಶಕ್ತೀನ, ಇಲ್ಲೇ ಕಳೆದುಬಿಡುತ್ತಿದೀರಲ್ಲ ಅಂತ ವ್ಯಸನ ನಂಗೆ" ಎಂದು ಹೇಳಿದರು.

"ಸೇಠರೆ, ಅದು ಬರಿಯ ಅಭಿನಯವಲ್ಲ. ನಿಜಾಂಶವೂ ಇತ್ತು" ಅವಳು ತಡೆತಡೆದು ನೋವಿನಿಂದ ಹೇಳಿದಳು.

"ಅಂದರೆ?" ಸೇಠರು ಆತಂಕದಿಂದ ಕೇಳಿದರು.

ಅವಳು ಉತ್ತರ ಕೊಡಲಿಲ್ಲ. ಕೊಡಲಾಗಲಿಲ್ಲ. ಎದೆ ಮಾತ್ರ ಎದ್ದೆದ್ದು ಬೀಳುತ್ತಿತ್ತು. ಬುಸುಗುಟ್ಟುವ ಸರ್ಪವನ್ನು ಮೆಟ್ಟಿದಂತೆ ಅವಳು ತನ್ನ ಒಳಗಿನ ದುಃಖವನ್ನು ಅದುಮುತ್ತಿದ್ದಳು.

"ಗಂಡ ಮಗು ಇಬ್ಬರೂ ಎಲ್ಲೋ ಹೊರಟುಹೋಗಿದಾರೆ–ಕಾಣ ವಂತೆ," ಅಲ್ಲಿದ್ದ ಶಾಮಣ್ಣನೇ ಸೇಠರಿಗೆ ಉತ್ತರ ಹೇಳಿದ.

"ಹೊರಟುಹೋಗಿದಾರೆ! ಎಲ್ಲಿ ಹೋಗ್ತಾರೆ? ಪತ್ತೆ ಮಾಡಿಸೋಣ. ಪೋಲೀಸ್...."

"ಬೇಡ. ಬೇಡ," ನಾಯಕಿ ಆತುರದಿಂದ ಹೇಳಿದಳು.

"ಯಾಕೆ? ಆತ ಹೋಗಲಿ, ಮಗೂನಾದರೂ...."

"ಉಹುಂ, ಅವರಿಗೆ ಇಷ್ಟವಿಲ್ಲ. ಹೀಗೇ ಸರಿ. ಬೇಡ."

"ಕೋರ್ಟಿನಲ್ಲಿ ಕೇಸ್ ಮಾಡಿ," ಸೇಠರು ಸಿಟ್ಟಿನಿಂದ ಸೂಚಿಸಿದರು.

"ಉಂಟೇ? ಆಗದು."

"ಹಾಗೆಂದರೇನು. ತಾಯಾಗಿ...."

"ಇಲ್ಲ, ಸೇಠರೆ, ಆ ಮಾತೊಂದೂ ಇಲ್ಲ. ನಿಮಗೆ ಗೊತ್ತಿಲ್ಲ, ನನ್ನ ವಿಚಾರ." ಅವಳು ಖಂಡಿತವಾಗಿ ಹೇಳಿಬಿಟ್ಟಳು.

"ವಿಚಿತ್ರ!" ಸೇಠರು ಸುಮ್ಮನಾದರು.

ಸ್ವಲ್ಪ ಕಾಲ ಮೌನ.

"ಪಾಪ, ಅದಕ್ಕೋಸ್ಕರವೇ ಈ ಊರನ್ನು ಬಿಡೋಟಿಲ್ಲ ಅಂದಿದ್ದಿರಿ"

"ಹುಂ, ಆಗ ಈ ಊರು ಎಷ್ಟು ಎಷ್ಟು ಬೇಕಾಗಿತ್ತೋ ಈಗ ಅಷ್ಟು ಅಷ್ಟು ಬೇಡವಾಗಿದೆ."

"ಹೂಂ," ಸೇಠರು ಏನನ್ನೋ ಹೇಳಬೇಕೆ ಬಾರದೆ ಎಂದು ಅನು ಮಾನಿಸುತ್ತಿದ್ದರು. ಕಡೆಗೆ ಕೆಲವು ಕ್ಷಣ ತಡೆದು "ಹಾಗಾದರೆ ಈ ಊರು ಬಿಟ್ಟುಬಿಡ್ತೀರ?"

"ಇನ್ನೇನಿದೆ ಇಲ್ಲಿ ನಂಗೆ?"

"ಆ ಹಳೇ ಪ್ರಸ್ತಾಪ ಮಾಡಿದರೆ ತಪ್ಪಾಗೋದಿಲ್ಲವಲ್ಲ?"

"ಇಲ್ಲ. ನಂಗೂ ಈ ಹಳೇ ಗುರುತುಗಳನ್ನೆಲ್ಲ ಬಿಟ್ಟು ಹೊಸ

ಜೀವನದಲ್ಲಿ ಹಿಂದಿನದನ್ನೆಲ್ಲ ಮರೀಬೇಕು ಅಂತಲೇ ಅನ್ನಿಸಿದೆ. ಆದರೆ ಈ ಕಂಪನಿಯ ಯೋಚನೇನೂ ಮಾಡಬೇಕು. ನಂಗೆ ಜನ್ಮ ಕೊಟ್ಟ ತಾಯಿ."

"ಇದೂ ನಡೀಬೇಕು ಅಂತ ತಾನೆ? ಅದನ್ನ ನಂಗೆ ಬಿಡಿ. ನೋಡಿಕೋತೀನಿ. ಇದು ಹೊಸ ಹೊಸ ಶಕ್ತಿ ಕಂಡುಹಿಡಿಯೋ ನೆಲವಾದರೂ ಆದೀತು. ಮುಳುಗಗೊಡೋದಿಲ್ಲ."

ನಾಯಕಿ ಶಾಮಣ್ಣನ ಕಡೆಗೆ ನೋಡಿದ್ದಳು. ಅವನೂ ಸ್ವಲ್ಪ ಯೋಚಿಸಿ ತಾನೇ ಮಾತಾಡಿದ.

"ಅವಳ ಒಳ್ಳೇದಕ್ಕಾದರೆ ಹೋಗೋದೆ. ಅವಳು ಮುಂದಕ್ಕೆ ಬರಬೇಕು ಅಂತ ನಂಗೂ ಬಹಳ ಆಸೆ. ಬರ್‍ತಾಳೆ ಅಂತ ಭರವಸೆಯೂ ಇದೆ. ಈ ಕಂಪನೀಲಿ ಇಲ್ಲದೆ ಇದ್ದರೇನು, ಅವಳ ಕೀರ್ತಿ ಕೇಳಿ ತೃಪ್ತಿಪಟ್ಕೊತೀನಿ."

"ಅಪ್ಪ, ನಿಂಗೂ ವಯಸ್ಸಾಯ್ತಲ್ಲ. ಎಷ್ಟು ದಿನ ಹೀಗೇ ಹೆಣಗ್ತೀಯ? ಯಾರಿಗಾದರೂ ಒಪ್ಪಿಸಿ ನೀನೂ ಒಂದುಬಿಡು. ಒಟ್ಟಿಗೆ ಇರೋಣ."

"ರಂಗು, ನಿಂಗಿಂತ ಬೇಕಾದೋರು ನಂಗೆ ಇನ್ನ ಯಾರಿದಾರೆ, ಹೇಳು? ಬರಬೇಕಾದದ್ದೇ. ಆದರೆ ಅಲ್ಲಿ ತೂಕಡಿಸೋದಕ್ಕೆ ನಂಗೆ ಸಾಧ್ಯವಾಗುತ್ತೇ? ಈ ಕಂಪನಿ ನಾನು ಬೀಜಹಾಕಿ, ನೀರೆರೆದು ಬೆಳೆಸಿದ್ದು. ನಮಗೆ ಬೇರೆ ಬೇರೆ ಬಾಳೇ ಇಲ್ಲ. ಇಲ್ಲ ಇದು ಗಾಳಿಗೋ ಬೆಂಕಿಗೋ ಸಿಕ್ಕಿ ಮುರಿದೋ ಉರಿದೋ ಹೋಗಬೇಕು; ಇಲ್ಲ ನಾನು ಇನ್ನೂ ಕಳಿತು ರಂಗದ ಮೇಲೇ ಒಂದು ದಿನ ಉದುರಿಬಿದ್ದು ಮುದುರಿಕೋಬೇಕು, ಅದೇ ಲೆಕ್ಕಾಚಾರ. ನೀನು ಇನ್ನೂ ಚಿಕ್ಕೋಳು. ಹೊಸ ಹೊಸ ಜಯ ಸಂಪಾದಿಸಿ ಹೊಸ ಹೊಸ ದೇಶಾನ ವಶಮಾಡಿಕೊ. ನನ್ನ ಪೂರ್ಣ ಆಶೀರ್ವಾದವಿದೆ. ನಾನೂ ಆಗ ಈಗ ನೋಡಿಕೊಂಡು ಬರ್‍ತೀನಿ. ಕಪೂರಚಂದರು ಕೊಟ್ಟರೋ ಭರವಸೆಯಿಂದ ನನ್ನ ಭಾರವೂ ಹಗುರವಾಗುತ್ತೆ. ಆ ಉಪಕಾರ ನಿಂದೇ. ನಿನ್ನ ವಿಷಯವೂ ನಂಗೆ ಆತಂಕವಿಲ್ಲ," ಶಾಮಣ್ಣ ತನ್ನ ಅಭಿಪ್ರಾಯ ಹೇಳಿದ.

ತಿಂಗಳೊಳಗಾಗಿ ನಾಯಕಿ ಬೊಂಬಾಯಿಗೆ ಹೋಗುವುದೆಂದು ನಿರ್ಧರವಾಯಿತು.

ಹೊರಡುವ ಮುನ್ನ ಕಪೂರ್‌ಚಂದರು ನಾಯಕಿಗಾಗಿ ದೊಡ್ಡ 'ಪಾರ್ಟಿ'ಯನ್ನು ಏರ್ಪಡಿಸುವುದಾಗಿ ನಿಶ್ಚಯಿಸಿ ಅನುಕೂಲದ ದಿನವನ್ನು ತಿಳಿಸಬೇಕೆಂದು ಅವಳನ್ನು ಕೇಳಿದಾಗ ಅವಳು ಒಪ್ಪಲಿಲ್ಲ. "ನಂಗೆ ಸಂತೋಷಕೂಟ ಈಗ ಸಾಧ್ಯವಿಲ್ಲ" ಎಂದಳು. ಆದರೆ ಸಾರ್ವಜನಿಕ ಸನ್ಮಾನ ಸಭೆಗೆ ಹೋಗದಿರಲು ಸಾಧ್ಯವಾಗಲಿಲ್ಲ. ನಾಟಕ ಮಂದಿರದಲ್ಲೇ ನಡೆದ ಸಭೆಗೆ ಊರಿಗೆ ಊರೇ ಬಂದಿದ್ದಂತಿತ್ತು. ಜನ ಮಂದಿರವನ್ನೂ ರಂಗಸ್ಥಳವನ್ನೂ ತುಂಬಿ, ಸುತ್ತಲೂ ಹತ್ತು ಹನ್ನೆರಡು ಸಾಲಿನ ಗೋಡೆ ಯಾಗಿ ನಿಂತು ಹೊರಗಡೆಗೂ ಸೂಸಿದ್ದಿತು. ತಡಿಕೆ ಗೋಡೆಯ ಸಂದು ಗಳಲ್ಲಿ ನೋಡಿಕೊಂಡೆ ಎಷ್ಟೋ ಜನರು ತೃಪ್ತಿ ಹೊಂದಬೇಕಾಗಿತ್ತು. ಮುನಿಸಿಪಲ್ ಪ್ರೆಸಿಡೆಂಟರೇ ಸಭಾಧ್ಯಕ್ಷತೆಯನ್ನು ವಹಿಸಿದ್ದರು. ಹಾರ ತುರಾಯಿಗಳ ಸಮರ್ಪಣೆಯಾಗಿ ಭಾಷಣಗಳಾದುವು. ನಾಯಕಿಯ ಪ್ರತಿಭೆ, ಸೌಜನ್ಯ. ಕಲಾಸೇವೆ, ಬಲಿದಾನ, ಎಲ್ಲವೂ ಮತ್ತೆ ಮತ್ತೆ ಪ್ರಶಂಸಿಸ ಲ್ಪಟ್ಟುವು. ಮಾತಾಡಿದವರೆಲ್ಲ ಅವಳ ಭವಿಷ್ಯಕ್ಕಾಗಿ ಶುಭಾಶಯವನ್ನು ಕೋರಿದರು. ಜನರು ಆಗಾಗ ಎಷ್ಟೋ ಬಾರಿ ಕರತಾಡನ ಮಾಡಿದರು. ಇದನ್ನೆಲ್ಲ ಕೇಳುತ್ತ ಜನರ ವಿಶ್ವಾಸವನ್ನು ಸವಿಯುತ್ತ ಕುಳಿತಿದ್ದ ನಾಯಕಿಗೆ ತನ್ನ ದುಃಖ ಮಂಜಿನ ಹಿಂದೆ ಮರೆಯಾದ ಬೆಟ್ಟದಂತಾಗಿತ್ತು. ಒಂದೆರಡು ಬಾರಿ "ಇದು ನಟಿ ಜೀವನದ ಅವಮಾನ ಹೀನಾಯಗಳನ್ನು ತೋರು ತ್ತದೆಯೆ? ಅವರೇಕೆ ಹೀಗೆ ಮುಷ್ಟಿ ಹಿಡಿದರು? ಆಹಾ, ಅವರೂ ಒಪ್ಪಿದ್ದರೆ!" ಎಂದು ನಿಟ್ಟುಸಿರನ್ನು ಬಿಟ್ಟಳು. ನಾಯಕಿ ತನ್ನ ಸರದಿ ಬಂದಾಗ ಆಗಲೇ ಗಟ್ಟುಮಾಡಿದ್ದ ನಾಲ್ಕಾರು ಉಚಿತವಾದ ಮಾತುಗಳ ನ್ನಾಡಿ ಜನರನ್ನು ಅವರು ತೋರಿದ ಅಭಿಮಾನ ವಿಶ್ವಾಸಗಳಿಗಾಗಿ ವಂದಿಸಿ, ಇವುಗಳನ್ನು ಹೆಚ್ಚು ಹೆಚ್ಚಾಗಿ ಪಡೆಯುವ ಅರ್ಹತೆಯನ್ನು ಸಂಪಾದಿಸಲು ದುಡಿಯುವುದಾಗಿ ಹೇಳಿದಳು. ಮೊದಲಿನಿಂದಲೂ ತನಗೆ ಕೊಟ್ಟ ಉತ್ತೇ ಜನಕ್ಕಾಗಿ ತಾನು ಚಿರಋಣಿಯೆಂದು ಹೃತ್ಪೂರ್ವಕವಾಗಿ ಹೇಳಿ ಕೈ ಜೋಡಿಸಿದಳು. ದೀರ್ಘ ಕಾಲ ಚಪ್ಪಾಳೆ ಹರ್ಷಕಾರಗಳು ನಡೆದುವು. ಆದರೆ ಜನರು ಅಷ್ಟಕ್ಕೇ ತೃಪ್ತರಾಗದೆ ಅವಳಿಂದ ಎರಡು ಹಾಡುಗಳನ್ನು ಹೇಳಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ಅವಳ ಪ್ರಯಾಣದ ರಾತ್ರಿ ಬೆಂಗಳೂರು ನಿಲ್ದಾಣದಲ್ಲಿ ಅವಳ ಗಾಡಿಯ ಮುಂದೆ ವಿಶೇಷ ಜನಸಂದಣಿಯಿತ್ತು. ಪಕ್ಕದ ಗಾಡಿಯಲ್ಲಿ ಕಪೂರ್‌ಚಂದರ ಗುಮಾಸ್ತನೂ ಅವಳಿಗಾಗಿ ಹೊರಟಿದ್ದ. ಸೇಠರು, ಶಾಮಣ್ಣ, ನಟವರ್ಗದವರು, ಇವರ ಸುತ್ತಿನ ಕೋಟೆಯಲ್ಲಿ ಜನರು ಇಣಿಕಿಣಿಕಿ ತುದಿಗಾಲಿನಲ್ಲಿ ನಿಂತು ಅಲ್ಲಲ್ಲಿ ಬಗ್ಗಿ ಅವಳನ್ನು ಇನ್ನೊಂದು ಬಾರಿ, ಇನ್ನೊಂದು ಬಾರಿ, ನೋಡಲು ಒದ್ದಾಡುತ್ತಿದ್ದರು ರೈಲು ಹೊರಟಾಗ ಸೇಠರು "ಬೊಂಬಾಯಿಗೆ ಬಂದಾಗ ನೋಡ್ತೀನಿ. ಬಾಕಿ ವಿಚಾರಕ್ಕೆ ಬರೀರಿ" ಅಂದರು. ಶಾಮಣ್ಣ ಹನಿಗಣ್ಣಿನಿಂದ "ಹಿಂದೆ ಕಳಿಸಿಕೊಟ್ಟಾಗ ಇದ್ದಷ್ಟು ವ್ಯಥೆಯಿಲ್ಲ ಮಗು. ಚೆನ್ನಾಗಿ ಬಾಳು, ದಿನೇ ದಿನೇ ಅಭಿವೃದ್ಧಿ ಹೊಂದು" ಅಂದ. ನಟವರ್ಗ ಜಯಕಾರ ಮಾಡಿತು. ಜನರು ಓ ಗೊಟ್ಟರು. ಗುಂಪಿನ ಹತ್ತಿರ ಹಾಯುತ್ತಿದ್ದ ಒಬ್ಬ ಮುದುಕ ವಿಚಾರ ಮಾಡಿ "ಇದೇನು, ನಟಿ ಒಬ್ಬಳಿಗಾಗಿ ಈ ಜನರ ಇಷ್ಟು ಉತ್ಸಾಹವೆ? ಯಾರೋ ರಾಜಕಾರಣ ಧುರೀಣರಿರಬೇಕು ಅಂತಿದ್ದೆ" ಎಂದು ಆಶ್ಚರ್ಯಪಟ್ಟು ಮೂಗು ಮುರಿದ.



ರೈಲು ಬೊಂಬಾಯಿ ನಿಲ್ದಾಣದಲ್ಲಿ ನಿಂತಾಗ ಬೆಂಗಳೂರಿನ ಗುಮಾಸ್ತ ಇನ್ನೊಬ್ಬನೊಡನೆ ನಾಯಕಿಯಲ್ಲಿಗೆ ಬಂದು "ಇವರು ಸೇಟ್ ಧನ್ ಚಂದರ ಪ್ರೈವೇಟ್ ಸೆಕ್ರೆಟರಿ. ಎಲ್ಲ ವ್ಯವಸ್ಥೆಯೂ ಆಗಿದೆಯಂತೆ" ಎಂದು ಪರಿಚಯಮಾಡಿಕೊಟ್ಟು ಹೇಳಿದ.

ಸೇಠರ ದೊಡ್ಡ ಬ್ಯೂಕ್ ಕಾರು, ಜನರಿಂದ ಗಿಜಿಗುಟ್ಟುತ್ತಿದ್ದ ಹಾರನ್‌ಬಿ ರಸ್ತೆಯಲ್ಲಿ ನಾಲ್ಕಾರು ಮಹಡಿಗಳ ಭಾರಿ ಭಾರಿ ಅಂಗಡಿಗಳ ಮುಂದೆ, ಗುಯ್‌ಗುಟ್ಟುವ ಟ್ರಾಂಗಳ ಪಕ್ಕದಲ್ಲಿ, ಹರಿದೋಡುವ ನೂರಾರು ಸಾವಿರಾರು ಕಾರುಗಳಲ್ಲಿ ಒಂದಾದಾಗ, ಫ್ಲೋರಾ ಫೌನ್ಟನ್ ಚಕ್ರವ್ಯೂಹವನ್ನು ಸುತ್ತಿದಾಗ, 'ಮೆರೀನ್ ಡ್ರೈವ್'ನ ಮಹೋನ್ನತ ಸೌಧಗಳ ಮುಂದೆ ಎಡ ಕಡಲಿನ ಗಾಳಿಯಲ್ಲಿ ಜಾರಿದಾಗ, ಚೌಪಾತಿಯನ್ನು ಬಳಸಿ, 'ಮಲಬಾರ್ ಹಿಲ್' ಹತ್ತಿ ದೊಡ್ಡ ಬಂಗಲೆಯೊಂದರ ಮುಂದೆ ನಿಂತಾಗ

ಅವಳ ಮೈ ನವಿರೆದ್ದು ಮನಸ್ಸಿನಲ್ಲಿ ಆವೇಶ ತುಂಬಿತು. ಬೆಂಗಳೂರು ಬಹಳ ದೊಡ್ಡ ನಗರವೆಂದು ಅವಳ ಭಾವನೆ. ಬೊಂಬಾಯಿ ಇನ್ನೂ ದೊಡ್ಡ ದೆಂದೇನೋ ಕೇಳಿದ್ದಳು; ಹೇಗಿರಬಹುದೆಂದು ಊಹಿಸಿಕೊಂಡೂ ಇದ್ದಳು. ಆದರೆ ಹೀಗೆ! ಇದು ಅವಳ ಊಹೆಯ ಮಿತಿಯನ್ನು ಮೀರಿಸಿತ್ತು. 'ಇಂಥಾ ಊರನ್ನೇ, ನಾನು ಗೆಲ್ಲೋದಕ್ಕೆ ಬಂದಿರೋದು, ಯಃಕಶ್ಚಿತಳಾದ ನಾನು? ನನ್ನ ಶಕ್ತಿ ಸಾಕೆ? ಇನ್ನೂ ಎಂಥೆಂಥ ಕಲೆಗಾರರು ಇರುತ್ತಾರೋ. ನಾನು ಬಂದದ್ದು ಸರಿಯಾಯಿತೆ? ಕಪೂರ್‌ಚಂದರು ಚೆನ್ನಾಗಿ ತೂಕ ಹಾಕಿದರೆ?' ಎಂದುಕೊಂಡು ಭಯಪಟ್ಟಳು, ನಿರಾಸೆಯನ್ನೇ ಹೊಂದಿದಳು. ಡ್ರೈವರು ಬಾಗಿಲನ್ನು ತೆಗೆದಾಗ ಅವಳಿಗೆ ತನ್ನ ಕ್ಷಣಕಾಲದ ಮೈಮರೆವೆಯಿಂದ ಎಚ್ಚರವಾಯಿತು. ಬಂಗಲೆಯನ್ನು ಪ್ರವೇಶಿಸಿದಳು.

"ಸೇಠರ ಬಂಗಲೆಗಳಲ್ಲಿ ಇದೊಂದೇಯಂತೆ ಖಾಲಿ ಇದ್ದದ್ದು. ಮುಂದೆ ಅಗತ್ಯ ಕಂಡ ಹಾಗೆ ಬದಲಾಯಿಸೋದೋ ಹೇಗೋ ಮಾಡಬಹುದಂತೆ," ಬೆಂಗಳೂರಿನ ಗುಮಾಸ್ತ ಹೇಳುತ್ತಿದ್ದ.

ಆದರೆ ಆ ಮಾತನ್ನು ಕೇಳಿಯೂ ಕೇಳಿಸದಂತೆ ಅವಳ ಗಮನವೆಲ್ಲ ಆ ಮನೆಯ ಮೇಲಿತ್ತು. ಅದರ ವೈಭವದಲ್ಲಿ ಹೀರಿಹೋಗಿತ್ತು. 'ಬೊಂಬಾಯಿಗೆ ತಕ್ಕ ಮನೆ' ಎಂದುಕೊಂಡಳು. ಅವಳಿಗೆ ಸಿರಿಯೇನು ಹೊಸ ದಾಗಿರಲಿಲ್ಲ. ಬಸವನಗುಡಿಯ ಮನೆ ಸುತ್ತುಮುತ್ತಕ್ಕೇ ದೊಡ್ಡ ಬಂಗಲೆ, ಒಳಗೂ ಅವರಿಗೆ ತಿಳಿದಂತೆಲ್ಲ ಶೃಂಗಾರ ಸಂಪತ್ತುಗಳನ್ನು ತುಂಬಿದ್ದರು. ಆದರೆ ಈ ವೈಭವ! ಅರಮನೆಯದು—ಅದರ ಭಾರವಿಲ್ಲದೆ, ಕೃತಕತೆಯಿಲ್ಲದೆ. ನಾಯಕಿ ದಂಗುಬಡಿದುಹೋದಳು. ಹಾಗೇ ನಿಂತು ಅತ್ತಿತ್ತ ನೋಡುತ್ತ ಒಂದೊಂದು ವಿವರವನ್ನೂ ಮನಸ್ಸಿಗೆ ತಂದುಕೊಂಡು ತನ್ನ ಮನೆಯದಕ್ಕೆ ಹೋಲಿಸಿ ಇವು ಎಷ್ಟೆಷ್ಟು ಉತ್ತಮವೆಂದು ಕಂಡುಕೊಳ್ಳುತ್ತಿದ್ದಳು........ ಹುಂ, ಆದರೇನು. ರಾಜನಿಲ್ಲ, ಕಂದನೂ ಇಲ್ಲ. ಇನ್ನೇನಿದ್ದರೂ ಸತ್ತ ವೈಭವವೆ. ಪೂರ್ಣ ಸ್ಫಟಿಕದ ದುಂಡುಮೇಜಿನ ಮೇಲೆ ಚಿತ್ರಕೆಲಸದ ಹೂದಾನಿಯಲ್ಲಿ ನಸುನಗುತ್ತಿದ್ಧರೂ, ಗಿಡದಿಂದ ಕುಯ್ಯಲ್ಪಟ್ಟು ಬಾಡಲಿದ್ದ ಕುಸುಮಗಳನ್ನು ನೇವರಿಸಿ, ನಿಟ್ಟುಸಿರನ್ನು ಬಿಡುತ್ತ, ಪಕ್ಕದಲ್ಲಿದ್ದ ಗಾಳಿ ತುಂಬಿದ ಮೆತ್ತೆಯ ಮತ್ತು ರೇಷ್ಮೆ ಹೊದಿಕೆಯ ಸೋಫದ ಮೇಲೆ ಕುಸಿದು

ಕೊಂಡಳು. ತನ್ನ ಮನೆಯ ಯೋಚನೆಗಳೇ ಮತ್ತೆ ಮತ್ತೆ ಬಂದು ನಲಿ ದಾಡಿದುವು, ಬಾಧಿಸಿದುವು. 'ಅವರೂ ಇಲ್ಲೇ ಇರಬೇಕು. ಕಡೆಯ ಕಾಗದದ ಮೇಲೆ ಇಲ್ಲಿಯ ಮುದ್ರೆಯೇ ಇತ್ತು. ಆದರೆ ಎಲ್ಲೋ ಈ ಮಹಾಸಾಗರದಲ್ಲಿ. ಹುಡುಕಿಸುವುದೆ? ಬೇಡವೆಂದಿದಾರಲ್ಲ. ಕೂಡದಂತಲ್ಲ. ಈಗಿನ ದುಸ್ಥಿತಿ ಇನ್ನೂ ವಿಷಮಾವಸ್ಥೆಗೆ ಬಂದರೋ? ಹುಂ, ಎಲ್ಲಾದರೂ ಅಲ್ಲಿ ಇಲ್ಲಿ ಕಂಡರೆ! ದೂರದಿಂದ ಕಂಡರೂ ಸಾಕು. ಮಾತು ಬೇಕಿಲ್ಲ. ಅವರು, ಚಂದು ಕಣ್ಣಿಗೆ ಬಿದ್ದರೆ ನೋಡಿ ತೃಪ್ತಿಹೊಂದಬಹುದಲ್ಲ! ಪತ್ರಿಕೆ ಗಳಿಗೆ ಹಾಕಿಸಿಬಿಡಲೆ? ಬರೆದಿದ್ದಾರಲ್ಲ. ನಾಟಕ ಬಿಟ್ಟು........ಉಹುಂ, ನಾನೇಕೆ ಸೋಲಬೇಕು? ಯಾವ ತಪ್ಪಿಗೆ? ಇನ್ನೂ ಈಗ ತಾನೆ ಈ ದೊಡ್ಡ ಜೀವನದಲ್ಲಿ ಕಾಲಿಡುತ್ತಿಲ್ಲವೆ? ಕಪೂರ್‌ಚಂದರು ಅಷ್ಟೊಂದು ಮಾಡಿದ್ದಾರೆ. ನಾನಿಲ್ಲಿ ಮಾಡುವುದು ಎಷ್ಟೊಂದಿದೆ! ಬೊಂಬಾಯನ್ನು ಗೆಲ್ಲಬೇಕು........ ಹುಂ ಗೆಲ್ಲಬೇಕು. ಅಬ್ಬಬ್ಬ, ಈ ಬೊಂಬಾಯನ್ನು! ಹೇಗೆ ಸಾಧ್ಯವೋ ದೇವರೇ ಬಲ್ಲ. ಏನೋ, ಕಪೂರ್‌ಚಂದರಿಗೆ ಗೊತ್ತು. ಅವರ ಲೆಕ್ಕಾಚಾರ ಸರಿಯಾಗಿರದೆ ಇರುತ್ತದೆಯೆ? ಆದರೂ ಆದರೂ ನಂಗೇನೋ....'

"ಸ್ವಲ್ಪ ಕಾಫಿ ತರಿಸೋಣವೆ? ಊಟವೂ ಸಿದ್ಧವಾಗಿದೆಯಂತೆ," ಒಳಗಡೆಯಿಂದ ಬಂದು ಗುಮಾಸ್ತ ಹೇಳಿದ.

"ಕಾಫಿ ಬೇಡ. ಸ್ನಾನ ಮಾಡಿ ಊಟಾನೇ ಮಾಡಿಬಿಡೋಣ," ಎದ್ದಳು.

ಕಾದಿದ್ದ ಹೆಣ್ಣಾಳಿಗೆ ಅವನು ಏನನ್ನೋ ಹೇಳಿದ. ಆಳು ನಾಯಕಿ ಯನ್ನು ಕರೆದುಕೊಂಡು ಹೋದಳು. ಬಟ್ಟೆಯ ಕೋಣೆಯಲ್ಲಿ ಅವಳೆದುರಿಗೆ ಆಳು ಪೆಟ್ಟಿಗೆಗಳನ್ನು ತೆಗೆದು ಅವಳು ತೋರಿಸಿದ ಬಟ್ಟೆ, ಸಾಬೂನುಗಳನ್ನು ತೆಗೆದುಕೊಂಡು ಪಕ್ಕದ ಬಚ್ಚಲು ಮನೆಯಲ್ಲಿಟ್ಟಳು. ಅದು ಬಿಳಿ ಚದರು ಬಿಲ್ಲೆಯ ಪಾಶ್ಚಾತ್ಯ ರೀತಿಯ ಬಚ್ಚಲು ಮನೆ. ಮುಖ ತೊಳೆಯುವ 'ಬೇಸಿನ್', ಚೀನಾ 'ಬಾತ್ ಟಬ್', ನಿಲುವು ಗನ್ನಡಿ, ಬಿಸಿ ನೀರು ತಣ್ಣೀರುಗಳ ನಲ್ಲಿಗಳು ಎಲ್ಲ ಇದ್ದುವು—ಲಕ್ಸ್ ಸಾಬೂನೂ ಕೂಡ. ಸ್ನಾನ ವನ್ನು ಮುಗಿಸಿ ಹೊರ ಬಂದಾಗ ಆಳು ಕಾದಿದ್ದವಳು ಅಲಂಕಾರದ ಕೋಣೆಗೆ ಕರೆದೊಯ್ದಳು. ಅಲ್ಲಿ ತನ್ನ ಸಾಮಾನುಗಳೆಲ್ಲ ಕನ್ನಡಿಯ ಮುಂದೆ ಅಣಿ

ಮಾಡಲ್ಪಟ್ಟಿದ್ದುವು. ಅಲಂಕಾರವನ್ನು ಮುಗಿಸಿ ಊಟದ ಮನೆಗಾಗಿ ಹೋಗುತ್ತ ಹಜಾರಕ್ಕೆ ಬಂದಾಗ ಗುಮಾಸ್ತ ಮತ್ತು ಸೇಠರ ಆಪ್ತ ಕಾರ್ಯದರ್ಶಿ ಇಬ್ಬರೂ ಕಾಣಿಸಿಕೊಂಡರು.

"ಸೇಠರು ಸಂಜೆಗೆ ಬಂದು ಭೇಟಿಯಾಗ್ತಾರಂತೆ. ಈಗ ತಮಗೆ ಆಗಬೇಕಾದದ್ದು ಏನಾದರೂ ಇದ್ದರೆ...."

"ಏನೂ ಇಲ್ಲವಲ್ಲ–ವ್ಯವಸ್ಥೆ ಇಷ್ಟು ಚೆನ್ನಾಗಿರೋವಾಗ ಇನ್ನೇನು ಬೇಕಾಗುತ್ತೆ? ಸೇಠರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸಬೇಕು," ನಾಯಕಿ ಕಾರ್ಯದರ್ಶಿಯನ್ನೇ ಕುರಿತು ಸಂತೋಷವನ್ನು ಸೂಚಿಸುತ್ತ ಹೇಳಿದಳು. ಗುಮಾಸ್ತ ಅವನಿಗೆ ಸ್ಪಷ್ಟೀಕರಿಸಿದ. ಅವನು ನಮಸ್ಕರಿಸಿ ಹೊರಟುಹೋದ.

ಸೇಠರು ಉಡುಪಿಯವನನ್ನೇ ಅಡಿಗೆಗೆ ನಿಯಮಿಸಿದ್ದರು. ಆದರೆ ಬಿಳಿಯ ಬಟ್ಟೆ ಹಾಸಿದ ದೊಡ್ಡ ಮೇಜು, ದೊಡ್ಡ ಸಣ್ಣ ಚೈನ ತಟ್ಟೆಗಳು, ಬೆಳ್ಳಿಯ ಚಮಚಗಳು, ಫೋರ್ಕ್, ದಂತದ ಹಿಡಿಯ ಚಾಕು–ಬಡಿಸುವ ವಿಧಾನ ಮಾತ್ರ ಬೇರೆ. ಊಟವೂ ಹಬ್ಬದೂಟದಂತೆಯೇ ಹಲವು ಬಗೆಗಳಿಂದ ಕೂಡಿತ್ತು. ಆಲೂಗೆಡ್ಡೆ, ಹೂ ಕೋಸು, ಬೆಂಡೆಯಕಾಯಿಗಳ ಪಲ್ಯಗಳು, ಹುಳಿ, ಸಾರು, ಚಟ್ನಿ, ಉಪ್ಪಿನಕಾಯಿ, ಕತ್ತರಿಸಿಟ್ಟ ಸ್ಪಿನಾಕ್, ಬೀಟ್‌ರೂಟ್, ಟೊಮೆಟೊ, ಕ್ಯಾರಟ್, ಈರುಳ್ಳಿ–ಹಸಿ ಕೋಸಂಬರಿಗೆ–ಸ್ಟಾಂಡಿನ ಸೀಸೆಗಳಲ್ಲಿ ಮೆಣಸು, ಉಪ್ಪಿನ ಪುಡಿಗಳು, ಹಸಿಯ ಬಟಾಣಿಗೆ ಆಲೂಗೆಡ್ಡೆ ಹೊದಿಸಿದ ಬೋಂಡ–ಚಾಪ್–ಅವಳಿಗೆ ತಿಳಿಯದಿದ್ದ ಎರಡು ಬಗೆಯ ಸಿಹಿ ತಿಂಡಿ. ಊಟ ಮುಗಿದು ಹಜಾರಕ್ಕೆ ಹಿಂದಿರುಗಿದಾಗ ರಿಫ್ರಿಜರೇಟರಿನಿಂದ ಆಗ ತಾನೆ ತೆಗೆದ 'ಫ್ರೂಟ್ ಸಾಲಡ್' ಮತ್ತು ಕಾಫಿ. ಮಲಗುವ ಮನೆಯನ್ನು ಹೊಕ್ಕಾಗ ಗುಲಾಬಿಯ ಘಮ ಘಮ. ಸುಪ್ಪತ್ತಿಗೆಯ ಮೇಲೆ ಅವಳ ಹಾಸಿಗೆಯು ಹಾಸಲ್ಪಟ್ಟದ್ದಿತು. ಬಿಳಿಯ ಮೃಗ್ಗಲಾಸಿಗೆಯ ಮೇಲೆ ಗುಲಾಬಿಯ ರೇಕುಗಳು! 'ಓಹೋ!' ತಾನಾಗಿಯೇ ಅವಳ ಬಾಯಿಗೆ ಬಂದಿತು.

ನಾಯಕಿ ಹೆಚ್ಚು ಹೊತ್ತು ಮಲಗಲಿಲ್ಲ. ಬೇಗನೆ ಎದ್ದು ಸೇಠರು ಯಾವಾಗ ಬಂದುಬಿಟ್ಟಾರೋ ಎಂದುಕೊಂಡು ತನ್ನ ಅತ್ಯುತ್ತಮವಾದ

ಬಟ್ಟೆಯನ್ನು ಧರಿಸಿ, ಬಹಳ ಎಚ್ಚರದಿಂದ ಸಿಂಗರಿಸಿಕೊಂಡಳು. ನಾಲ್ಕು ಗಂಟೆಯ ಹೊತ್ತಿಗೆ ಪೋರ್ಟಿಕೋದಲ್ಲಿ ಕಾರು ನಿಂತ ಹಾಗೆ ಶಬ್ದವಾಯಿತು. ಇನ್ನೆರಡು ನಿಮಿಷಗಳಲ್ಲಿ ಹೆಣ್ಣಾಳು ಬಂದು ಏನನ್ನೋ ಬಿನ್ನವಿಸಿಕೊಂಡಳು. ಆದರಲ್ಲಿ ಸೇಠ್ ಮತ್ತು 'ದಿವಾನ್‌ಖಾನ' ಎರಡು ಪದಗಳು ಗೊತ್ತಾಗಿ ಅವರು ಅಲ್ಲಿ ಕಾಯುತ್ತಿರುವುದಾಗಿ ಊಹಿಸಿ ಭೇಟಿಗಾಗಿ ಹೊರಟಳು. ಹಜಾರಕ್ಕೆ ಕಾಲಿಟ್ಟಾಗ ಲಜ್ಜೆ ಮತ್ತು ಸ್ವಲ್ಪ ಅಂಜಿಕೆಗಳಿಂದ ಮುಖ ಇನ್ನೂ ಕೊಂಚ ಕೆಂಪೇರಿತ್ತು. ಸೋಫದ ಮೇಲೆ ಕುಳಿತಿದ್ದ ಸೇಠರು ಎದ್ದು ನಿಂತು ಕ್ಷಣಕಾಲ ದಿಟ್ಟಿಸಿ ಕಣ್ತೆಗೆದು ಸ್ವಲ್ಪ ಗಡಿಬಿಡಿಯಿಂದಲೇ ಒಂದೆರಡು ಹೆಜ್ಜೆ ಮುಂದೆ ಬಂದು ಕೈ ಮುಗಿಯುತ್ತ ನಸುನಕ್ಕರು. ಅವಳೂ ನಸುನಗುತ್ತ ಕೈ ಮುಗಿದು ಅವರಿಗೆ ಇದಿರಿನ ಸೋಫ ತೋರಿಸಿದ ಮೇಲೆ ಇಬ್ಬರೂ ಕುಳಿತರು. ಇಂಗ್ಲೀಷಿನಲ್ಲೇ ಕುಶಲ ಪ್ರಶ್ನೆಗಳಾದುವು. ನಾಯಕಿ ಹಿಂದಿನ ಮೂರು ವರ್ಷಗಳಲ್ಲಿ ಇಂಗ್ಲೀಷಿನ ಅಭ್ಯಾಸವನ್ನಷ್ಟು ಮಾಡಿದ್ದಳು. ರಾಜ ಮೇಷ್ಟರನ್ನಿಟ್ಟು ಹೇಳಿಸಿದ್ದ. ತಾನೂ ಹೇಳಿಕೊಟ್ಟಿದ್ದ. ಅವಳಿಗೆ ಬಳಕೆಯಾಗಲೆಂದು ಅವಳೊಡನೆ ಇಂಗ್ಲೀಷಿನಲ್ಲೇ ಮಾತಾಡುತ್ತ ಆಡಿಸುತ್ತಿದ್ದ. ಇಂಗ್ಲೀಷ್ ಚಿತ್ರಗಳಿಗೆ ಕರೆದುಕೊಂಡು ಹೋಗುತ್ತಿದ್ದ. ಪುಸ್ತಕ ಪತ್ರಿಕೆಗಳನ್ನು ತಂದುಕೊಟ್ಟು ಪಾಠಮಾಡಿಸಿದ್ದ. ಹೀಗಿದ್ದು ಸುಮಾರಾಗಿ ಪರಿಚಯವಿತ್ತು.

ಮಾಮೂಲಾಗಿ ಪ್ರಯಾಣ ಹವ ಈ ಮಾತುಗಳೂ ಆದುವು. "ಇಲ್ಲಿ ಎಲ್ಲವೂ ಅನುಕೂಲವಾಗಿದೆಯೆ?" ಸೇಠರು ವಿಚಾರಿಸಿದರು.

"ಅಪೇಕ್ಷಿಸುವುದೇನೂ ಇಲ್ಲ. ನಾನು ಇಷ್ಟಕ್ಕೆಲ್ಲ ಅರ್ಹಳೇ ಅಲ್ಲ."

"ಹಾಗೆನ್ನಬೇಡಿ. ಚಿಕ್ಕಪ್ಪ ಎಂಥವರನ್ನು ಕಳುಹಿಸಿದ್ದಾರೆ ಅಂತ ನಂಗೆ ಚೆನ್ನಾಗಿ ಗೊತ್ತು. ಅಲ್ಲದೆ ನಂಗೆ ಈಗ ಪರಿಚಯವಾಗಿಲ್ಲವೆ? ಯಾವ ಬಗೆಯ ಸಂಕೋಚವೂ ಬೇಡ. ನಾನೇನು ಉಪಕಾರ ಮಾಡುತ್ತಿಲ್ಲ–ಅವಶ್ಯಕವಾದ ಆತಿಥ್ಯ ಅಷ್ಟೆ."

"ಹಾಗಾದರೆ ತಮ್ಮ ಆತಿಥ್ಯದ ಮಟ್ಟವೇ ಬಹಳ ಎತ್ತರ."

ಸ್ವಲ್ಪ ಹೊತ್ತು ಇಬ್ಬರ ಮಧ್ಯೆ ಮೌನವಿತ್ತು.

ಸೇಠರು ಈವರೆಗೆ ಎಷ್ಟೋ ನಟಿಯರನ್ನು ನೋಡಿದ್ದರು, ಅವರಿಗೆ ನೌಕರಿ ಕೊಟ್ಟಿದ್ದರು, ಅವರೊಡನೆ ತರಹ ತರಹದ ಸಂಬಂಧವನ್ನೂ ಇಟ್ಟು

ಕೊಂಡಿದ್ದರು. ಆದರೆ ಇವಳು ಅವರೆಲ್ಲರಿಗಿಂತ ಬಹಳ ಬೇರೆಯಾಗಿ ಕಂಡಳು. ಆ ನಟಿಯರ ಅಭಿನಯ ರಂಗಸ್ಥಳದ ಮೇಲೆ ಹೇಗಿದ್ದರೂ ಹೊರಗೆ ವಿಶೇಷವಾಗಿತ್ತು. ಆ ಕೃತಕ ನಗೆ, ವಕ್ರ ನೋಟ, ಅನವಶ್ಯಕ ವಾದ ಲವಲವಿಕೆ–ಒಂದೂ ಅವಳಲ್ಲಿ -ಕಾಣಲಿಲ್ಲ. ಇವಳ ನಿಲುವಿನಲ್ಲಿ, ನಡೆಯುಲ್ಲಿ, ನೋಡುವಲ್ಲಿ ಎಷ್ಟು ಸಹಜತೆ, ಗರತಿಯ ಗಾಂಭೀರ್ಯ! ಇಂಥವಳು ನಟಿಯೇ ? ಅಭಿನಯಿಸಬಲ್ಲಳೆ ? ಹುಂ, ಯಾಕಿಲ್ಲ. ಈಗ ಇದೇನು ಗರತಿಯ ಅಭಿನಯುವಲ್ಲವೆ ? ಅದೂ ಅಲ್ಲದೆ ತಮ್ಮ ಚಿಕ್ಕಪ್ಪ ನೋಡಿ ಅಷ್ಟೊಂದು ಉತ್ಸಾಹದಿಂದ ಬರೆದಿರಲಿಲ್ಲವೆ ? ಅವರ ಅಭಿರುಚಿಯ ಬಗ್ಗೆ ತನಗೆ ತುಂಬ ವಿಶ್ವಾಸವಿದ್ದು ತಾನೆ ಇವಳನ್ನು ಕರೆಸಿಕೊಂಡಿದ್ದು........ಹೂಂ, ಇವಳು ಚೆಲುವೆಯೆಂದೂ ಬರೆದಿದ್ದರಲ್ಲ–ನಿಜ. ಎಂಥ ಚಲುವೆ! ರಾಣಿಯಾಗ ಬಲ್ಲವಳು. ಹಾಂ, ರಂಗಸ್ಥಳದಲ್ಲಿ ರಾಣಿಯೇ. ಆದರೆ ಎಲ್ಲಿದೆ ಆ ಚೆಲುವು ? ಪತ್ತೆಯೇ ಹತ್ತುವಂತಿಲ್ಲವಲ್ಲ. ಆ ಮೊಗ ಸ್ವಲ್ಪ ಸಣ್ಣದೇ–ಆ ಕಣ್ಣು ಗಳಿಗೆ. ಮೂಗೂ ಕೊಂಚ ಮೊಂಡಲ್ಲವೆ? ತುಟಿಗಳು ದುಂಡಾದರೂ ದಪ್ಪವೇ. ಗಲ್ಲವೂ ಅಷ್ಟೇನು ಗುಂಡಲ್ಲ. ಮತ್ತೆ? ಆ ಕುರುಳಿನಲ್ಲೇ ? ಉಹುಂ, ಇಷ್ಟೇ ದಟ್ಟ ಅಲೆಯುಲೆಯ ಕುರುಳನ್ನು ಎಷ್ಟೋ ಕಂಡಿದ್ದರು– ನೇವರಿಸಿಯೂ ಇದ್ದರು ! ಹಾಗಾದರೆ ? ಆ ಕಣ್ಣಿನ ಹೊಳಪಿನಲ್ಲೆ? ಇದ್ದರೂ ಇರಬಹುದು. ಆದರೆ ಅಷ್ಟೇ ಅಲ್ಲ. ಆ ಮೊಗದಲ್ಲೇ ಒಟ್ಟಾಗಿ ಏನೋ ಮೋಡಿ–ತಿಳಿಯುಲಾಗದ ಮೋಡಿ ! ಆ ಮೋಡಿಗೆ ಈ ನಸುನಗೆ ಮೆರುಗು ಕೊಟ್ಟಿತ್ತು. ಹಿಂದೆ ರಾಜನಿಗೆ ಹೇಗಾಗಿದ್ದಿತೋ ಹಾಗೇ ಇವರಿಗೂ ಒಂದು ವರ್ಣಿಸಲಾರದ ಆಕರ್ಷಣೆ. 'ಅವನೆಂಥ ಹುಚ್ಚು ಗಂಡ ಇರಬೇಕು– ಇವಳನ್ನು ಬಿಟ್ಟುಬಿಡುವುದಕ್ಕೆ' ಎಂದುಕೊಂಡರು.

ಅವಳಿಗೆ ಅವರೇನು ಸಮಸ್ಯೆಯಾಗಲಿಲ್ಲ. ಒಂದೇ ದೃಷ್ಟಿಯಿಂದ ಅಳತೆ ಹಿಡಿದಳು. ಭೋಗದ ನೆರಳಿನಲ್ಲೇ ಬೆಳೆದು ಬಿಳಿಚಿ ಬಳುಕುತ್ತಿದ್ದ ದುರ್ಬಲವಾದ ಬಳ್ಳಿ. ಬಯಕೆಗಳ ನೆರವೇರಿಕೆಯಲ್ಲಿ ಹೊರಳಿ, ಬಳಲಿ, ಅಬಳುಜಬಳಾಗುತ್ತಿದ್ದ ದೇಹ, ಜೀವ. ಅಕಾಲದ ಮುಪ್ಪು ಮೇಲೆ ಹತ್ತಿತ್ತು. ಕಣ್ಣಿನ ಆಳದಲ್ಲಿ ಹಿಂಗದ ವಿಲಾಸದ ಹಸಿವು. ನಿಸ್ತೇಜದ ನೋಟದಲ್ಲಿ ಏಳಲಾರದ ಬಾಳ ಬೀಳು. ಆದರೂ ನೀಚನೆಂದೆನ್ನುವಂತಿರಲಿಲ್ಲ.

ಬಯಕೆಗೆ ಬಲಿಯಾದವನು, ಅಷ್ಟೆ. ಹೊಟ್ಟೆಯೂ ಬಟ್ಟೆಯೂ ತಾನಾಗಲೀ ಎಷ್ಟೋ ಕಂಡಿದ್ದ ಮಾದರಿ ಸೇಠರವೇ.

ಬೆಂಗಳೂರು, ಬೊಂಬಾಯಿಗಳ ಮಾತುಗಳು ಬಂದುವು. ಸೇಠರು ಬೊಂಬಾಯನ್ನು ಬಣ್ಣಿಸಿ ಅಲ್ಲಿಲ್ಲಿಯ ಕೆಲವು ರಮ್ಯ ಸ್ಥಳಗಳನ್ನು ಹೆಸರಿಸಿ "ಹಾಗೇ ಕೆಲವನ್ನು ನೋಡಿಕೊಂಡು ಬರೋಣ, ಆಗಬಹುದಷ್ಟೆ?" ಎಂದು ಕೇಳಿದರು. ಅವಳು ಒಪ್ಪಿಗೆಯನ್ನು ಸೂಚಿಸಿದಳು. ಸೇಠರು ಬಂದಾಗ ಈ ಏರ್ಪಾಡನ್ನು ಮನಸ್ಸಿಗೆ ತಂದುಕೊಂಡಿರಲಿಲ್ಲ. ತಮ್ಮ ಕಾರ್ಯದರ್ಶಿಯೊಡನೆ ಕಳುಹಿಸುವುದೆಂದುಕೊಂಡಿದ್ದವರು ಈಗ ಬದಲಾವಣೆ ಮಾಡಿಕೊಂಡರು. ಹತ್ತಿರದ ಫೋನ್ ಕೈಗೆ ತೆಗೆದುಕೊಂಡು 'ಕ್ಲಬ್'ಗೆ ತಾವು ಬರುವುದಿಲ್ಲವೆಂದೂ, ತಮ್ಮ ಮಿತ್ರರಿಗೆ ತಿಳಿಸಬೇಕಾಗಿಯೂ ಹೇಳಿದರು.

ಹೆಣ್ಣಾಳು ಟ್ರೇಯಲ್ಲಿ ಉಪ್ಪೇರಿ, ಕಾರದವಲಕ್ಕಿ, ಬಿಸ್ಕತ್ತುಗಳು, ಗಾಜಿನೊಳಗೆ ನೀರಿನಲ್ಲಿ ಹಾಕಿದ ಕಾಬೂಲು ದ್ರಾಕ್ಷೆಯ ಗೊಂಚಲು, ಐಸ್ ಕ್ರೀಮ್, ಕಾಫಿಗಳನ್ನು ತಂದಿಟ್ಟಳು. ನಾಯಕಿಯೇ ಡಿಕಾಕ್ಷನ್ ಬಗ್ಗಿಸಿ ಹಾಲು ಹಾಕಿ ಮೂರು ಮೂರು ಕ್ಯೂಬ್ ಸಕ್ಕರೆಯನ್ನು ಮುಳುಗಿಸಿ ಇಬ್ಬರಿಗೂ ಕಾಫಿ ಮಾಡಿದಳು.

ಕಾಫಿಯಾಗುತ್ತ ಬೆಂಗಳೂರಿನ ರಂಗಭೂಮಿಯೂ ಬೊಂಬಾಯಿನದೂ ಚರ್ಚೆಯಾದುವು. ಸೇಠರು ಇಲ್ಲಿಯ ನಟ ನಟಿಯರನ್ನೂ, ಅದರಲ್ಲಿಯೂ ನಟಿಯರನ್ನು ಉಗ್ರವಾಗಿ ಟೀಕಿಸಿದರು. "ಇವರೆಲ್ಲ ಏನೇನೂ ಪ್ರಯೋಜನವಿಲ್ಲ. ನಾನೂ ಎಷ್ಟೋ ಜನರನ್ನು ನೋಡಾಯ್ತು. ನಿಮ್ಮನ್ನು ಚಿಕ್ಕಪ್ಪನೋರು ಕಳುಹಿಸಿದ್ದು ದೊಡ್ಡ ಉಪಕಾರವಾಯ್ತು. ನಮ್ಮ ರಂಗಭೂಮಿಯ ಮೇಲೆ ಹೊಸ ಗಾಳಿ ಬೀಸಿದ ಹಾಗಾದೀತು" ಎಂದರು. ನಾಯಕಿಗೆ 'ಇವರ ಅಭಿರುಚಿ ಎಷ್ಟು ಎತ್ತರದ್ದೋ, ನಾನು ತೃಪ್ತಿಪಡಿಸಬಲ್ಲೆನೆ?' ಎಂದು ಭಯವೇ ಆಯಿತು. "ನನ್ನ ಗತಿ ಏನಾಗುತ್ತೋ ನೋಡೋಣ" ಎಂದು ನಸುನಗುತ್ತ ಹೇಳಿದಳು. "ನಂಗೆ ಭರವಸೆಯಿದೆ" ಎಂದರು ಸೇಠರು. ನಟರ ಬಗೆಯ ಮಾತಿನಿಂದ ನಾಯಕಿಗೆ ಬೊಂಬಾಯಿನಲ್ಲೆಲ್ಲ ಖ್ಯಾತಿವೆತ್ತ ಅತ್ಯುತ್ತಮ ನಟ 'ರಾಜಬಹದ್ದೂರ್', ಅವರ ಕಲೆ ಬಹಳ ಶ್ರೇಷ್ಠ ರೀತಿಯದು, ಇಲ್ಲಿ ನಾಟಕ, ಸಿನಿಮಾಗಳಿಗೆ ಅವನು ಆಧಾರವಾಗಿ

ದಾನೆ ಎಂದು ತಿಳಿಯಿತು. ಆತನೊಡನೆ ತಾನು ಅಭಿನಯಿಸಬೇಕಾಗುವು ದೆಂಬ ಸೂಚನೆಯನ್ನು ಕಂಡು ಬೆದರಿದಳು. ಹಾಗೇ ಆ ಅವಕಾಶ ತನಗೆ ಸಿಕ್ಕುವುದಕ್ಕಾಗಿ ಒಳಗೊಳಗೆ ಸಂತೋಷವನ್ನೂ ಹೊಂದಿದಳು.

ಹಿಂದಿ ಕಲಿಯುವ ಮಾತು ಬಂದಿತು. ಸೇಠರು ಅದು ಬಹಳ ಸುಲಭ ವೆಂದೂ ಒಂದೆರಡು ದಿನಗಳಲ್ಲೇ ಮೇಷ್ಟರು ಮನೆಗೆ ಬರುವುದಾಗಿಯೂ ತಿಳಿಸಿ "ಇಲ್ಲಿ ಬೇರೆ ಹವ್ಯಾಸವಿಲ್ಲವೆ ಇದ್ದು ಬೇಗಲೇ ಕಲಿತುಬಿಡುತ್ತೀರಿ. ಬೆಂಗಳೂರಿನಲ್ಲಾಗಿದ್ದರೆ ಆ ನಾಟಕಗಳ ಮಧ್ಯೆ ಪುರಸತ್ತು ಸಿಕ್ಕುತ್ತಿತ್ತೋ ಇಲ್ಲವೋ. ಎಷ್ಟುಕಾಲ ಹಿಡಿಯುತ್ತಿತ್ತೊ. ಅಲ್ಲದೆ ಈ ಕಾಲವೇನು ವ್ಯರ್ಥವಲ್ಲ–ಬೊಂಬಾಯಿನ ವಿದ್ಯಮಾನಗಳನ್ನೆಲ್ಲ ತಿಳಿದು ಒಗ್ಗಿಸಿಕೊಳ್ಳ ಬೇಕಲ್ಲ" ಅಂದರು. ನಾಯಕಿ ಇದನ್ನಾಗಲೇ ಕರ್ಪೂರ್‌ಚಂದರಲ್ಲಿ ಚರ್ಚಿಸಿ ಇದೇ ಉತ್ತರವನ್ನು ಪಡೆದಿದ್ದಳು.

ಕಾಫಿ ಮುಗಿದು ಅವರು ಕಾರಿನಲ್ಲಿ ಹೊರಟರು. ಸೇಠರು 'ಹ್ಯಾಂಗಿಂಗ್ ಗಾರ್ಡನ್ಸ್' ತೋರಿಸಿ, 'ಮೇರೀನ್ ಡ್ರೈವ್'ನಲ್ಲಿ ಕೆಲವು ನಿಮಿಷಗಳನ್ನು ಕಳೆಸಿ, 'ಗೇಟ್ ವೇ ಆಫ್ ಇಂಡಿಯಾ'ದಲ್ಲಿ ಅವಳೊಡನೆ ಐದು ನಿಮಿಷ ನಿಂತಿದ್ದು, ಜುಹು ತೀರಕ್ಕೆ ಕರೆದುಕೊಂಡು ಹೋಗಿ ಮರಳ ಮೇಲೆ ಅವ ಳೊಡನೆ ಅಡ್ಡಾಡಿ ಮತ್ತೆ ಮನೆಗೆ ತಂದುಬಿಟ್ಟರು. "ಸಂಜೆ ಸೊಗಸಾಗಿ ಕಳೆಯಿತು" ಎಂದು ನಾಯಕಿ ಅವರಿಗೆ ಧನ್ಯವಾದಗಳನ್ನರ್ಪಿಸಿದಳು. ಅವರು "ಹಾಗಾದರೆ ಬಹಳ ಒಳ್ಳೇದಾಯ್ತು; ನಂಗೇನು ಸೊಗಸಾಗಿರ ಲಿಲ್ಲವೆ? ಬಹಳ ಸಂತೋಷವೇ. ನಾಳೆ ಬೇರೆ ಕೆಲವು ಕಡೆಗಳಿಗೆ ಹೋಗಿ ಬರೋಣ. ಸಂಜೆ ಬರುತ್ತೇನೆ" ಎಂದು ಹೇಳಿ ಬೀಳ್ಕೊಂಡರು.

ರಾತ್ರಿ ಊಟಮಾಡಿದಾಗ, ಮಲಗಿ ನಿದ್ದೆ ಹತ್ತದಿದ್ದಾಗ ಅವಳ ತಲೆಯ ತುಂಬ ಬೊಂಬಾಯಿ, ಅವಳ ಭವಿಷ್ಯ ಎರಡು ಮುಖ್ಯವಾಗಿ. ಆ ದಿನ ನೋಡಿದ್ದ ದೃಶ್ಯಗಳೆಲ್ಲ ಮತ್ತೆ ಮತ್ತೆ ಮುಂದೆ ಹಾಯ್ದು ಹೋಗು ತ್ತಿದ್ದವು. ಊರು ಎಷ್ಟು ಆನಂದವನ್ನು ಕೊಟ್ಟಿತೋ ಅದರ ಗಾತ್ರ, ಸಿರಿ, ಮುಂದುವರಿದ ಜನ–ಇವು ಅಷ್ಟು ಬೆದರಿಸುತ್ತಿದ್ದುವು. 'ಇಲ್ಲಿ ಖ್ಯಾತಿ ಯೆಂದರೇನು ಸಾಮಾನ್ಯದ ಮಾತಲ್ಲ" ಎಂದು ನಿಟ್ಟುಸಿರು ಬಿಡುತ್ತಿದ್ದರೆ ಆಗಲೇ ಸೇಠರ ಉತ್ಸಾಹದ, ಆಸಕ್ತಿಯ ಮಾತುಗಳು ಒಂದೊಂದಾಗಿ

ಕೇಳಿಸಿ 'ಆತನಿಗೆ ಒಳ್ಳೆಯ ಅಭಿಪ್ರಾಯ ಹುಟ್ಟಿದ ಹಾಗಿದೆ. ಅವನಿಗಿರೋ ಸಿರಿ, ಅಧಿಕಾರ, ಸಾಮಗ್ರಿಯಲ್ಲಿ ಸರಿಯಾದ ಸಹಾಯ ಸಿಕ್ಕೇ ಸಿಕ್ಕುತ್ತೆ. ತನ್ನಲ್ಲಿ ಶಕ್ತಿಯಿದ್ದರೆ ಯಶಸ್ಸು ಯಾಕೆ ಬರಬಾರದು?' ಎಂದುಕೊಳ್ಳು ತ್ತಿದ್ದಳು. ಈ ಭಯ, ಭರವಸೆಗಳ ಅದಲು ಬದಲು ತುಮುಲ ಒಂದೇ ಸಮನೆ ನಡೆಯುತ್ತಿತ್ತು. ನಿದ್ದೆ ಹತ್ತುವುದಕ್ಕೆ ಮುಂಚೆ ಮನಸ್ಸು ಬೆಂಗಳೂ ರಿಗೂ ಹೋಗಿ ಬಂದಿತು. 'ಅಲ್ಲಿ ಕಂಪನಿ ಹೇಗೆ ನಡೀತಿದೆಯೊ, ನನ್ನ ಪಾತ್ರ ಆ ಹೆಂಗಸು ಹೇಗೆ ನಡೆಸುತ್ತಿದಾಳೋ....ಛಿ, ತಾನೂ ಅಲ್ಲೇ ಇದ್ದು ಬಿಟ್ಟಿದ್ದರೇ ಚೆನ್ನಾಗಿತ್ತೊ? ಕಂಡ ಜಾಗ. ತನ್ನ ವಿಷಯ ಜನಕ್ಕೆ ಚೆನ್ನಾಗಿ ಗೊತ್ತಿತ್ತು. ದುರಾಸೆಯಿಂದ ಇಲ್ಲಿಗೆ ಬಂದಹಾಗಾಯ್ತೊ? ಇದಕ್ಕೇನು ಬೆಲೆ ಕೊಡಬೇಕೋ........ಉಹುಂ, ತಾನಾಗಿ ಆಸೆಪಟ್ಟಿದ್ದಲ್ಲ. ಒಲ್ಲೆ ಅಂತಲೇ ಹೇಳಿಬಿಟ್ಟಿರಲಿಲ್ಲವೆ–ಚಂದು, ಅವರು ಇದ್ದಾಗ? ಅಯ್ಯೋ, ಅವರು ಅಲ್ಲೇ ಇದ್ದಿದ್ದರೆ ತಾನು ಬಿಟ್ಟೇ ಬರುತ್ತಿರಲಿಲ್ಲ. ಆ ಊರೇ ಸಾಕಾಗಿತ್ತು. ಚಂದೂನ ನೋಡಿಕೊಂಡು ಅಲ್ಲೇ ಸುಖವಾಗಿ ಇದ್ದುಬಿಡುತ್ತಿದ್ದಳು. ಯಾರಿಗೆ ಬೇಕಾಗಿತ್ತು, ಈ ದೊಡ್ಡ ಗೊಂದಲ! ಹುಂ........ಎಂಥ ಕೆಲಸ ಮಾಡಿಬಿಟ್ಟರಲ್ಲ, ಅವರು! ಎಷ್ಟು ಕಾಠಿಣ್ಯ! ಅಯ್ಯೋ, ದೇವರೇ!' ಅವಳ ಕಂಠ ಬಿಗಿದು ಬಂದಿತು. ಕಣ್ಣೀರು ತಾನಾಗಿ ಹರಿಯಿತು. ಸ್ವಲ್ಪ ಹೊತ್ತು ಮನಸ್ಸಿಗೆ ಬಂದಷ್ಟು ಅತ್ತುಬಿಟ್ಟಳು. ಮತ್ತೆ ಯೋಚನೆ. 'ಈ ಮಹಾ ಸಾಗರದಲ್ಲಿ ಅವರು ಕಂಡಾರೆ ಎಂದಾದರೂ? ಈ ದಿನ ಕಾರು ನಿಂತಲ್ಲೆಲ್ಲ, ತಾನು ನಿಂತಲ್ಲಿ, ನಡೆದಲ್ಲೆಲ್ಲ, ಎಷ್ಟು ಗಮನವಿಟ್ಟು ಮಕ್ಕಳ, ದೊಡ್ಡವರ, ಮುಖಗಳನ್ನೆಲ್ಲ ನೋಡಿದ್ದಳು. ಹೀಗೇ ಇಲ್ಲಿ ಅವರು ಕಾಣುವ ಸಂಭವವೇ ಇರಲಿಲ್ಲ. ಹುಡುಕುವಂತೆಯೂ ಇರಲಿಲ್ಲ, ತನ್ನ ಜೀವನಾಡಿಯನ್ನು ತಡೆಯದಿದ್ದರೆ........ಆಹಾ ಈ ಮನೆಯಲ್ಲಿ ಚಂದು ಇದ್ದಿದ್ದರೆ!........ ರಾಜನೂ ಇಲ್ಲೇ ತನ್ನ ಪಕ್ಕದಲ್ಲೇ ಇದ್ದಿದ್ದರೆ!' ಆ ಗಳಿಗೆಯಲ್ಲಿ ಅವಳ ಮನಸ್ಸು ಕರೆದಂತೆ ದೇಹವೂ ಕರೆಯಿತು, ಬೇಡಿತು, ಅಂಗಲಾಚಿತು, ಒದ್ದಾಡಿತು. ಎದೆ ಕಾತರಿಸಿತು, ಕೊರಗಿತು ನೊಂದಿತು, ಬೆಂದಿತು. ಅವಳು ನಿಸ್ಸಹಾಯಳಾಗಿ ಎಷ್ಟೋ ಹೊತ್ತು ಹೊರಳಾಡಿ ದಣಿದು ಯಾವಾಗಲೋ ನಿದ್ದೆಹೋದಳು.

ಮುಂದಿನ ಕೆಲವು ತಿಂಗಳಲ್ಲಿ ಅವಳಿಗೆ ಈ ಯೋಚನೆಗಳು ದಿನದಿನವೂ ಚಿತ್ರಹಿಂಸೆಯನ್ನು ಕೊಡುತ್ತಲೇ ಇದ್ದುವು. 'ಹುಂ, ನಾಟಕವಾದರೂ ಮೊದಲಾಗಿಬಿಟ್ಟರೆ, ಇದನ್ನೆಲ್ಲ ಮರೆಯಬಹುದಲ್ಲ' ಎಂದು ಆ ದಿನಕ್ಕಾಗಿ ಹಂಬಲಿಸುತ್ತಿದ್ದಳು.

ಬೊಂಬಾಯಿನಲ್ಲಿ ಎರಡನೆಯ ದಿನವೂ ಸೇಠರು ಅದೇ ಹೊತ್ತಿಗೆ ಬಂದು ಜೋಗೇಶ್ವರಿ, ಕಾಂಡಿವಿಲ್ಲಿ ಗುಡ್ಡಗಳನ್ನು ತೋರಿಸಿದರು. 'ಮೆಟ್ರೋ' ನಲ್ಲಿ ಕಾದಿರಿಸಿದ್ದ 'ಬಾಕ್ಸ್'ನಲ್ಲಿ ಕುಳಿತು ಇಬ್ಬರೂ ಸಿನಿಮಾ ನೋಡಿದರು. ಮನೆಗೆ ಹಿಂದಿರುಗಿ ಸೇಠರು ಬೀಳ್ಕೊಳ್ಳುವವರೆಗೂ ಚಿತ್ರದ ಚರ್ಚೆ ಯಾಯಿತು. ಅವರು ಹೋದ ಸ್ವಲ್ಪ ಹೊತ್ತಿನೊಳಗಾಗಿ ಅವಳ ಯೋಚ ನೆಯ ಹೊಳೆ ಅಲ್ಲಿಂದ ಇಲ್ಲಿಂದ ಹರಿದು ಮತ್ತೆ ಹಳೆಯ ಕಡಲಿಗೇ ಹೋಯಿತು.

ಮುಂದೆರಡು ದಿನಗಳೂ ಸೇಠರು ಬಂದು ಬೊಂಬಾಯಿನ ಪರಿಚಯ ವನ್ನು ಚೆನ್ನಾಗಿ ಮಾಡಿಕೊಟ್ಟರು. ತಮ್ಮ ಬಳಕೆಯನ್ನೂ ಬೆಳೆಸಿಕೊಂಡರು. ಮುಂದಾದರೂ ಯಾವುದೋ ನೋಟಕ್ಕೋ, 'ಪಾರ್ಟಿ'ಗೋ ವಿಹಾರ ಕ್ಕಾಗಿಯೋ–ಒಂದಲ್ಲ ಒಂದು ಕಾರಣವಾಗಿ, ಒಂದಲ್ಲ ಒಂದು ಕಡೆಗೆ ಕರೆದು ಕೊಂಡು ಹೋಗಿ ಬರದ ಸಂಜೆಗಳು ಬಹಳವಿರಲಿಲ್ಲ.

ಹಿಂದಿ ಮೇಷ್ಟರು ಬಂದರು. ಆದರೆ ಅವರ ಕೆಲಸ ಸಾಗಲಿಲ್ಲ. ಆತ ಇಪ್ಪತ್ತೆಂಟು ವರ್ಷದ ಯುವಕ. ಬಹಳ ನಾಚಿಕೆ. ಪಾಠದ ಸಮಯ ದಲ್ಲಂತೂ ಅವನ ಸ್ವಭಾವ ಉಂಡೆಕಟ್ಟಿಕೊಳ್ಳುತ್ತಿತ್ತು. ಬಂದಾಗಿನಿಂದ ಹೋಗುವವರೆಗೂ ಅವಳ ಕಡೆಗೆ ಕದ್ದು ಕದ್ದು ನೋಡುವುದರಲ್ಲೇ ಅವರ ಕಾಲ ಬಹಳ ಕಳೆದುಹೋಗುತ್ತಿತ್ತು. ಇದನ್ನು ಕಣ್ಣಿನ ತುದಿಯಿಂದಲೇ ಕಂಡುಕೊಳ್ಳುವುದು ಅವಳಿಗೆ ವಿನೋದವಾಗಿತ್ತು. ಒಂದೇ ಪುಸ್ತಕದಲ್ಲಿ ಇಬ್ಬರೂ ಬಗ್ಗಿನೋಡುತ್ತ ಹತ್ತಿರ ಕುಳಿತಾಗ ಅವನ ತಲೆಗೂದಲಿನ 'ಪೊಮೋಡ್,' ಮುಖದ 'ಹ್ಯಾಸಲೀನ್ ಸ್ನೋ', ಮಡಿ ಬಟ್ಟೆಯ 'ಯುಡಿ ಕಲೋನ್' ವಾಸನೆಯ ಕಲಸುಮೇಲೋಗರ ಅವಳ ಮೂಗಿನ ಸೆಲೆಯ ನ್ನೊಡೆಯುತ್ತಿದ್ದರೆ, ಅವಳ ಸಮೀಪದಲ್ಲಿ ಅವನ ಉಸಿರೇ ಕಟ್ಟಿದಂತಾಗಿ ಮಾತು ಹೊರಡುವುದೇ ಕಷ್ಟವಾಗಿತ್ತು. ತಡೆಯುತ್ತ ಮುಗ್ಗರಿಸುತ್ತ

ನಡೆಯುತ್ತಿತ್ತು, ಪಾಠ. ಒಂದೊಂದು ವೇಳೆ ಅವಳ ಬೆರಳೋ, ಸೀರೆಯ ಸೆರಗೋ, ಅಲೆ ಕೂದಲೋ ಸೋಕಿದರಂತೂ ಅವನಲ್ಲಿ ವಿದ್ಯುಚ್ಛಕ್ತಿ ಪ್ರವಹಿಸಿ ಅವನ ಮುಖ ಸ್ವಿಚ್ ಹಾಕಿದ ಹೀಟರ್ ತಂತಿಯಂತೆ ಕಾದು ಕೆಂಪಾಗುತ್ತಿತ್ತು. ಇದ್ದದ್ದೂ ತಬ್ಬಿಬ್ಬು. ಈ ನಾಟಕದಲ್ಲೂ ಎರಡೆರಡು ನಿಮಿಷಕ್ಕೆ ವಿರಾಮ ಕಾಲ-ಆ ಹುಡುಗ, ಹಣೆಯ, ಮೇಲು ತುಟಿಯ ಬೆವರನ್ನು ಒರಸಿಕೊಳ್ಳುವುದಕ್ಕೆ. ನಾಲ್ಕು ದಿನಕ್ಕೇ ಶಿಷ್ಯೆಗೆ ಮೇಷ್ಟರ ಸಹವಾಸ ಸಾಕಾಯಿತು. ದಿನದಿನಕ್ಕೂ ಹೆಚ್ಚುತ್ತಿದ್ದ ಸುವಾಸನೆ ತಡೆಯಲು ಅಸಾಧ್ಯವಾಯಿತು. ಅವನ ಬಿಕ್ಕಟ್ಟಿನ ಫಜೀತಿ ಕನಿಕರವನ್ನುಂಟು ಮಾಡಿತು. ಈ ಕಷ್ಟದಿಂದ ಅವನನ್ನು ಪಾರುಮಾಡಿ ತಾನೂ ಪಾರಾಗುವುದಕ್ಕಾಗಿ ಅವಳು ನಾಲ್ಕನೆಯ ದಿನ "ಮೇಷ್ಟರೆ, ನಂಗೆ ಒಳ್ಳೇ ಸ್ವಯಂಬೋಧಿನಿಯನ್ನು ತಂದುಕೊಡಿ. ಪಾಠವಿಲ್ಲದಾಗ ನಾನೇ ಓದುಕೊಳ್ಳುತ್ತೀನಿ. ಈ ವಯಸ್ಸಿನಲ್ಲಿ ಮಕ್ಕಳ ಪಾಠವೇನು ಬೇಕೇ ಇಲ್ಲ. ನೀವು ಪುಸ್ತಕಗಳನ್ನು ತಂದು ಓದಿದರೆ ಕಷ್ಟವಾದುದನ್ನೆಲ್ಲ ನಾನೇ ಕೇಳಿ ತಿಳಿದುಕೋತೀನಿ. ಹಿಂದೀಲೇ ಮಾತೂ ಆಡುತ್ತ ಅಷ್ಟಿಷ್ಟು ತಿದ್ದಿಕೊಂಡರಾಯ್ತು" ಎಂದಳು. ಅಂದಿನಿಂದ ಪಾಠ ಈ ರೀತಿ ನಡೆಯುತ್ತಿತ್ತು. ಅವಳೇ ಪುಸ್ತಕ ಪತ್ರಿಕೆಗಳನ್ನು ತರಿಸಿ ಓದಿ, ತೊಡಕನ್ನು ಗುರುತುಮಾಡಿಟ್ಟುಕೊಳ್ಳುತ್ತಿದ್ದಳು-ಚರ್ಚೆಗೆ. ಅವಳ ಹೊಸ ಮನಸ್ಸಿಗೆ ಹಿಂದಿ ಸುಲಭವಾಗಿ ಹತ್ತುತ್ತಿತ್ತು. ಅಲ್ಲದೆ ಈ ಆಲಸ್ಯದ ಜೀವನ ಬೇಸರವಾಗಿ, ನಾಟಕಕ್ಕೆ ಆತುರವಾಗಿ ಅವಳು ಈ ಪಾಠದಲ್ಲಿ ವಿಶೇಷ ಆಸಕ್ತಿ ಹೊಂದಿ ಹಗಲೆಲ್ಲ, ರಾತ್ರಿಯೂ ಬಹಳ ಹೊತ್ತು, ಬಹಳ ಕಷ್ಟಪಡುತ್ತಿದ್ದಳು. ದಿನದಿನಕ್ಕೂ ಮೇಷ್ಟರಿಗೆ ಆಶ್ಚರ್ಯ. ಸ್ವಲ್ಪ ದಿನಗಳಲ್ಲೇ ಅವಳು ಮೇಷ್ಟರೊಡನೆ, ಸೇಠರೊಡನೆ, ಆಳು ಅಡಿಗೆಯವರೊಡನೆ-ಯಾವಾಗಲೂ ಹಿಂದಿಯಲ್ಲೇ ಮಾತನಾಡಿದಳು. ತನ್ನ ತಪ್ಪುಗಳಿಗಾಗಿ ತಾನೇ ನಕ್ಕಳು. ಬೇಗ ಬೇಗ ಅವರಿಂದ ತಿಳಿದು ತಿದ್ದಿಕೊಂಡಳು. ಈ ತಯಾರಿಗೆ ಆರು ತಿಂಗಳ ಗಡುವು ಇದ್ದರೂ ಅವಳು ನಾಲ್ಕು ತಿಂಗಳೊಳಗಾಗಿ ಪುಸ್ತಕ, ಪತ್ರಿಕೆ, ಸುಲಭ ಪದ್ಯಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಸರಿಯಾದ ಉಚ್ಚಾರಣೆಯಿಂದ ಮಾತನಾಡುವುದನ್ನು ಕಲಿತು, ತಾನು ರಂಗಭೂಮಿಗೆ ಸಿದ್ಧ

ಳಾಗಿರುವುದಾಗಿ ಸೇಠರಿಗೆ ತಿಳಿಸಿದಳು. ಅವಳ ಚುರುಕು ಬುದ್ಧಿಯನ್ನೂ, ನಿಷ್ಠೆಯನ್ನೂ, ಆತ್ಮ ಭರವಸೆಯನ್ನೂ ತಿಳಿದಿದ್ದು, ಅವಳೊಡನೆ ಮಾತ ನಾಡುತ್ತ ಅವಳ ಹಿಂದಿ ಜ್ಞಾನದ ಅಭಿವೃದ್ಧಿಯನ್ನು ಕಂಡು ಮೆಚ್ಚಿ ಕೊಂಡಿದ್ದ ಸೇಠರಿಗೆ ಅವಳ ನಿರ್ಧಾರವೇನು ಆಶ್ಚರ್ಯವನ್ನುಂಟುಮಾಡಲಿಲ್ಲ. ಒಪ್ಪಿದರು.

-೧೨-

ಈವರೆಗಾಗಲೇ ಅವಳು ಅನೇಕ ನಾಟಕಗಳಿಗೆ ಹೋಗಿ ಬಂದಿದ್ದಳು. ಹಿಂದಿ ಚಿತ್ರಗಳನ್ನಂತೂ ಬೆಂಗಳೂರಿನಿಂದಲೂ ಎಷ್ಟೋ ನೋಡಿದ್ದಳು. ಇವನ್ನು ಹೆಚ್ಚು ಹೆಚ್ಚು ನೋಡಿದಷ್ಟೂ ಅವಳಿಗೆ ಸೇಠರ ಉಗ್ರ ಟೀಕೆಯ ಸತ್ಯ ಹೆಚ್ಚು ಹೆಚ್ಚಾಗಿ ಕಂಡುಬರುತ್ತಿತ್ತು. ತನ್ನ ಧೈರ್ಯ ಬಲವಾಗುತ್ತಿತ್ತು. ಭರವಸೆ ಬೆಳೆಯುತ್ತಿತ್ತು. ಇಲ್ಲಿಯ ನಟಿಯರಿಗೆ ದೇಹ ಪ್ರದರ್ಶನದ ಆಕರ್ಷಣೆ ಮುಖ್ಯವಾಗಿ, ಅಭಿನಯದ ಆಕರ್ಷಣೆ ಎರಡನೆಯದಾಗಿದ್ದಿತೆಂದು ಅವಳಾಗಲೇ ಕಂಡುಕೊಂಡಿದ್ದಳು. ಇದೇನು ಅಭಿನಯ ಶಕ್ತಿಯ ಅಭಾ ವವೋ, ಅಗ್ಗದ ಪ್ರಖ್ಯಾತಿಯ ಸೆಳೆತವೋ, ಏನೋ, ಅಂತೂ ಇದರಿಂದ ಅವರ ಹಾವ ಭಾವ ವಿಲಾಸದ ಹುಚ್ಚು, ಶಿವಪೂಜೆಯಲ್ಲಿ ಕರಡಿಯನ್ನು ಬಿಟ್ಟಂತೆಯೇ ದೃಶ್ಯಗಳಲ್ಲಿ ಆಭಾಸವನ್ನುಂಟುಮಾಡುತ್ತಿತ್ತು. ಈ ಗುಂಡಿಯ ಮೇಲೆ ಗಮನವನ್ನಿಟ್ಟುಕೊಂಡು ಅವರಂತೆ ಬೀಳದಿದ್ದರೆ ಯತ್ನ ಅರ್ಧ-ಮುಕ್ಕಾಲು ಯಶಸ್ವಿಯಾದಂತೆಯೇ ಎಂದು ನಾಯಕಿ ನಿರ್ಧರಿಸಿಕೊಂಡಳು. ಪಾತ್ರದೊಂದಿಗೆ ಹೊಂದಿಕೊಳ್ಳುವುದು ಅವಳಿಗೆ ಸಾಧಿಸಿದ್ದ ಕಲೆ. ಅಂದ ಮೇಲೆ ಪೂರ್ಣ ಜಯ ಸಿಕ್ಕದಿರಲಾರದೆಂದು ಅವಳ ನಂಬಿಕೆ.

ಒಂದು ದಿನ ಸೇಠರು ತಮ್ಮ 'ಪಾರಸೀ ಕಂಪನಿ'ಯ 'ರಿಹರ್ಸಲ್'ಗೂ ಕರೆದುಕೊಂಡು ಹೋಗಿದ್ದರು. ಅಲ್ಲೀ ಅವಳು ಮೊದಲು ರಾಜ್‌ಬಹದ್ದೂರ ನನ್ನು ಮುಖತಃ ಕಂಡಿದ್ದುದು. ಅವನ ಹೆಸರು ಅವಳಿಗಾಗಲೇ ಪರಿಚಿತ ವಾಗಿತ್ತು. ಸಿನಿಮಾಗಳಲ್ಲಿ ಅವನ ಅಭಿನಯವನ್ನು ನೋಡಿದ್ದಳು. 'ಆಕರ್ಷಕ ವಾಗಿದಾನೆ, ಒಳ್ಳೆಯ ನಟನೂ' ಎಂದುಕೊಂಡಿದ್ದಳು. ಬೆಂಗಳೂರಿನಲ್ಲಿ 'ಸಿನಿಮಾ ಪ್ರಪಂಚ'ವನ್ನು ಓದಿದ್ದಾಗಲೆಲ್ಲ ಅವನ ವಿಷಯವೇನಾದರೂ

ಇದ್ದೇ ಇರುತ್ತಿತ್ತು. ಅವನು ವಹಿಸಿದ್ದ ಪಾತ್ರದ ಚಿತ್ರಗಳು ಬೇಕಾದಷ್ಟು ಇರುತ್ತಿದ್ದುವು. ಅವನು ಭಾಗವಹಿಸಿದ್ದ ಚಿತ್ರಗಳ ವಿಮರ್ಶೆಯಲ್ಲಿ ಅವನ ಪ್ರಶಂಸೆಯೇ ತುಂಬಿರುತ್ತಿತ್ತು. ಅವನ ಬಟ್ಟೆಬರೆ, ಅವನ್ನು ಹೊಲಿಯುವ ದರ್ಜಿ ಕಂಪನಿ, ಅವನಿಗೆ ಇಷ್ಟವಾದ ಸಿಗರೇಟು ಬ್ರಾಂಡ್, ಅವನು ಉಪಯೋಗಿಸುವ ಸೆಂಟ್, ಸ್ನೋ, ಷೂ, ಟೈಗಳು; ಅವನ ಕ್ರಾಪಿನ ರೀತಿ, ಮೀಸೆಯ ವರಸೆ, ವೇಷದ ವೈಖರಿ; ಸಣ್ಣ ಪುಟ್ಟ ಮಾತುಗಳು, ಆಟಗಳು, ಕೆಲಸಗಳು; ಕೈಬೀಸುವ, ಕಾಲಾಡಿಸುವ, ಭುಜ ಕುಣಿಸುವ, ಹುಬ್ಬು ಹಾರಿಸುವ, ಕಣ್ಣು ಮಿಟಕಿಸುವ, ಸೊಟ್ಟ ತುಟಿಯಿಂದ ನಗುವ, ನೂರೊಂದು ಸ್ವಭಾವ ಚೇಷ್ಟೆಗಳು; ಅವನ ಗೃಹಕೃತ್ಯದ ವಿವರ, ಸಾಮಾನ್ಯ ಮತ್ತು ವಿಚಿತ್ರ ಅಭ್ಯಾಸಗಳು, ಹವ್ಯಾಸಗಳು, ವಿಲಾಸಗಳು; ಆ ನಟಿ, ಈ ನಟಿ, ಯಾವ ಯಾವ ಹೆಂಗಸರೊಡನೆಲ್ಲ ನಡೆಸಿದ ಸಲಿಗೆ, ಇಟ್ಟುಕೊಂಡ ಸಂಬಂಧದ 'ಗಪ್'; ಅವನ ಮದುವೆಯ ಮೇಲಿನ ಮತ್ತು ಮುಂದಿನ ಚಿತ್ರಗಳ ಮೇಲಿನ ಊಹಾಪೋಹಗಳು—ಎಲ್ಲವೂ ಪತ್ರಿಕೆಗಳಲ್ಲಿ ಬಿಸಿಬಿಸಿಯಾಗಿ, ರುಚಿರುಚಿಯಾಗಿ ವರದಿಯಾಗುತ್ತಿದ್ದುವು. ಈ ಪತ್ರಿಕೆಗಳು ಅವನಿಗೆ ಸ್ವಂತ ಬಾಳೇ ಇಲ್ಲ—ಎಲ್ಲ ಸಾರ್ವಜನಿಕ; ಸಿನಿಮಾ ಪ್ರಪಂಚದ ಚರಿತ್ರೆಯ ಮುಖ್ಯ ಭಾಗ ಅವನ ಚರಿತ್ರೆ ಎನ್ನುವ ಅಭಿಪ್ರಾಯವನ್ನುಂಟುಮಾಡುತ್ತಿದ್ದುವು. ಇವನು ಭಾರತದ 'ಡಾನ್ ಜಾನ್' ಎಂದದ್ದನ್ನು ಕೇಳಿದ್ದಳು. ಬೊಂಬಾಯಿನಲ್ಲೂ ಅವೇ ಪತ್ರಿಕೆಗಳೇ, ಅದೇ ಸುದ್ದಿ—ಹೆಚ್ಚು ಪತ್ರಿಕೆ, ಹೆಚ್ಚು ಸುದ್ದಿ, ಅಷ್ಟೆ. ಯುವತಿಯರು ಅವನ ಚಿತ್ರಗಳನ್ನು ಕತ್ತರಿಸಿ ಪುಸ್ತಕಗಳಲ್ಲಿಟ್ಟುಕೊಂಡು ಅವನ ಕನಸು ಕಾಣುತ್ತಿದ್ದರೆಂದು ಕೇಳಿದ್ದರೆ, ಅನೇಕ ಯುವಕರು ಅವನ ಕ್ರಾಪು ಮೀಸೆಗಳಿಂದ ಮೊದಲಾಗಿ ಅವನ ಸ್ವಭಾವ ಚೇಷ್ಟೆಗಳನ್ನು ಪೂರ್ತಿಯಾಗಿ ಅನುಕರಿಸುತ್ತ, ರಾಜಬಹದ್ದೂರ್ 'ಮರಿ' ಗಳಂತೆ ಕಾಣಲು ಹೆಣಗುತ್ತಿದ್ದುದನ್ನು ಕಂಡೇ ಇದ್ದಳು; ವಿನೋದವನ್ನೂ ಹೊಂದಿದ್ದಳು. ಬೊಂಬಾಯಿನ ಚೌಕ ಚೌಕಗಳಲ್ಲಿ ಅವನ ನಾಟಕ ಮತ್ತು ಸಿನಿಮಾಗಳ ಬೋರ್ಡುಗಳು, ಅವನ ಚಿತ್ರ, ಹೆಸರು—ದಪ್ಪ ಅಕ್ಷರಗಳಲ್ಲಿ. ಮನೆಯಲ್ಲಿ ಸೇವಕರು ಮಾತಾಡಿಕೊಂಡಾಗಲೂ ಅವನ ವಿಷಯ ಕೇಳಿಬರುತ್ತಿತ್ತು. ಇವುಗಳಿಂದೆಲ್ಲ ಅವನು ಸಿನಿಮಾ 'ಫ್ಯಾನ್'ಗಳ ಆರಾಧ್ಯಮೂರ್ತಿ,

ಇಲ್ಲಿಯ ಸಿನಿಮಾ ಜಗತ್ತಿನ ಅಧಿನಾಯಕ ಎಂದುಕೊಂಡಿದ್ದಳು. ಸೇಠರೂ ಅವನ ವಿಷಯವನ್ನು ಎಷ್ಟೋ ಬಾರಿ ಮಾತನಾಡುತ್ತ, ಅವನಿಗೆ ತಕ್ಕ ನಟಿಯೊಬ್ಬಳು ಸಿಕ್ಕಿದರೆ ನಾಟಕದಿಂದ, ಸಿನಿಮಾದಿಂದ ಚಿನ್ನದ ಮಳೆಯನ್ನೇ ಸುರಿಸಬಹುದೆಂದಿದ್ದರು. ನಾಯಕಿಯೂ ಈ ಅಭಿಪ್ರಾಯ ಪ್ರವಾಹದಲ್ಲಿ ತೇಲುತ್ತ 'ನಾನು ಇವನಿಗೆ ಸರಿಯಾದರೆ! ಆದೇನೆ?' ಎಂದು ಆಶಿಸುತ್ತಿದ್ದಳು, ಪ್ರಶ್ನಿಸಿಕೊಳ್ಳುತ್ತಿದ್ದಳು, ಅದಕ್ಕಾಗಿ ಹಂಬಲಿಸುತ್ತಿದ್ದಳು. ಆ ದಿನ ರಿಹರ್ಸಲ್‌ನಲ್ಲಿ ಅಂತಹ ಮಹನೀಯನನ್ನು ಪ್ರತ್ಯಕ್ಷವಾಗಿ ಕಂಡಿದ್ದಳು. ಸೇಠರು ಇಬ್ಬರಿಗೂ ಪರಿಚಯಮಾಡಿಕೊಟ್ಟಾಗ ಎಡದ ಕೈಯಲ್ಲಿ ಸಿಗರೇಟನ್ನು ಹಿಡಿದುಕೊಂಡೇ ಬಲದ ಕೈ ನೀಡಿದ್ದ. ಅವಳು ನೀಡಿದ ಕೈಯನ್ನು ಸ್ವಲ್ಪ ಬಲವಾಗಿಯೇ ಕುಲುಕಿ ಹೊಸ ಚಿತ್ರವನ್ನು ನೋಡುವಂತೆ ಅವಳನ್ನು ದಿಟ್ಟಿಸಿದ್ದ. ನಾಯಕಿ ನಮ್ರಳಾಗಿ "ತಮ್ಮನ್ನು ಪರೋಕ್ಷವಾಗಿ ಕಂಡಿದ್ದೆ. ಪ್ರಖ್ಯಾತಿಯನ್ನು ಕೇಳಿದ್ದೇನೆ" ಎಂದಾಗ ಅವನು "ಊಹೂಂ!" ಎಂದು ತಲೆಯನ್ನು ವಾರೆಮಾಡಿ, ಕಣ್ಣನ್ನು ಅಗಲವಾಗಿ ಬಿಟ್ಟು, ಹುಬ್ಬನ್ನೆತ್ತರಿಸಿ ನಕ್ಕಿದ್ದ. 'ಇದನ್ನು ನನಗೆ ಹೇಳಬೇಕಾಗಿದ್ದಿತೆ?' ಎನ್ನುವ ಅಭಿಪ್ರಾಯವನ್ನು ಈ ಅಭಿನಯದಲ್ಲಿ ಅವಳು ಕಂಡುಕೊಂಡಿದ್ದಳು. ಸೇಠರು ಅವನಿಗೆ "ಇವರೂ ನಿಮ್ಮ ಗೋತ್ರದೋರೆ. ಇವತ್ತಲ್ಲ ನಾಳೆ ಇಲ್ಲಿಗೇ ಬರುತ್ತಾರೆ" ಎಂದು ಹೇಳಿದಾಗ "ತುಂಬ ಸಂತೋಷ. ಸಂಖೆ ಹೆಚ್ಚಿದಷ್ಟೂ ವಿನೋದ ಹೆಚ್ಚು, ಅಹ್ಹಹ್ಹಾ!" ಎಂದು ಮತ್ತೂ ನಕ್ಕಿದ್ದ. ನಾಯಕಿಗೆ ಇದು 'ಹತ್ತರಲ್ಲಿ, ನೂರರಲ್ಲಿ, ಇವಳೊಬ್ಬಳು' ಎಂದ ಹಾಗಾಗಿತ್ತು. ಸೇಠರು "ಇವರು ಬೆಂಗಳೂರು ಕಂಪನಿಯಲ್ಲಿ ಬಹಳ ಹೆಸರು ಗಳಿಸಿದ್ದಾರೆ. ಅಲ್ಲಿಂದಲೇ ಕರೆತಂದದ್ದು" ಎಂದಾಗ ಅವನು "ಸರಿ, ಸರಿ. ಈ ಹೊರಗಿನ ಕಂಪನಿಗಳು ತಾನೆ ನಮಗೆ ಉಪನದಿಗಳು. ಆಗಲೇ ಎಷ್ಟೋ ಜನ ಬಂದಿದಾರಲ್ಲ.... ಅಪ್ಪಣೆಯಾದರೆ........" ಎಂದು ಅಭ್ಯಾಸಕ್ಕೆ ಹಿಂದಿರುಗಿದ್ದ. ನಾಯಕಿ 'ಎಷ್ಟೊಂದು ಅಲಕ್ಷ್ಯ! ಅಥವ ಅಸೂಯೆ-ಛೇ, ಅದಕ್ಕೇನು ಕಾರಣ ಇನ್ನೂ; ಅಲಕ್ಷ್ಯವೇ, ಅಲಕ್ಷ್ಯದ ಧೋರಣೆಯೇ........ಹುಂ, ತಾನೆಲ್ಲಿ, ಅವನೆಲ್ಲಿ ಇಷ್ಟಕ್ಕೂ. ನ್ಯಾಯವೇ' ಎಂದು ನೊಂದುಕೊಂಡು ಖಿನ್ನಳಾಗಿದ್ದಳು. ಆಶಾಭಂಗವಾಗಿತ್ತು. ಆದರೂ ಹಾಗೇ 'ಅಲ್ಲ, ಅವನ

ಸ್ವಭಾವವೇ ಹಗುರವೋ. ಅವನ ಮಾತು ಹಗುರವಾದರೂ ಅವನ ನೋಟ ಹಗುರವಾಗಿತ್ತೆ? ಇಲ್ಲ ಅನ್ನಿಸಿತಲ್ಲ. ಮತ್ತೆ ಮತ್ತೇಕೆ ಹಾಗೆ ನೋಡುತ್ತಿದ್ದ? ಹುಂ, ಈವರೆಗೆ ಗಂಡಿನ ಆ ನೋಟ ತನಗಷ್ಟು ಗೊತ್ತಿಲ್ಲವೆ? ಮಾತು ಹೊದಿಕೆ ಮಾತ್ರವೋ. ಅದೂ ಅಲ್ಲದೆ ಮಾತನ್ನು ತಪ್ಪಾಗಿ ತಿಳಿದೆನೋ–ನನ್ನ ಹೀನಾಯದಿಂದ? ಅವನದು ಯಾವುದು ನಿಜ, ಯಾವುದು ಅಭಿನಯ?' ಎಂದು ಅನುಮಾನದಲ್ಲಿ ಒದ್ದಾಡಿ ಕಡೆಗೆ 'ಇರಲಿ, ಇದು ಸ್ಪಷ್ಟವಾಗುವ ಕಾಲವೂ ಬರುತ್ತದಲ್ಲ' ಎಂದು ಸ್ವಲ್ಪ ಸಮಾಧಾನ ತಂದು ಕೊಂಡಿದ್ದಳು. ಸೇಠರಲ್ಲಿಯೂ ಅವನು ಬಹಳ ಸಲಿಗೆಯಿಂದಲೇ ನಡೆದು ಕೊಂಡಿದ್ದ. 'ನನ್ನನ್ನು ಬಿಟ್ಟರೆ ನಿಮ್ಮ ಕಂಪನಿಯ ಗತಿಯಾಯ್ತು; ನಂಗೇನು ಒಂದಲ್ಲ ಒಂದು ಕಂಪನಿ ಇದ್ದೇ ಇದೆ' ಎನ್ನುವ ಧೋರಣೆ. ಸೇಠರೂ ಇದನ್ನರಿತೋ, ಅವನ ಕಲೆಯನ್ನು ಗೌರವಿಸಿಯೋ, ಅಥವ ತುಂಟ ಮಕ್ಕಳಲ್ಲಿ ತಂದೆಗಿರುವ ಸಹನೆಯಿಂದಲೋ–ಈ ಸಂಬಂಧಕ್ಕೆ ಅವಕಾಶ ಕೊಟ್ಟಿದ್ದರೆಂದೆನ್ನಿಸಿತ್ತು.

ಸೇಠರು ಇತರ ನಟ ನಟಿಯರನ್ನೂ ಪರಿಚಯ ಮಾಡಿಕೊಟ್ಟಿದ್ದರು. ಅವರೂ ಇವಳೊಡನೆ ಸ್ವಲ್ಪ ಬಿಗುಮಾನದಿಂದಲೇ ನಡೆದುಕೊಂಡಿದ್ದರು. ಅದರಲ್ಲೂ ಮುಖ್ಯ ಪಾತ್ರ ವಹಿಸಿದ್ದ ಲೀಲ ಸೇಠರಿಗಾಗಿ ನಾಯಕಿಯಲ್ಲಿ ಅನುಗ್ರಹ ತೋರಿಸಿದಂತೆ ನಡೆದುಕೊಂಡಿದ್ದಳು. ಆದರೆ ನಾಯಕಿ ಇದನ್ನು ಹೆಚ್ಚಾಗಿ ಗಮನಕ್ಕೆ ತಂದುಕೊಂಡಿರಲಿಲ್ಲ. ಆದರೆ ಲೀಲ ಸೇಠರಲ್ಲಿ ತೋರಿ ಸಿದ್ದ ವಿನ್ಯಾಸ ವಿಲಾಸದ ಅಗ್ಗವಾದ ನಡೆವಳಿಕೆ ಇವಳಿಗೇ ನಾಚಿಕೆಯನ್ನು ತಂದಿತ್ತು. 'ಇಂಥವರೇ ಕಲೆಯನ್ನು ಕೆಸರಿನಲ್ಲಿ ಎಳೆದಿರುವವರು' ಎಂದು ಕೊಂಡಿದ್ದಳು.

ಬಹದ್ದೂರನ ಧೋರಣೆ ಇತರರಲ್ಲಿಯೂ ಹಾಗೇ–ಇನ್ನೂ ಹೆಚ್ಚು, ಎಂದು ಆ ರಿಹರ್ಸಲ್‌ನಿಂದ ಗೊತ್ತಾಗಿತ್ತು. ಅವನ ಸ್ವಭಾವ ಚೇಷ್ಟೆಗಳೂ. ಆಗ ಸಂಪೂರ್ಣ ಸ್ವಾತಂತ್ರ್ಯ ಹೊಂದಿ ತಾವೇ ತಾವಾಗಿದ್ದಂತೆ ತೋರಿತ್ತು. ಇದನ್ನೇ ಅಭಿನಯವೆಂದು ತಪ್ಪು ತಿಳಿದು ಜನಗಳು ಮೋಸಹೋಗಿದ್ದಾರೋ ಎಂದೆನ್ನಿಸುವ ಅನುಮಾನ ಬಂದಿತ್ತು, ನಾಯಕಿಗೆ. ಹಾಗೇ 'ಇಲ್ಲಿ ಮಾತ್ರ ಹೀಗೆ ನಡೆದುಕೊಳ್ಳುತ್ತಿರಬಹುದು, ಅಷ್ಟೆ. ಇದನ್ನು ಹಗುರವಾಗಿ ಭಾವಿಸಿ

ಕೊಂಡಿರಬಹುದು' ಎಂದುಕೊಂಡಿದ್ದಳು. ಈ ಅಲಕ್ಷ್ಯದ ಅಭಿನಯದಿಂದ ನಾಯಕಿಗೆ ಸ್ವಲ್ಪ ಆಶಾಭಂಗವಾಗಿದ್ದರೆ, ನಟವರ್ಗದೊಡನೆ, ಅದರಲ್ಲಿಯೂ ನಟಿಯರೊಡನೆ ಅವನು ನಡೆಸುತ್ತಿದ್ದ ಸರಸ, ವಹಿಸುತ್ತಿದ್ದ ಸ್ವಾತಂತ್ರ್ಯ, ಇವನ್ನು ಕಂಡು ಗಾಬರಿಯೇ ಆಗಿತ್ತು. ನಟನಾಗಿದ್ದರೂ ತಾನೇ ನಿರ್ದೇಶಕನಂತೆ "ಇಲ್ಲಿ ನಿಲ್ಲು, ಹೀಗೆ ನಿಲ್ಲು" ಎಂದು ಮುಂತಾಗಿ ಕೈಹಿಡಿದು ಎಳೆಯುವುದು; 'ಆಹಾ!' ಎಂದು ಅಲ್ಲಗಳೆಯುತ್ತ ಕೆನ್ನೆ ತಿವಿಯುವುದು, ಚಿಗುಟುವುದು; 'ನೋಡು ಮತ್ತೆ!' ಎಂದು ಬೆದರಿಸುತ್ತ ಎರಡು ಭುಜಗಳನ್ನು ಹಿಡಿದು ಕುಲುಕುವುದು, ಕಿವಿ ಹಿಂಡುವುದು, ಜಡೆ ಜಗ್ಗುವುದು ಇವೆಲ್ಲವೂ ಅವನ ವಿನೋದಗಳಲ್ಲಿ ಸೇರಿದ್ದುವು. ಹೀಗೆ ಅವನು ಕೊಡುತ್ತಿದ್ದ ಗಮನಕ್ಕಾಗಿ ಹುಡುಗಿಯರು ಹಾತೊರೆಯುತ್ತಿದ್ದಂತಿತ್ತು. ಅವರು ಹೆಮ್ಮೆ ಸಂತೋಷಗಳಿಂದಲೇ ನಲಿಯುತ್ತಿದ್ದರು; ಕಿಲಕಿಲನೆ ನಗುತ್ತಿದ್ದರು; ಮುಖ ತಿವಿಸಿಕೊಂಡು ಜಡೆ ಎಳೆಸಿಕೊಂಡು, ಕಿವಿ ಹಿಂಡಿಸಿಕೊಂಡು, ಬಹಳ ನೊಂದವರಂತೆ 'ಹಾ!' ಎಂದು ಕೃತಕವಾಗಿ ಕೂಗಿ ಮುಖವನ್ನು ವಿಧವಿಧವಾಗಿ ಮಾಡಿ, ಹುಸಿ ಮುನಿಸನ್ನು ನಟಿಸಿ, ಮುದ್ದಾಗಿ ಅವನನ್ನು ಬೈದು ಮತ್ತಷ್ಟು ಕೆಣಕಲು ಯತ್ನಿಸುತ್ತಿದ್ದರು; ಅವನು ಹತ್ತಿರ ಸುಳಿದ ಸಮಯಗಳಲ್ಲಿ ತಮ್ಮನ್ನು ಹಿಂಬಾಲಿಸಿ ಹಿಡಿಯಲೆಂದು ಬೇಕಾಗಿ ಅವನಿಂದ ಜಾರಿಕೊಳ್ಳುತ್ತಿದ್ದರು; ಸಿಕ್ಕಿಬಿದ್ದಂತೆ ಮಾಡಿ 'ಹೋ! ಹೋ!' ಎಂದು ನಗುತ್ತಿದ್ದರು. ಈ ಚೆಲ್ಲಾಟ ಅವನ ಚೇಷ್ಟೆಗೆ ಹೆಚ್ಚು ಉತ್ತೇಜನ ಕೊಡುತ್ತಿತ್ತು. ಅದರ ಉದ್ದಿಶ್ಯವಾದರೂ ಅದೇ ಎಂದೆನಿಸುತ್ತಿತ್ತು. ಅಲ್ಲಿದ್ದವರೆಲ್ಲರೂ ಈ ಲೀಲೆಯನ್ನು ನೋಡಿ ನಕ್ಕು ಆನಂದಿಸುತ್ತಿದ್ದರು, ತಮ್ಮ ತಮ್ಮ ನೆರವು ಪ್ರೋತ್ಸಾಹಗಳನ್ನು ಸಮಯೋಚಿತವಾಗಿ, ಅನುಚಿತವಾಗಿಯೂ, ಕೊಡುತ್ತಿದ್ದರು. ಈ ಹಾಸ್ಯ ಪರಿಹಾಸ್ಯಕ್ಕಾಗಿಯೇ ರಿಹರ್ಸಲ್ ಏರ್ಪಟ್ಟಂತಿತ್ತು. ಇಂತಹದೆಲ್ಲ ಅಭ್ಯಾಸದ ಹೊರಗಿನ ಆಟವಾದರೆ, ಪ್ರೇಮಾಭಿನಯದ ಸಮಯದಲ್ಲಿಯೂ ಅವನು ಬಹಳ ಧಾರಾಳವಾಗಿಯೇ ಇದ್ದಂತೆ ನಾಯಕಿಗೆ ಕಂಡಿತ್ತು. ಈ ಲೀಲಾಳಂತೆ ತಾನೂ ಆ ಗಾಢಾಲಿಂಗನ, ಗಲ್ಲ ಹಿಡಿದ ಮುದ್ದು, ಸೊಂಟಕ್ಕೆ ಕೈ, ತಲೆ ತಡವು, ಕೆನ್ನೆ ಕೆನ್ನೆಯ ಸೋಂಕು–ಇವನ್ನೆಲ್ಲ ಸಹಿಸಬಲ್ಲಳೆ ಎಂದು ಯೋಚನೆಗೊಳಗಾಗಿದ್ದಳು. ಬೆಂಗಳೂರಿನ ಕಂಪನಿ

ುಲ್ಲಿ ಇಷ್ಟೊಂದು ಸ್ವಾತಂತ್ರ್ಯವಿರುತ್ತಿರಲಿಲ್ಲ. ನಾಟಕಗಳಲ್ಲಿ ಪ್ರಣಯಾ
ಿನಯ ಒಂದು ನಿಲುವು, ಒಂದು ನೋಟ, ಒಂದು ನುಡಿ, ಒಂದು ನಸುನಗೆ,
ುಸಿ ಮುನಿಸು—ಹೀಗೆ ಅನೇಕಾನೇಕ ವಿಧಗಳಲ್ಲಿ ಸೂಕ್ಷ್ಮವಾಗಿ, ಸೂಚ್ಯ
ಾಗಿ, ಗಂಭೀರವಾಗಿಯೇ ಪರಿಣಾಮಕಾರಿಯಾಗುವಂತೆ ನಡೆಯಬಹು
ಂದು ಅವಳ ತಿಳಿವಳಿಕೆ. ಈ ದೈಹಿಕದ ಒತ್ತಾಯ ಅನವಶ್ಯಕವಾದ ಕೆಳ
ಟ್ಟದ ಒರಟುತನ, ಗ್ರಾಮ್ಯ ಎನಿಸಿತ್ತು; ಪ್ರೇಕ್ಷಕರಲ್ಲಿ ಕಡೆಯ ವರ್ಗದವ
ನ್ನು ಕೆಣಕುವುದಕ್ಕೆ, ಮೆಚ್ಚಿಸುವುದಕ್ಕೆ, ಅಗ್ಗವಾದ ಪ್ರಶಂಸೆಗೆ, ಎಂದು
ೊಂಡಿದ್ದಳು. ಲೀಲೆಗೇನೋ ಈ ಆಟ ಬೇಕಾಗಿರಬಹುದು, ಅದಕ್ಕೇ
ಪ್ಪಿರಬೇಕು. ಯಾಕೆ, ಅವಳು ಅವನನ್ನು ಸುಮ್ಮನೆ ಪೂಜಿಸುತ್ತಿದ್ದ
ಂದೇ ನಾಯಕಿಗೆ ಹೊಳೆಯಿತು. ಈ ಪ್ರಶಸ್ತಿಗೆ ಅನೇಕ ನಟಿಯರು
ಪೋಟಿ ನಡೆಸುತ್ತಿದ್ದರೆಂದು ತಾನು ಕೇಳಿರಲಿಲ್ಲವೆ? 'ಆದರೆ ತನ್ನ ಬಗೆ
ೇನು?' ಎಂಬ ಪ್ರಶ್ನೆಯೂ ಎದ್ದಿತ್ತು. 'ಅವನಿಗೆ ತನ್ನ ಇಷ್ಟವನ್ನು
ೂಚಿಸಿದರಾಯಿತು. ತಿಳಿದುಕೊಂಡು ನಡೆದಾನು' ಎಂದು ಸಮಾಧಾನ
ನ್ನು ತಂದುಕೊಂಡಿದ್ದಳು. ಆದರೂ ತಾನು ಬೆಂಗಳೂರಿಗೆ ಹಿಂದಿರುಗುವ
ೃಶ್ಯವೂ ಅವಳ ಕಣ್ಣು ಮುಂದೆ ಹಾಯ್ದಿದ್ದಿತು. ಅಂದಿನಿಂದ, ಅವಳಿಗೆ
ನ್ನ ಅಭಿನಯದ ಬಗ್ಗೆ ಇದ್ದ ಭಯ ಹೋಗಿ, ಈ ನಡೆವಳಿಕೆಯ ಬಗ್ಗೆ
ಿರಿಕಿರಿಗೆ ಎಡೆಗೊಟ್ಟಿತ್ತು.

ಇದಾದ ಮೇಲೆ ನಾಲ್ಕಾರು ಬಾರಿ ನಾಯಕಿ, ಬಹದ್ದೂರ್-ಇವರ
ೇಟಿಯಾದಾಗಲೂ ಅವನು ಅದೇ ಅಲಕ್ಷ್ಯವನ್ನೇ ತೋರಿಸಿದ್ದ. ಆದರೆ
ಾಯಕಿ ಈಗ ಅರಿತುಕೊಂಡಿದ್ದಳು. ಹಿಂದಿನಂತೆ ನಮ್ರತೆಯಿಂದ ಅವನನ್ನು
ುತಿಸಿ ಅವನ ತಿರಸ್ಕಾರ ಪ್ರದರ್ಶನಕ್ಕೆ ಆಸ್ಪದ ಕೊಡಲಿಲ್ಲ. ಅವನನ್ನು
ಮನಕ್ಕೇ ತಂದುಕೊಳ್ಳದೆ ಗಂಭೀರವಾಗಿದ್ದುಬಿಟ್ಟಳು. ಈ ಧೋರಣೆ
ವನನ್ನು ಕೆಣಕದೆ ಇರಲಿಲ್ಲ. ಲೀಲಾಳೊಡನೆ ಅವನು "ಓಹೋ, ಏನೋ
ಹಳ ಬಿಗುಮಾನದಿಂದ 'ಥಂ' ಅಂತ ಇದಾಳೆ. ಇದೇನು ಗರ್ವವೋ
ಥವ ಮಾತು, ಭಾವ, ನಡತೆ, ಏನೂ ತಿಳಿಯದೇ ತಿಳೀದೋ ಕಾಣೆ.
ೀಗೆ ಕಲ್ಲಿನ ಹಾಗಿರೋಳು ಏನು ಅಭಿನಯಿಸ್ತಾಳೋ, ದೇವರೇ ಗತಿ!"
ಂದು ಹೇಳಿ ನಕ್ಕಿದ್ದ. ಆಗಲೇ ನಾಯಕಿಯ ವಿಷಯವನ್ನು ಕೇಳಿ, ಅವಳ

ಚೆಲುವನ್ನು ಕಂಡು, ಬಹದ್ದೂರನನ್ನು ಎಲ್ಲಿ ಗೆದ್ದುಬಿಡುವಳೋ, ತನ್ನ ಸ್ಥಾನವನ್ನು ಆಕ್ರಮಿಸಿಬಿಡುತ್ತಾಳೋ ಎಂದು ಭಯ ಅಸೂಯೆಗಳನ್ನು ಹೊಂದಿದ್ದ ಲೀಲಾಗೆ ಅವನ ಹಾಸ್ಯ ಬಹಳ ಸಮಾಧಾನ ಸಂತೋಷಗಳನ್ನು ತಂದಿತ್ತು. ಅವನು ಮಾಡಿದ ಅಲ್ಪ ಸ್ವಲ್ಪ ವಿನೋದಕ್ಕೂ ಬೇಕಾದಷ್ಟು ನಗಲು, ಅವನನ್ನು ಹೊಗಳಲು ಸಿದ್ಧವಿದ್ದವಳು ಈಗ "ಚೆನ್ನಾಗಿ ಹೇಳಿದಿರಿ, ಹ್ಹಹಾ! ನಂಗೂ ಹಾಗೇ ಅನ್ನಿಸುತ್ತೆ. ಹ್ಹಹ್ಹಹಾ! ನೀವು ಅದೆಷ್ಟು ಬೇಗ ಜನರನ್ನು ತಿಳಿದುಕೊಂಡುಬಿಡ್ತೀರಿ ಅಂತ! ಅಂತೂ ನೀತರ ಕಣ್ಣಿಗೆ ಮಣ್ಣು ಹಾಕಿದಾಳಲ್ಲ. ಅವರೆಂಥ ಗುಗ್ಗು ಇರಬೇಕು ಹ್ಹಹ್ಹಹಾ!" ಎಂದು ಧಾರಾಳವಾಗಿ ನಕ್ಕಿದ್ದಳು.

ಹಿಂದಿ ಕಲಿಯುವುದು ಮುಗಿದು, ನಾಯಕಿ ನಾಟಕಾಭ್ಯಾಸವನ್ನು ಮೊದಲು ಮಾಡಿದ ಮೇಲೆ ಅವನ ಅಲಕ್ಷ್ಯ ಬಹಳ ಕಾಲ ಉಳಿಯಲಿಲ್ಲ. ಎಷ್ಟಾದರೂ ಅವನೂ ಕಲೆಗಾರ. ಅವಳ ಸಹಜ ಸೌಂದರ್ಯದ ಸರಳ ಅಭಿನಯ ಅವನ ಗಮನವನ್ನು ಸೆಳೆದೇ ಸೆಳೆಯಿತು. ಅವನಿಗೇ ತಿಳಿಯದಂತೆ ಅವನನ್ನು ಅವಳು ಆಕರ್ಷಿಸಿದಳು. ಆದರೆ ಅವನು ಇದನ್ನು ಒಪ್ಪಿಕೊಳ್ಳಲಿಲ್ಲ. ಒಳಗಿನ ಸೋಲನ್ನು ಗೆಲ್ಲುವುದಕ್ಕೋ ಎನ್ನುವಂತೆ "ಇದು ಹೀಗಲ್ಲ ಹಾಗಿರಬೇಕು" ಎಂದು ಒಂದಲ್ಲ ಒಂದು ತರಹ ಕಠಿಣವಾಗಿ ಟೀಕಿಸುತ್ತಿದ್ದ. ನಾಯಕಿ ಒಂದೆರಡು ಕಡೆ ಅವಶ್ಯಕವಾದಲ್ಲಿ ಅವನ ಸಲಹೆಯನ್ನು ತೆಗೆದುಕೊಂಡರೂ ಒಟ್ಟಿನಲ್ಲಿ ತನ್ನ ದಾರಿಯನ್ನೇ ಅನುಸರಿಸಿದಳು. ತನ್ನ ತಿದ್ದು ಅಷ್ಟೊಂದಾಗಿ ಸರಿಯಲ್ಲವೆಂದು ಅವನಿಗೇನು ತಿಳಿಯದೆ ಇರಲಿಲ್ಲ. ಆದರೆ ಪ್ರತಿಷ್ಠೆ ಕೆಣಕುತ್ತಿತ್ತು. ಬೇಸರಪಟ್ಟವನಂತೆ "ಹುಂ, ಹೇಗಾದರೂ ಮಾಡಿಕೊಳ್ಳಲಿ. ನಂಗೇನು ಹೋಗುತ್ತೆ. ಏನೋ ತಿಳಿದುಕೊಳ್ಳಲಿ, ಒಳ್ಳೇದಾಗುತ್ತೆ ಅಂತ ಹೇಳಿದೆ. ಮೊಂಡತನ ಮಾಡಿದರೆ! ನಾಟಕ ಹಾಳಾಗಿ ಹೋಗಲಿ, ನಂಗೇನು" ಎಂದು ಅವಳೆದುರಿಗೇ ಗೊಣಗಿದ. ಅವಳ ಔಷಧಿ ಮೌನ, ಅವನನ್ನು ಇನ್ನೂ ರೇಗಿಸಿತು. ಇತರರೊಡನೆ "ಏನೋ ತಾನೇ ದೊಡ್ಡ ನಟಿ ಅಂತ ತಿಳಿದುಕೊಂಡುಬಿಟ್ಟಿದಾಳೆ. ನಾಳೆ ರಂಗಭೂಮಿಯ ಮೇಲೆ ಬಂದಾಗ ಗೊತ್ತಾಗುತ್ತೆ—ಬೀಳ್ತಾಳೆ. ಆಗ ನೀತರ ಕಣ್ಣೂ ತೆರೆಯುತ್ತೆ. ಯಾರೋ ಹೇಳಿದ್ದು ಏನೋ ಕೇಳಿ ಮೋಸ ಹೋಗಿದಾರೆ.

ಅಥವ ಹೇಗಿರೋವೋ—ಹೊಸ ಪಾಲು ” ಎಂದು ಅರ್ಥಗರ್ಭಿತವಾಗಿ ನಕ್ಕು “ ಇದು ಬೆಂಗಳೂರಲ್ಲ, ಬೊಂಬಾಯಿ, ಬೊಂಬಾಯಿ ! ಹುಂ ! ” ಎಂದು ಹೂಂಕರಿಸಿದ. ಇಷ್ಟೇ ಅಲ್ಲ. ಅವನ ಭಾಗದ ಅಭಿನಯನದಲ್ಲಿ ಅವನು ಇತರ ನಟಿಯರಲ್ಲಿ ಹೇಗೋ ಹಾಗೆ ಅವಳಲ್ಲಿಯೂ ಅತಿ ಸಲಿಗೆಯನ್ನು ತೋರಿಸಿದಾಗ “ ಇಷ್ಟೆಲ್ಲ ಅನವಶ್ಯಕ. ಅಭಿನಯ ಸೂಚ್ಯವಾಗಿದ್ದರೇ ನಾಜೂಕಾಗಿ ಚೆನ್ನಾಗಿರುತ್ತೆ ” ಎಂದು ಖಂಡಿತವಾಗಿ ತಿಳಿಸಿ ಎಚ್ಚರಿಕೆ ಕೊಟ್ಟಳು. ಅವನು “ ಏನು, ನಾನೂ ಕಲೀಬೇಕೋ ? ಪರವಾಗಿಲ್ಲ ನಂಗೊಬ್ಬರು ಗುರುಗಳು ಸಿಕ್ಕರಲ್ಲ. ನಂಗೆ ಇದೆಲ್ಲ ಏನು ಬೇಕಿಲ್ಲ. ಹುಂ ! ಆದರೆ ಅಭಿನಯ ಮಾಡಿದರೆ ಸಹಜವಾಗಿರಬೇಕು. ನಂಗೆ ಸಂಬಳ ಕೊಡೋದು, ಅದಕ್ಕೆ. ಯಾರೊಬ್ಬರ ಮಡಿವಂತಿಕೆಗೋಸ್ಕರ ನನ್ನ ಪ್ರಖ್ಯಾತಿಯನ್ನು ನಾನೇ ಕಳೆದುಕೊಳ್ಳೋದಿಲ್ಲ. ಖಂಡಿತ. ಇಲ್ಲಿ ಬಿಡ ಬೇಕಾದರೂ ಸರಿಯೆ. ಈಗ ಕಂಪನಿಗಳಿಗೂ, ನಟಿಯರಿಗೂ ಏನೂ ದರಿದ್ರ ವಿಲ್ಲ—ನಂಗೆ. ಹುಂ ! ಇದು ಒಳ್ಳೇ ವಿಚಿತ್ರ! ಅಂಥಾ ಭೀರುಗಳು ರಂಗದ ಮೇಲೇ ಬರಬಾರದು. ಅವರಿಗೆ ಯಾಕೆ ಅಭಿನಯ ? ” ಎಂದು ಕೂಗಾಡಿದ. ನಾಯಕಿ “ ಭೀರುಗಳಿಗೂ ಜಾಗವಿರಬೇಕು, ನಾಟಕದ ಕಲೆಯಲ್ಲಿ ” ಎಂದಳು. “ ನಾನೇನೋ ನಂಗೆ ತಿಳಿದ ಹಾಗೆ ಮಾಡ್ತೀನಿ ” ಎಂದು ಅವನು ಮಾತಿನಲ್ಲಿ ಸೋಲದಿದ್ದರೂ ಅಭಿನಯದಲ್ಲಿ ಹಿಂದಿನಷ್ಟು ಸಲಿಗೆ ತೋರಿಸದೆ ಜಾಗರೂಕನಾಗಿದ್ದ. ಒಂದೊಂದು ಸಮಯದಲ್ಲಿ ಅವನು ಮರೆತಾಗ ನಾಯಕಿಯೆ ಸ್ವಲ್ಪ ಹಿಂದೆಗೆದು ಅವನ ದಾರಿಯಲ್ಲಿ ಸಹಕರಿಸದೆ ಔಚಿತ್ಯವನ್ನು ಸೂಕ್ಷ್ಮವಾಗಿ ನೆನಪುಕೊಡುತ್ತಿದ್ದಳು.

ಬಹದ್ದೂರನಿಗೆ ಇದನ್ನೆಲ್ಲ ಸಹಿಸಿಕೊಂಡು ಇವಳೊಂದಿಗೆ ಪಾತ್ರವಹಿಸುವ ಅಗತ್ಯವೇನೂ ಇರಲಿಲ್ಲ. ಬಿಕ್ಕಟ್ಟನ್ನುಂಟುಮಾಡಿ ನಾಯಕಿ ಭವಿಷ್ಯಕ್ಕೇ ಆತಂಕವನ್ನೊಡ್ಡಬಹುದಾಗಿತ್ತು. ಪ್ರಾಯಶಃ ಇದು ಅವಳ ಬೊಂಬಾಯಿನ ಸಾಹಸವನ್ನೇ ಕೊನೆಗಾಣಿಸುತ್ತಿತ್ತು. ಇದನ್ನು ಅವನೂ ಬಲ್ಲ. ಆದರೆ ಅವನು ಈ ದಾರಿಯನ್ನು ಅನುಸರಿಸಲಿಲ್ಲ. ಅವಳ ರೀತಿ, ನಡತೆ ಇವು ಅವನ ಪ್ರತಿಷ್ಠೆಯನ್ನು ಗಾಯಗೊಳಿಸಿ ರೇಗಿಸಿ ಹಟವನ್ನು ತಂದಿದ್ದುವು. ಅವನಿಗೆ ಅವಳನ್ನು ಹಾಗೇ ಬೆಂಗಳೂರಿಗೆ ಹಿಂದಿರುಗಿಸುವುದು

ಬೇಕಾಗಿರಲಿಲ್ಲ. ಅದು ಕೇವಲ ಸಣ್ಣ ಜಯ. ಉಹುಂ, ಈ ಯಃಕಶ್ಚಿತ ಹೆಣ್ಣಿನ ಹೆಮ್ಮೆಯನ್ನು ಮುರಿದು, ಅವಳನ್ನು ಆಕರ್ಷಿಸಿ ಗೆದ್ದು ಗುಲಾಮು ಳಾಗಿಸಿ, ತನ್ನ ಕೈಗೊಂಬೆಯಂತೆ ಆಡಿಸಿ, ತನ್ನ ಮಹತ್ವವನ್ನು ಎಲ್ಲರಿಗೂ ಪ್ರದರ್ಶಿಸಿ, ತನ್ನ ಇಷ್ಟ ಬಂದಷ್ಟು ಹೀರಿದ ಮೇಲೆ ಹಣ್ಣಿನ ಸಿಪ್ಪೆಯಂತೆ ಬಿಸುಟು, ತುಳಿದು, ನೋಯಿಸಿ, ನಗೆಗೀಡುಮಾಡಿ, ನಲಿಯಬೇಕೆಂಬ ರೋಷ, ಹಾಗೂ ಈ ಹೊಸಬಳ ವಿಶೇಷ ಸೆಳೆತ–ಇವು ಅವನನ್ನು ದುಡುಕ ದಂತೆ ತಡೆದಿದ್ದುವು. ಎಷ್ಟೋ ಜನ ಹೆಂಗಸರೊಡನೆ ತನ್ನ ಇಷ್ಟ ಬಂದಂತೆ ನಡೆದುಕೊಂಡಿದ್ದ ತನಗೆ ಇವಳೊಂದು ದೊಡ್ಡ ವಿಷಯವೆ–ತಾನು ಮನಸ್ಸು ಮಾಡಿದರೆ? ಇಂದಲ್ಲ ನಾಳೆ ಬಿದ್ದೇ ಬೀಳುತ್ತಾಳೆ, ಇರಲಿ ಆಗ ತಾನ ಮಾತು–ತನ್ನ ಮುಂದೆ ಬಾಲ ಆಡಿಸಿದಾಗ–ಎಂಬ ಭರವಸೆ ಅವನಿಗೆ ಸಮಾ ಧಾನವನ್ನು ತಂದಿತ್ತು; ಯಾಕೆ, ವಿನೋದವನ್ನೇ ಉಂಟುಮಾಡಿತ್ತು. ಅವನು ಈ ಸಾಧನೆಯಲ್ಲಿ ತೊಡಗುವುದೆಂದು ನಿರ್ಧರಿಸಿದ; ಅವಳನ್ನು ಸದ್ಯಕ್ಕೆ ಸಹಿಸಿಕೊಂಡ; ತನ್ನ ಸಮಯವನ್ನು ಕಾಯುತ್ತಿದ್ದ. ನಾಯಕಿ ಮೊದಮೊದಲು ಇವನ ತಿರಸ್ಕಾರದ ನಡತೆ, ಒರಟುತನಗಳಿಂದ ನೊಂದು ಕೊಂಡರೂ, ಕ್ರಮೇಣ ಒಗ್ಗಿಸಿಕೊಂಡು ಉದಾಸೀನದಿಂದ ಸುಮ್ಮನಿರು ತ್ತಿದ್ದಳು. ಅವನು ಬದಲಾಯಿಸುವ ಕಾಲವೂ ಬಂದೀತೆಂದು ಆಶಿಸುತ್ತಿದ್ದಳು.

-೧೩-

ಮೊದಲ ನಾಟಕ ಬೋರ್ಡಿನ ಮೇಲೆ ಕಾಣಿಸಿಕೊಂಡಿತು. ಬೊಂಬಾ ಯಿನ ಪ್ರಕಟನೆ ಪ್ರಚಾರಗಳನ್ನು ಕೇಳಬೇಕೆ? ಸೇಠರೂ ಸ್ವಂತವಾಗಿ ಶ್ರದ್ಧೆ ವಹಿಸಿ ಮೊಟ್ಟ ಮೊದಲಿನಲ್ಲಿ ಹೊಸಬಳಿಗೆ ಯಾವ ರೀತಿಯಿಂದಲೂ ಸಹಾಯವನ್ನು ಕಡಿಮೆಮಾಡಕೂಡದೆಂದು ಹೇಳಿದ ಮೇಲೆ, ಎಲ್ಲ ಪತ್ರಿಕೆ ಗಳಲ್ಲೂ ದೊಡ್ಡ ದೊಡ್ಡ ಅಕ್ಷರಗಳಲ್ಲಿ, ಎಲ್ಲೆಲ್ಲೂ ದೊಡ್ಡ ದೊಡ್ಡ ಬಣ್ಣದ ಚಿತ್ರದ ಪೋಸ್ಟರುಗಳಲ್ಲಿ, ಅವಳ ಪ್ರಶಂಸಾತ್ಮಕವಾದ ಪ್ರಚಾರ ತುಂಬಿತ್ತು. ಕಂಪನಿಯವರು ನಟಿಯ ಹೆಸರು ಹೆಚ್ಚು ಕಲಾತ್ಮಕವಾಗಿರಬೇಕೆಂದು ನಾಯಕಿಯನ್ನು ಒಪ್ಪಿಸಿ 'ಮಾಲಾ' ಎಂದು ನಾಮಕರಣಮಾಡಿದರು. ಇದೇ ಹೆಸರಿನಿಂದಲೇ ಬೊಂಬಾಯನ್ನು ತುಂಬಿದರು. ಇದರ ಜತೆಗೆ

ಬಹದ್ದೂರನ ಹೆಸರೂ ಎಂದಿನಂತೆ ಇದ್ದೇ ಇತ್ತು. ಸಿನಿಮಾ ಆಗಿದ್ದರೆ ಇಷ್ಟೊಂದು ಪ್ರಚಾರ ಬೇಕಾಗುತ್ತಿರಲಿಲ್ಲ. ಯಾವ ಊರಿನಲ್ಲೂ ಕೆಲಸ ವಿಲ್ಲದೆ ಕಾಲ ಕಳೆಯುವುದನ್ನೇ ಕಾಣದೆ, 'ಅರ್ಧ ಕಪ್ ಚಾ, ಕಾಫಿ' ಕುಡಿದಂತೆ ನಾಲ್ಕಾಣೆ ಎಂಟಾಣೆ ಎಸೆದು ಅಭ್ಯಾಸದಿಂದ ಯಾವುದಾದರೂ ಸಿನಿಮಾಮಂದಿರಕ್ಕೆ ನುಗ್ಗುವ ಹಿಂಡಿಗೇನು ಕಡಿಮೆಯಿಲ್ಲ. ಆದರೆ ಎರಡೂ ವರೆ ರೂಪಾಯಿನಿಂದ ಐವತ್ತರವರೆಗೂ ಕೊಟ್ಟು ನಾಟಕ ನೋಡಬೇಕೆಂದರೆ ಹಣವೂ ಇರಬೇಕು, ಕಲಾಭಿರುಚಿಯೂ ಇರಬೇಕು. ಈ ಪಂಗಡದ ಜನ ಪ್ರಕಟನ-ಪ್ರಚಾರಗಳನ್ನು ಸುಲಭವಾಗಿ ನುಂಗದೆ ಸ್ವಲ್ಪ ಸಂದೇಹದಿಂದಲೇ ಆಗಿಯುತ್ತಿದ್ದರು. ಹೀಗಿದ್ದು ಕೋಟ್ಯಾಧೀಶ್ವರರ ಪಟ್ಟಣವಾದ ಬೊಂಬಾಯಿ ನಲ್ಲಿಯೂ ಸಿನಿಮಾದೊಡನೆ ಪೈಪೋಟಿ ನಡೆಸಲಾರದೆ ಸೋತು, ಶ್ರೀಮಂ ತಿಕೆಯ ಚೇಷ್ಟೆಯೆನಿಸಿ, ನಾಟಕ ಹಿಂದೆ ಬೀಳಲಾರಂಭಿಸಿತ್ತು. ನಿಜ, ರಾಜಬಹದ್ದೂರನ ಹೆಸರು ಇನ್ನೂ 'ಆಪೆರಾ ಹೌಸ್' ನಾಟಕ ಮಂದಿರಕ್ಕೆ ಬೇಕಾದಷ್ಟು ಜನರನ್ನು ಎಳೆಯುತ್ತಿತ್ತು. ಆದರೆ ಅದೇನೂ ಸೂಕುನುಗ್ಗಲ್ಲ. ಅವನ ಕೀರ್ತಿ ಇಷ್ಟೊಂದು ಬೆಳೆದಿದ್ದಾದರೂ ಸಿನಿಮಾ ನೆಲದಲ್ಲೇ; ಬಿಳಿ ಲೊಂದು ನಾಟಕದ ನೆಲದಲ್ಲಿ ಎನ್ನಬಹುದಾಗಿತ್ತು. ಆದುದರಿಂದ ಹೊಸ ನಟಿಗೆ ಅಷ್ಟೊಂದು ಪ್ರಕಟನೆಯ ಅವಶ್ಯಕತೆಯೂ ಇತ್ತು.

ಮೊದಲ ಮ್ಯಾಟಿನಿ ನಾಯಕಿಗೆ ಪರಮಪ್ರಿಯವಾದ 'ಶಾಕುಂ ತಲ'ವೇ. ಎಂದಿಗಿಂತ ಜನರು ಹೆಚ್ಚಾಗಿ ಬಂದಿದ್ದರೆಂದು ನಾಯಕಿಗೆ ತಿಳಿಯಿತು. ಬಹದ್ದೂರ್ "ಹೊಸ ಹೆಸರು ಕಂಡಾಗಲೆಲ್ಲ ಹೀಗೇ. ಏನೋ ನೋಡೋಣ ಅಂತ ಬರ್ತಾರೆ" ಎಂದು ಅವಳ ಕಿವಿಗೂ ಬೀಳು ವಂತೆಯೇ ಹೇಳಿದ. ನಾಟಕ ಮುಂದುವರಿದಂತೆಲ್ಲ ನಾಯಕಿಗೆ ಈ ಜನ ಬೆಂಗಳೂರಿನ ಜನರಿಗಿಂತ ಬೇರೆಯೆಂದು ತೋರಿತು. ನಿಜ, ಗುಸಗುಸ, ಗಲಭೆ ಯಾವುದೂ ಇರಲಿಲ್ಲ. ಆದರೆ ಬೆಂಗಳೂರಿನಲ್ಲಿ ಕಂಡಂತೆ ಆಸಕ್ತಿ ಪ್ರೋತ್ಸಾಹಗಳು ಸ್ಪಷ್ಟವಾಗಲೂ ಇಲ್ಲ. ಇವರ ಮೌನ ಅವಳಿಗೆ ಒಗಟಾ ಯಿತು, ಆಶಾಭಂಗವನ್ನೂ ತಂದಿತು. ದೃಶ್ಯಗಳಾದ ಮೇಲೆ ಪಿಸಪಿಸ ವೇನೋ ಬೇಕಾದಷ್ಟು ಕೇಳಿಸುತ್ತಿತ್ತು. ಆದರೆ ಅದೇನು ಪ್ರಶಂಸೆಯೋ ಟೀಕೆಯೋ ಗೊತ್ತಾಗುವಂತಿರಲಿಲ್ಲ. ರಾಜಬಹದ್ದೂರನೇ ಸರಿಯಿರಬಹುದೆ

ಎಂಬ ಅನುಮಾನ ಅವಳನ್ನು ಬಾಧಿಸಿತು. ಮುಂದು ಮುಂದಿನ ದೃಶ್ಯ
ಗಳಲ್ಲಿ ತನ್ನ ಸಾಮರ್ಥ್ಯವನ್ನೆಲ್ಲ ತೋರಿಸಿದಳಾದರೂ ಅವಳಿಗೆ ತೃಪ್ತಿಯಾಗ
ಲಿಲ್ಲ. ನಾಟಕ ಮುಗಿದ ಮೇಲೆ ದೀರ್ಘವಾಗಿ ಕರತಾಡನವೇನೋ ಆಯಿತು.
ಆದರೆ ಅದು ತನಗೋ ರಾಜ ಬಹದ್ದೂರನಿಗೋ ಅಥವ ಬರಿಯ ಉಪ
ಚಾರವೋ ಏನೊಂದೂ ಅವಳಿಗೆ ತಿಳಿಯದೆ ಹಿಂಸೆಯಾಯಿತು. ಅಂಕದ
ಪರದೆ ಬಿದ್ದಂತೆ ಅವಳು ತೆರೆಯೊಳಗೆ ಬಂದಾಗ ಅವಳ ಮುಖವೂ ಮುಚ್ಚಿ
ಕೊಂಡಿತ್ತು. ಬಹದ್ದೂರ್ ಅವಳನ್ನು ಹಾಯ್ದಾಗ ಅವನ ಮುಖ ಅರಳಿ
ದ್ದುದು ಕಂಡಿತು—'ನೋಡಿದೆಯೋ ಏನು ಹೇಳಿದ್ದೆ?' ಎನ್ನುವಂತೆ. ಆದರೆ
ಮರುಕ್ಷಣದಲ್ಲಿಯೇ ದೃಶ್ಯ ತಟ್ಟನೆ ಬೇರ್ಪಟ್ಟಿತು. ಸೇಠರೂ, ಅವರ ಹಿಂದೆ
ಸಣ್ಣ ಗುಂಪಿನ ಜನರೂ ಅರಳಿದ ಮುಖಗಳಿಂದ ಇವಳನ್ನು ಇದಿರು
ಗೊಂಡರು.

"ಅಭಿನಯ ಅಮೋಘವಾಗಿತ್ತು. ಚಿಕ್ಕಪ್ಪನೋರು ಕೊಂಚವೂ
ಉತ್ಪ್ರೇಕ್ಷೆ ಮಾಡಿರಲಿಲ್ಲ." ಸೇಠರು ಮೆಚ್ಚಿಗೆಯನ್ನು ತೋರಿಸಿ "ಇವರು
ಪಂಡಿತ ರಾಮಶರ್ಮರವರು. ಅತ್ಯುತ್ತಮ ಹಿಂದಿ ಬರಹಗಾರರು ಮತ್ತು
ವಿಮರ್ಶಕರು," ಎಂದು ಒಬ್ಬಾತನನ್ನು ಪರಿಚಯ ಮಾಡಿಕೊಟ್ಟರು.
ಅವಳು ನಮಸ್ಕರಿಸಿದಳು.

"ಬಹಳ ಕಾಲಕ್ಕೆ ಇಷ್ಟು ಒಳ್ಳೇ ನಾಟಕವನ್ನು ನೋಡಿದ
ಹಾಗಾಯ್ತು. ನಿಮಗೆ ಈ ಕಲೆ ಆಶ್ಚರ್ಯಕರವಾಗಿ ಸಾಧಿಸಿದೆ. ಮೇಲಾಗಿ
ನಮ್ಮ ಭಾಷೆಯನ್ನು ಇಷ್ಟು ಚೆನ್ನಾಗಿ ಆಡಬಲ್ಲವರು ದಕ್ಷಿಣದಲ್ಲಿ ಅಪೂರ್ವ,"
ಶರ್ಮರು ಕೈಮುಗಿಯುತ್ತ ಸಂತೋಷದಿಂದ ಹೇಳಿದರು.

"ತಮಗೆ ಒಪ್ಪಿಗೆಯಾದದ್ದು ಬಹಳ ಸಂತೋಷ. ಭಾಷಾ ಜ್ಞಾನ
ಅಷ್ಟಕ್ಕಷ್ಟೆ. ತಾತ್ಕಾಲಿಕವಾದಷ್ಟನ್ನು ಗಟ್ಟಿಮಾಡೋದಾಗಿದೆ, ಅಷ್ಟೆ."

"ಅದರಲ್ಲೂ ಚಾತುರ್ಯವಿಲ್ಲವೆ? ಬುದ್ಧಿವಂತರಾದೋರು ಮುಟ್ಟಿದ್ದ
ಕ್ಕೆಲ್ಲ ಮೆರಗು ಕೊಡಬಲ್ಲರು. ........ಅಂದ ಹಾಗೆ ಬಹದ್ದೂರರು ಎಲ್ಲಿ?
ಅವರ ಅಭಿನಯವೂ ಎಂದಿಗಿಂತ ಚೆನ್ನಾಗಿತ್ತು ಅನ್ನಿಸಿತು. ಹೆಚ್ಚು ನಯ
ವಾಗಿ ತೂಕವಾಗಿತ್ತು. ಏನು, ಸಹವಾಸದ ಪರಿಣಾಮವೋ ಕಾಣೆ."

"ಸ್ವಲ್ಪ ತಿಕ್ಕಾಟ ನಡೆದಿದೆ—ಈ ವಿಷಯದಲ್ಲಿ," ಸೇಠರು ನಕ್ಕರು.

ನಾಯಕಿಯ ಮುಖದ ಮೇಲೂ ನಸುನಗೆ ಮೂಡಿತು-ಸ್ವಲ್ಪ ತೃಪ್ತಿಯದು. "ಬೊಂಬಾಯನ್ನು ಮೊದಲನೇ ರೌಂಡಿನಲ್ಲಿ ಗೆದ್ದುಬಿಟ್ಟಿರಿ ಬಿಡಿ," ಶರ್ಮರು ಯೋಚಿಸಿ ತಲೆಯಾಡಿಸುತ್ತ ಹೇಳಿದರು.

"ನಂಗೆ ಹೊಳೆದಿರಲಿಲ್ಲ. ಸ್ವಲ್ಪ ಆಶಾಭಂಗವೇ...." ನಾಯಕಿ ತನ್ನ ಭಯವನ್ನು ಸೂಚಿಸಿದಳು.

"ಛಿ, ಛಿ! ಏನು ಮಾತು! ಇನ್ನೊಂದು ದಿನ ನೋಡುತ್ತಿರಿ," ಶರ್ಮರು ಭರವಸೆ ಕೊಟ್ಟರು.

"ಈ ಜನರ ತರಹ ಹೀಗೇ," ಸೇಠರೂ ತಮ್ಮ ಮಾತನ್ನು ಸೇರಿಸಿದರು.

ಶರ್ಮರು ಕಲೆಯ ವಿಚಾರವಾಗಿ ಇನ್ನಷ್ಟು ಮಾತನಾಡಿದರು. ನಾಯಕಿ ಕೇಳಿದಳು. ಕಡೆಗೆ "ನಂಗೆ ಈ ವಿಷಯದಲ್ಲಿ ಪಾಂಡಿತ್ಯ ಜ್ಞಾನವೇನೂ ಇಲ್ಲ. ಏನೋ ಪಾತ್ರದಲ್ಲಿ ಹೊಂದಿಕೊಳ್ಳೋದಕ್ಕೆ ಯತ್ನಿಸುತ್ತೀನಿ ಅಷ್ಟೆ," ಎಂದು ಹೇಳಿದಳು. ಅವರು "ನೋಡಿದಿರಾ ಅದೇ ಗುಟ್ಟು. ಕೃತಕ ಕಲೆಯಿಲ್ಲದಿರೋದೇ ಪೂರ್ಣ ಕಲೆ," ಎಂದು ಮುಂತಾಗಿ ಶ್ಲಾಘಿಸಿದರು. ಸೇಠರು ಪರಿಚಯಮಾಡಿಕೊಟ್ಟ ಇನ್ನೂ ಕೆಲವು ದೊಡ್ಡ ಮನುಷ್ಯರೂ ಅವಳ ಅಭಿನಯದ ಬಗ್ಗೆ ತಮ್ಮ ಸಂತೋಷವನ್ನು ತಿಳಿಸಿದರು. ಕಡಿಮೆ ವಯಸ್ಸಿನ ನಾಲ್ಕಾರು ಜನರ ಸ್ತೋತ್ರವಂತೂ ಕಾವ್ಯಮಯವಾಗಿದ್ದು ನಾಯಕಿಗೆ ನಾಚಿಕೆಯನ್ನೇ ತಂದಿತು. ಜೋಲಿದ್ದ ಅವಳ ಉತ್ಸಾಹ ಚೇತರಿಸಿಕೊಂಡಿತು.

ಈ ಮಾತು ನಡೆಯುತ್ತಿರುವಾಗ ಸುತ್ತುಗಟ್ಟಿದ್ದ ಜನರಲ್ಲಿ ಕೆಲವರು ಸುದ್ದಿಗಾರರು ಬರೆದುಕೊಳ್ಳುತ್ತಿದ್ದರು. ನಾಲ್ಕಾರು ಬಾರಿ ಬಲ್ಬುಗಳು ಬೆಳಗಿ ಕ್ಯಾಮರಾಗಳು 'ಕ್ಲಿಕ್' ಎಂದುವು. ಸುದ್ದಿಗಾರರು ಪ್ರಶ್ನೆಗಳ ಸುರಿಮಳೆಯನ್ನು ಆರಂಭಿಸಿದರು. ನಾಯಕಿ "ನಂಗೆ ನಿಮ್ಮ ಪ್ರಶ್ನೆ ಯಾವುದಕ್ಕೂ ಉತ್ತರ ಗೊತ್ತಿಲ್ಲ. ಒಂದನ್ನು ಮಾತ್ರ ಹೇಳಬಲ್ಲೆ. ಬೊಂಬಾಯಿ ನನ್ನಲ್ಲಿ ತೋರಿಸಿದ ಆದರ ಆಸಕ್ತಿಗಳಿಗೆ ಬಹಳ ಕೃತಜ್ಞಳಾಗಿದ್ದೇನೆ. ಈ ವಿಶ್ವಾಸಕ್ಕೆ ಹೆಚ್ಚು ಹೆಚ್ಚು ಅರ್ಹತೆಯನ್ನು ಪಡೆದು, ಜನರ ಬೆಲೆಗೆ ತಕ್ಕ ಸಂತೋಷವನ್ನು ಕೊಡಲು ಕಷ್ಟಪಡುತ್ತೇನೆ" ಎಂದು ಒಂದು ಮಾತನ್ನು ಹೇಳಿದಳು. ಆದರೆ ಅವರು ಅಷ್ಟಕ್ಕೇ ಬಿಡುವಂತೆ ಕಾಣದಿದ್ದಾಗ ಸೇಠರು

ನಸುನಗುತ್ತ "ಇನ್ನೊಂದು ದಿನ. ಈಗ ಬಿಟ್ಟುಬಿಡಿ, ಬಡಪಾಯೀನ" ಎಂದು ಅವಳನ್ನು ಕರೆದುಕೊಂಡು ಹೋದರು.

ಇಷ್ಟಾದರೂ ನಾಯಕಿಗೆ ಸಂಪೂರ್ಣ ತೃಪ್ತಿಯಾಗಿರಲಿಲ್ಲ. ರಾತ್ರಿಯನ್ನೆಲ್ಲ ಅನುಮಾನ, ಭಯ, ಆಸೆ, ಭರವಸೆಗಳ ವಿವಿಧ ದೃಶ್ಯಗಳ ನಾಟಕಾಭಿನಯದಲ್ಲಿ ಕಳೆದಳು.

ಆ ದಿನ ಬೆಂಗಳೂರಿನಲ್ಲಿ ಮಾಡಿದ್ದಂತೆ ಈಗಲೂ ಮಾರನೆಯ ದಿನ ಎಲ್ಲ ಪತ್ರಿಕೆಗಳನ್ನೂ ತರಿಸಿದಳು; ಆಸೆ ಆತಂಕಗಳ ಆತುರದಿಂದ ಪುಟಗಳನ್ನು ತೆಗೆದಳು. ಅಗೊ, ಅಲ್ಲಿತ್ತು 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ, ಸಿನಿಮಾ ಪುಟದಲ್ಲಿ! ಮುಕ್ಕಾಲು ಕಾಲಂ ಪೂರ್ತಿ! ಕಾಣದ ಕಡೆಯಿಂದ ಕಾಗದ ಬಂದರೆ ನಾವು ಒಡೆಯಲಿಚ್ಛಿಸದೆ ಕ್ಷಣಕಾಲ ತಿರಿತಿರಿಗಿಸಿ ನೋಡಿ ಊಹಾ ಲೋಕದ ಸುಖವನ್ನನುಭವಿಸುವಂತೆ ಅವಳು ಈ ವರದಿಯನ್ನು ನೋಡದೆ ಮುಚ್ಚಿದಳು. 'ನ್ಯಾಷನಲ್ ಸ್ಟಾಂಡರ್ಡ್' ತೆಗೆದಳು. ಹುಂ, ಮೇಲು ಪುಟದಲ್ಲೇ ಇತ್ತು ಸುದ್ದಿ. ಅಷ್ಟೇಯೆ? ಇಲ್ಲ. ಓ, ನಾಲ್ಕನೆಯ ಪುಟ ದಲ್ಲಿ ಒಂದು ಕಾಲಂ ಭರ್ತಿ! 'ಫ್ರೀ ಪ್ರೆಸ್ ಜರ್ನಲ್'ನಲ್ಲಿ ಸಣ್ಣ ಸಂಪಾದ ಕೀಯ! ಹೀಗೇ ನಾಯಕಿ ಪತ್ರಿಕೆಯಿಂದ ಪತ್ರಿಕೆಗೆ ಹಾರಿ, ವರದಿಗಳನ್ನೆಲ್ಲ ಕೂಡಿಸಿಕೊಂಡು ಒಂದೊಂದನ್ನಾಗಿ ಒಂದು ಬಾರಿ, ಎರಡು, ಮೂರು ಬಾರಿ ಓದಿದಳು. ಸಂತೋಷದಿಂದ ಅವಳ ಎದೆ ಉಬ್ಬುಬ್ಬಿ ಇಳಿಯಿತು. ಡವ ಡವನೆ ಹೊಡೆಯಿತು, ಮುಖ ಬಿಸಿಯಾಯಿತು, ಮುಂದಿದ್ದ ತಿಂಡಿ ಕಾಫಿ ಗಳು ತಣ್ಣಗಾದುವು. ಉಹುಂ, ಅವಳಿಗೆ ಅದೊಂದೂ ಬೇಕಿರಲಿಲ್ಲ. ಬಿಸಿ ಬಿಸಿಯಾದ ಆಹಾರ ಅವಳಿಗೆ ಬೇಕಾಗಿದ್ದುದು, ಸಿಕ್ಕಿದುದು ಬೇರೆ. ಅದನ್ನು ಗಬಗಬನೆ ನುಂಗುತ್ತಿದ್ದಳು. ಪತ್ರಿಕೆಗಳು ಬಹಳ ಧಾರಾಳವಾಗಿದ್ದುವು— ಅವಳು ನಿರೀಕ್ಷಿಸದಷ್ಟು. ದೊಡ್ಡ ಪರೀಕ್ಷೆಯಲ್ಲಿ ಮೊದಲನೆಯ ಸ್ಥಾನವನ್ನು ಗಳಿಸಿದ ವಿದ್ಯಾರ್ಥಿಯ ಹೆಮ್ಮೆ, ಸಂತೋಷ ಅವಳದ್ದರಲ್ಲಿ ಕಾಲು ಭಾಗ. ಬಹದ್ದೂರನ ವಿಷಯವೂ ಬಂದಿತ್ತು—ಎರಡನೆಯ ಪ್ಯಾರಾದಲ್ಲಿ! ಅವನ ಅಭಿನಯ ಅವಳಿಗೆ ತಕ್ಕಂತೆ ಹೊಂದಿಕೊಂಡಿತ್ತು, ಅಂದಿದ್ದ ಒಬ್ಬ ವಿಮ ರ್ಶಕ! ಗೆದ್ದಿದ್ದಳು! ಹುಂ, ಬೊಂಬಾಯನ್ನು ಗೆಲ್ಲುವುದಕ್ಕೆ ದಾರಿ ತೆರೆಟಿತ್ತು. ಇನ್ನು ಒಂದೆರಡು ನಾಟಕ—ಅನಂತರ ಸಿನಿಮಾ—ಮುಂದೆ ತನ್ನ ಅಧಿಕಾರ

ಆ ಪ್ರಪಂಚದಲ್ಲಿ! ಹೆಣ್ಣಾಳು ಬಂದು " ಬೇರೆ ಕಾಫಿ ತರಲೆ? " ಎಂದಳು. ನಾಯಕಿ ಅವಳ ಕಡೆಗೂ ತಿರುಗದೆ, ಮಾತಾಡದೆ ಕೈಯಾಡಿಸಿಬಿಟ್ಟಳು. ತಾನಿದ್ದ ಸ್ವರ್ಗಲೋಕದಲ್ಲಿ ಆಳಿನ ಈ ಮಾತುಕತೆಯೆಲ್ಲ ಕೀಳು, ಗ್ರಾಮ್ಯ.

ಎರಡು ದಿನದ ಮೇಲೆ 'ಆನಂದೀ ಬಾಯಿ' ನಾಟಕದ ಅಭ್ಯಾಸ ಮೊದಲಾಯಿತು. ನಟವರ್ಗದವರೂ ಈ ಪ್ರಶಂಸಾತ್ಮಕ ವರದಿ ವಿಮರ್ಶೆಗಳ ಮಾತನ್ನಾಡುತ್ತ ಅವಳನ್ನು ಅಭಿನಂದಿಸಿದರು. ಆದರೆ ಬಹದ್ದೂರ್ ಮಾತ್ರ " ಪ್ರಶಂಸೆಗೇನು, ದುಡ್ಡು ಧಾರಾಳವಾಗಿದ್ದರೆ. ಸೇಠರಿಗೆ ಏನು ಕಡಿಮೆ. ಒಂದು ಕೊಟ್ಟು ನೂರು ತಗೊಳ್ಳೋದು ತಾನೆ ಸೇಠರ ವ್ಯಾಪಾರ. ನಂಗೇನು ಈ ಹೊಗಳಭಟ್ಟರ ಸಹಾಯ ಬೇಕಿಲ್ಲ. ಅಂಥ ಸಣ್ಣದೇನಲ್ಲ ನನ್ನ ಜಗತ್ತು–ಹೊಸದೂ ಅಲ್ಲ. ಹುಂ ಇನ್ನೂ ಎರಡು ನಾಟಕವಾಗಲಿ, ನೋಡೋಣ " ಅಂದ. ನಾಯಕಿ 'ಹೀಗೂ ಇರಬಹುದೆ' ಎಂಬ ಶಂಕೆ ಬಂದು, ಅವಳ ಸುಖದ ಹಾಲಿಗೆ ಹುಳಿ ಹಿಂಡಿದಂತಾಯಿತು. ಆದರೆ ಧೈರ್ಯ ಗೆಡುವಷ್ಟು ಮೋಸಹೋಗಲಿಲ್ಲ. 'ಆಗಲಿ, ಅವನು ಹೇಳಿದ ಹಾಗೇ. ಮುಂದೆರಡು ನಾಟಕಗಳಾಗಲಿ. ಹುಂ, ಅದೇ ಸರಿ' ಎಂದುಕೊಂಡಳು. ಅಭ್ಯಾಸದಲ್ಲಿ ಇನ್ನೂ ಹೆಚ್ಚಾಗಿ ಶ್ರದ್ಧೆ ವಹಿಸಿದಳು. ಆನಂದೀ ಬಾಯಿಯ ಪಾತ್ರದ ಮಾತಷ್ಟನ್ನೇ ಗಟ್ಟುಮಾಡದೆ ಪೇಶ್ವೆಗಳ ಚರಿತ್ರೆಯನ್ನು ಚೆನ್ನಾಗಿ ಓದಿ, ಆ ಪಾತ್ರದ ಹಿನ್ನೆಲೆಯನ್ನು ಚೆನ್ನಾಗಿ ಅರಿತು, ತನ್ನ ಭಾಗವನ್ನು ಸರಿಯಾಗಿ ಅರಗಿಸಿಕೊಂಡಳು. ಮನೆಯಲ್ಲಿಯೂ ಕೂಡ ತನ್ನಷ್ಟಕ್ಕೆ ತಾನೇ ಅಭ್ಯಾಸವನ್ನು ನಡೆಸಿದಳು.

ನಾಟಕದ ಪ್ರಕಟನೆಯಾದ ದಿನದಿಂದಲೇ 'ಅಡ್ವಾನ್ಸ್ ಬುಕಿಂಗ್' ಮೊದಲಾಗಿ ಎರಡು ದಿನಗಳಲ್ಲಿ ಕಾದಿರಿಸಲು ಸಾಧ್ಯವಾದ ಸ್ಥಳಗಳೆಲ್ಲ ಭರ್ತಿಯಾಗಿ ಹೋದವು. ಹಾಗೂ 'ಫೋನ್' ಮಾಡುವವರು ಇದ್ದೇ ಇದ್ದರು. ಹೀಗೆ ಭರ್ತಿಯಾದ ಸಂಗತಿಯನ್ನು ಪತ್ರಿಕೆಗೆ ಹಾಕಿಸಿ ಈ ಭಂಗವನ್ನು ತಪ್ಪಿಸಿಕೊಳ್ಳಬೇಕಾಯಿತು. ಮ್ಯಾಟಿನಿಯ ದಿನ ಒಂದು ಗಂಟೆಯಿಂದಲೇ ಕಡೆಯ ತರಗತಿ ಎರಡೂವರೆ ರೂಪಾಯಿನ ಜನರ ಕ್ಯೂ ಮೊದಲಾಗಿ ಟಿಕೀಟು ಕೊಡುವ ಹೊತ್ತಿಗೆ, ಈ ಸಾಲು 'ಅಪೇರಾ ಹೌಸ್'ನ ಆವರಣವನ್ನು ದಾಟಿ ಪಕ್ಕದ ಓಣಿಯಲ್ಲಿ ನಿಂತಿತ್ತು; ಗಳಿಗೆ ಗಳಿಗೆಗೂ ಬೆಳೆಯು

ತ್ತಿತ್ತು-ಹನುಮಂತನ ಬಾಲದಂತೆ. ಈ ಸುದ್ದಿ ನಾಯಕಿಗೆ 'ಟಾನಿಕ್'ನ ಹಾಗಿದ್ದಿತು. ಅವಳ ಉತ್ಸಾಹ ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. ನಾಟಕ ಮೊದಲಾಗುವುದಕ್ಕೆ ಸ್ವಲ್ಪ ಮುಂಚೆ ಸೇಠರು ತೆರೆಯೊಳಕ್ಕೆ ಬಂದು ಅವಳನ್ನು ಕಂಡು "ನೋಡಿದಿರಾ, ನಾನು ಏನು ಹೇಳಿದ್ದೆ! ಎಷ್ಟೋ ಜನ ಹಿಂದಕ್ಕೆ ಹೋಗಬೇಕಾಯ್ತು, ಪಾಪ. ನಾವೇನು ಮಾಡೋಣ" ಎಂದು ಹಿಗ್ಗುತ್ತ ಹೇಳಿಹೋದರು. ನಾಯಕಿಗೆ ಬೆಂಗಳೂರಿನ ನೆನಪು ಬಂದಿತು ; ಆಶ್ಚರ್ಯವಾಗಲಿಲ್ಲ. ಹತ್ತಿರದಲ್ಲಿದ್ದ ಬಹದ್ದೂರ್ ಇನ್ನೊಬ್ಬನಿಗೆ "ನೋಡಿದಿರಾ, ಸೇಠರ ಪ್ರಚಾರ ಏನು ಮಾಡಬಹುದು ಅಂತ. ನಾಟಕಾನ ಮುಂದೆ ತರೋದಕ್ಕೆ ಅವರು ಈಗ ಸ್ಫೂರ್ತಿ ಮನಸ್ಸು ಮಾಡಿದಹಾಗಿದೆ. ಅವರ ಕಾರಣ ಅವರಿಗೇ ಗೊತ್ತು!" ಎಂದು ನಕ್ಕು, "ಬಹಳ ದಿನ ಬಹಳ ಜನ ಇದರಿಂದ ಮೋಸಹೋಗಿರೋದಿಲ್ಲ" ಎಂದು ತಲೆಯಾಡಿಸಿದ.

ಆನಂದೀ ಬಾಯಿ ಶಾಕುಂತಲದಂತೆಯೇ ಸಫಲವಾಯಿತು. ಹಿಂದೆ ಸರಳ ಸೌಂದರ್ಯದ ಮೃದು ಮುಗ್ಧ ಋಷಿಕನ್ಯೆಯನ್ನು ಕಂಡು ಆನಂದಿಸಿದ್ದವರು, ಈಗ ಅರ್ಧ ಚಂದ್ರಾಕಾರದ ಕುಸುಮ, ಚಿನ್ನದ ಮುಖರ, ಮುತ್ತಿನೋಲೆ, ಹೆರಳಿನ ಜಡೆ, ಬಿಗಿ ಸೀರೆ ಕುಪ್ಪಸ, ಕೈಗಡಗ, ವಂಕಿ, ಹೆಜ್ಜೆ ಸರಪಳಿ. ಕಾಲುಂದಗೆಗಳ ಸಡಕಿನ ಮರಾಠಾ ಗೃಹಿಣಿಯನ್ನೂ, ಅವಳ ಕೋಮಲ ರೂಪಿನೊಳಗೆ ಅಡಗಿದ್ದ ತುಂಬು ಹಗೆಯ ಕಲ್ಲೆದೆಯ ಕಾಠಿಣ್ಯವನ್ನೂ, ಮೇರೆ ಇರದಾಸೆ ಚಿಮ್ಮಿಸಿದ ಚಾತುರ್ಯದ ಚುರುಕನ್ನೂ, ಅದೇ ವ್ಯಕ್ತಿಯಲ್ಲಿ ಕಂಡು ಬೆರಗಾದರು. ಕೆಲವರು 'ಲೇಡಿ ಮ್ಯಾಕ್‌ಬೆತ್' ಪಾತ್ರವನ್ನು ಮೀರಿಸಿದೆಯೆಂದು ಮಾತನಾಡಿಕೊಂಡರು. ಆ ದೃಶ್ಯವಂತೂ-ಹಿಂಬಾಲಿಸುತ್ತಿದ್ದ ಕೊಲೆಗಡಿಗರಿಂದ ತಪ್ಪಿಸಿಕೊಂಡು ಎಳೆಯ ನಾರಾಯಣ ರಾವ್ ಪೇಶ್ವೆ ಆರ್ತ ಸ್ವರದಲ್ಲಿ 'ಕಾಕಾ! ಕಾಕಾ!' ಎಂದು ಚಿಕ್ಕಪ್ಪನನ್ನು ಕೂಗಿಕೊಳ್ಳುತ್ತ ಬಂದು, ಪೂಜೆಯಲ್ಲಿದ್ದ ರಘುನಾಥರಾಯನನ್ನು ಮರೆ ಹೊಕ್ಕು ಕಾಲು ತಬ್ಬಿ ದೈನ್ಯದಿಂದ ನೋಡುತ್ತಿದ್ದಾಗ, ರಘುನಾಥನ ಮನಸ್ಸು ಕರಗಿ ಅಣ್ಣನ ಮಗನ ರಕ್ಷಣೆಗಾಗಿ ಅವನು ಕತ್ತಿ ಸೆಳೆದು ಕೊಲೆಗಡಿಗರನ್ನು ಇದಿರಿಸಿ ನಿಂತಿದ್ದಾಗ, ಅವನ ಮನುಷ್ಯತ್ವವನ್ನೇ ಹಾಳುಮಾಡಿ ಅವನ ಸತ್ವವನ್ನೆಲ್ಲ ಸೆಳೆದು ಹಳೆಯ ಆಸೆಯನ್ನೆಲ್ಲ ಪ್ರತಿಬಿಂಬಿಸಿ ಅವನನ್ನು

ಅಸಹಾಯನನ್ನಾಗಿ ಮತ್ತು ತನ್ನ ಗುಲಾಮನನ್ನಾಗಿ ಮಾಡಿದ ಅವಳ ಆ ಒಂದೇ ಒಂದು ನೋಟ; ಅವನ ದಯಾದೌರ್ಬಲ್ಯ, ಬಂಧುವಾತ್ಸಲ್ಯದ ಅವಿವೇಕವನ್ನು ಅಣಕಿಸಿದ, ದೂಷಿಸಿದ ಅವಳ ಮುಖಭಾವ; ಅವನೆತ್ತಿದ ಕತ್ತಿಯ ಕೈಯನ್ನು ಹಿಂದಕ್ಕೆ ಮೆಲ್ಲಗೆ, ಆದರೆ ದೃಢವಾಗಿ ಎಳೆದುಕೊಂಡ ಅವಳ ದಿಟ್ಟತನ; ತಲೆಯಲುಗದೆ, ಸ್ಪಷ್ಟವಾಗಿ ಸೂಚಿಸದೆ, ಕಟುಕರಿಗೆ ಇಂಗಿತವನ್ನು ತಿಳಿಸುತ್ತಿದ್ದ ಆ ಹೆಣ್ಣು ಕಣ್ಣಿನ ಗಂಡು ನೋಟದ ತಿರಿಗು; ಎಳೆಯ ನಾರಾಯಣನನ್ನು ಅವರೆಳೆದುಕೊಂಡು ಹೋದ ಹೃದಯವಿದ್ರಾವಕವಾದ ಸನ್ನಿವೇಶದಲ್ಲಿ ಕದಲದ ಅವಳ ಕ್ರೂರ ಸ್ಥೈರ್ಯ–ಆ ದೃಶ್ಯವಂತೂ ಜನರನ್ನು ನಡುಗಿಸಿತು. ಆನಂದಿಯಲ್ಲಿ ಹಗೆತನವನ್ನೆಷ್ಟೋ, ಅಷ್ಟೇ ಮೆಚ್ಚಿಕೆಯನ್ನೂ ಹುಟ್ಟಿಸಿತು. ಪರದೆ ಬಿದ್ದ ಮೇಲೂ ಕೆಲವು ಕ್ಷಣಗಳು ನಾಟಕಮಂದಿರ ಮೋಡಿಯಲ್ಲಿದ್ದಂತೆ ಮೌನವಾಗಿತ್ತು. ಈ ದಿನದ ಅಭಿನಂದನೆಯೂ ಮಾರನೆಯ ದಿನ ಪತ್ರಿಕೆಗಳೂ ನಾಯಕಿಯನ್ನು ತನ್ನ ಖ್ಯಾತಿಯ ಮತ್ತೊಂದು ಮೈಲಿಗೆ ಒಯ್ದುವು.

ಮುಂದಿನ ನಾಟಕಗಳಿಗೆಲ್ಲ ಜನದ ಇದೇ ತುಂಬು ಮಾಮೂಲಾಗಿ ಬಿಟ್ಟಾಗ ಬಹದ್ದೂರ ತನ್ನ ಮಾತನ್ನು ಬದಲಾಯಿಸಿಕೊಂಡು "ಹುಂ, ನಾನಿಲ್ಲದೆ ಇರಬೇಕು ಆಗ ಗೊತ್ತಾಗುತ್ತೆ" ಎಂದು ಅವರಿವರಲ್ಲಿ ಹೇಳಿ ಸಮಾಧಾನ ತಂದುಕೊಂಡನಾದರೂ ತನ್ನನ್ನೇ ತಾನು ಮೋಸಗೊಳಿಸಿಕೊಳ್ಳಲಿಲ್ಲ. ಅವಳ ಬೆಲೆಯ ಅರಿವು ಅವನಿಗೆ ಆಗುತ್ತ ಬಂದಿತ್ತು. ಅಭ್ಯಾಸದಲ್ಲಿ 'ಹಾಗಲ್ಲ ಹೀಗಲ್ಲ' ಎನ್ನುತ್ತಿದ್ದುದು 'ಹೀಗೆ ಇನ್ನೂ ಚೆನ್ನಾಗಿರೋದಿಲ್ಲವೆ? ಹಾಗೆ ಮಾಡಿ ನೋಡಿದರೋ?' ಎನ್ನುವುದಕ್ಕೆ ತಿರಿಗಿ ಕ್ರಮೇಣ ಟೀಕೆ ಅಡಗಿಯೇ ಹೋಗುತ್ತ ಬಂದಿತ್ತು; 'ಅದು ಸರಿ, ಇದು ಚೆನ್ನಾಯ್ತು' ಎನ್ನುವ ಮಟ್ಟಿಗೂ ಬಂದಿತ್ತು. ಇದರಿಂದ ಅವನಿಗೆ ಅವಳಲ್ಲಿ ವಿಶ್ವಾಸವೇನು ಹುಟ್ಟಿತೆಂದಲ್ಲ. ಅವನು ಅಲಕ್ಷ್ಯ ವ್ಯರ್ಥವಾದುದನ್ನು ತಿಳಿದುಕೊಂಡು ತನ್ನ ದಾರಿಯನ್ನು ಬದಲಾಯಿಸಿಕೊಳ್ಳುತ್ತಿದ್ದ. ಅವಳನ್ನು ಗೆದ್ದು ತುಳಿಯಬೇಕೆಂಬ ಹಟವೇನು ಕಡಿಮೆಯಾಗಿರಲಿಲ್ಲ; ಅವಳಲ್ಲಿದ್ದ ಹಗೆತನದಂತೆ ಹೆಚ್ಚುತ್ತಲೇ ಇತ್ತು. ಆದರೆ ಮೆಚ್ಚಿಗೆ ಗೌರವಗಳನ್ನು ಅವಳು ಅವನಿಂದ ಸೆಳೆಯುತ್ತಿದ್ದಳು, ಹಾಗೇ ವಿಚಿತ್ರವಾಗಿ ಆಕರ್ಷಿಸುತ್ತಲೂ

ಇದ್ದಳು. ಒಂದೊಂದು ವೇಳೆ ಅವನಿಗೆ ತಾನು ದ್ವೇಷಿಸುತ್ತಿದ್ದನೋ ಪ್ರೀತಿಸುತ್ತಿದ್ದನೋ ಎಂಬುದೇ ಗೊತ್ತಾಗದಂತಿತ್ತು. ಪ್ರೀತಿ ಕಂಡಾಗ ತನ್ನನ್ನೇ ತಾನು ನಿಂದಿಸಿಕೊಂಡು 'ಹುಂ, ಇವಳೂ ಒಂದು ಆಟ, ಅಷ್ಟೆ. ಮುಗಿದ ಮೇಲೆ ಆಯಿತು....ಹುಂ, ಅಷ್ಟೆ, ಇವಳಿಗೆ ಬುದ್ಧಿ ಕಲಿಸಬೇಕು, ಹೂವನ್ನು ಕಿವಿಚಿ ಹಾಕಿದ ಹಾಗೆ. ಆ ಹೂವಿನಲ್ಲಿ ಅಂದ ಕಂಡಷ್ಟೂ ಚಂದ. ಆದರೆ ಈಜಲು ಹೋಗಿ ಸುಳಿಗೆ ಸಿಕ್ಕಿದಂತಾಗಬಾರದು' ಎಂದು ನಿರ್ಧಾರವನ್ನು ಮತ್ತೆ ಮತ್ತೆ ಹೇಳಿಕೊಳ್ಳುತ್ತಿದ್ದ. ಅವನು ಅವಳ ಬಗ್ಗೆ ಬದಲಾಯಿಸಿದರೆ, ಅವಳೂ ಅವನಲ್ಲಿ ಉದಾಸೀನತೆಯನ್ನು ಕಡಿಮೆ ಮಾಡಿ ಸ್ನೇಹವನ್ನು ನೀಡುತ್ತಿದ್ದಳು. ಅವನ ಸಲಹೆಗಳನ್ನು ಯೋಗ್ಯವಾದಲ್ಲೆಲ್ಲ ಉಪಯೋಗಿಸಿಕೊಂಡು ನಸುನಗೆಯಿಂದ ಧನ್ಯವಾದಗಳನ್ನು ಸಮರ್ಪಿಸು ತ್ತಿದ್ದಳು; ಅವನ ಒಳ್ಳೆಯ ಮಾತಿಗೆ ಕೃತಜ್ಞತೆಯನ್ನು ಸೂಚಿಸುತ್ತಿದ್ದಳು; ಗೌರವದ ಮಿತಿಯಲ್ಲಿ ಸಲಿಗೆಗೂ ಅವಕಾಶ ಕೊಡುತ್ತಿದ್ದಳು. ಅವನಿಂದ ಬಂದ ಮೆಚ್ಚಿಗೆಯ ಮಾತು ಅವಳಿಗೆ ಬಹಳ ಹಿತವಾಗಿತ್ತು. ಇದಕ್ಕಾಗಿ ಆಗಾಗ ಸ್ವಲ್ಪ ಸೋಲಿನ ಬೆಲೆಯನ್ನು ಕೊಡಲು ಸಮ್ಮತಿಸುತ್ತಿದ್ದಳು. ಅವನನ್ನು ಹಿಂದಿನಷ್ಟು ದೂರವಾಗಿಯೂ ಇರಿಸಿರಲಿಲ್ಲ. ಆದರೆ ಅವನು ಇದನ್ನು ತಪ್ಪಾಗಿ ತಿಳಿದ. ಅಲಕ್ಷ್ಯದಿಂದ ಹಣ್ಣಾಗದವಳು ಸುತ್ತಿಯ ಬಲೆಗೆ ಬೀಳುವಳೆಂದು ನಂಬಿ ಚಾತುರ್ಯದಿಂದ ನಡೆದುಕೊಳ್ಳಲಾರಂಭಿಸಿದ. ಹಿಂದಿನ ಕೋಪವನ್ನು ಬಿಟ್ಟು ಈಗ ವಿನೋದದ ಸದರವನ್ನು ಬೆಳೆಸಿಕೊಳ್ಳಲು ಯತ್ನಿಸುತ್ತಿದ್ದ. ಒಂದೊಂದು ವೇಳೆ ಅವಳು ಹುಬ್ಬು ಗಂಟಿಕ್ಕಿದರೂ, ನಯವಾಗಿ ವಿರೋಧಿಸಿದರೂ—ಮೈಗೆ ಸಹರಿಕೊಂಡು ನಕ್ಕು ಬಿಡುತ್ತಿದ್ದ. 'ಹೀಗೇ ದಾರಿಗೆ ತರಬಹುದು' ಎಂದು ಒಳಗೊಳಗೇ ಹಿಗ್ಗುತ್ತಿದ್ದ. ಅವಳಿ ಗಾದರೂ ಈ ಬಳಕೆ ಬೆಳೆದು ಮಾತಿನಲ್ಲಿ, ನಡತೆಯಲ್ಲಿ ಮೊದಲಿನ ಬಿಗಿ ಯನ್ನು ತಂದುಕೊಳ್ಳುವುದು ಕಷ್ಟವಾಗುತ್ತಿತ್ತು. ತಂದುಕೊಂಡರೂ ಅವನ ಮನಸ್ಸಿಗೆ ತಿಳಿಸುವುದು ಸಾಧ್ಯವಾಗುತ್ತಿರಲಿಲ್ಲ. ಮಧ್ಯ ಮಾರ್ಗವನ್ನು ಅನುಸರಿಸಬೇಕಾಗಿತ್ತು. ಇದರಲ್ಲಿ ಸ್ನೇಹದ ಸಂತೋಷ, ಚೇಷ್ಟೆಯ ಕಿರಿಕಿರಿ ಎರಡೂ ಇದ್ದುವು. 'ಇವನ ಒಪ್ಪಿಗೆಯ, ಮೆಚ್ಚಿಗೆಯ ಆಸೆಗಾಗಿ ತಪ್ಪು ಮಾಡಿದೆನೆ' ಎಂದುಕೊಳ್ಳುತ್ತಿದ್ದಳು. ಅಂತೂ ಈಗ ವಕ್ರ ಮಾತಿನ

ನೋವಿಲ್ಲದೆ, ವಿರೋಧದ ತಿಕ್ಕಾಟವಿಲ್ಲದೆ ನಾಟಕಾಭ್ಯಾಸ ಸುಲಭವಾಗಿ ನಡೆಯುತ್ತಿತ್ತು.

ಒಂದು ದಿನ 'ಸತಿ ಸಂಯುಕ್ತೆ'ಯಲ್ಲಿ ಅವಳು ಸ್ವಯಂವರ ಮಂಟಪದ ಹೊರಗೆ ಪೃಥ್ವಿರಾಜನ ಪ್ರತಿಮೆಗೆ ಹಾರ ಹಾಕಿ, ಅವನು ಹಾರಿ ಬಂದು ಎತ್ತಿಕೊಂಡು ಹೋದಾಗ ನಾಯಕಿಗೆ ಬಹದ್ದೂರನ ಉಸಿರು ತನ್ನ ಮುಖದ ಮೇಲೆ ತುಂಬ ಬಿದ್ದಂತಾಯಿತು, ತುಟಿ ಕೆನ್ನೆಗೆ ಸೋಕಿದಂತೆಯೂ ಆಯಿತು. ಅವಳು ಸ್ಪಷ್ಟವಾಗಿ ಹೇಳದೆ ಮುಖಭಾವದಿಂದಲೇ ಅಸಮಾಧಾನವನ್ನು ತೋರಿಸಿದಳು. ಅವನು ನಸುನಗುತ್ತ 'ಏನು ಸಿಟ್ಟಾಗಿರೋ ಹಾಗಿದೆ–ಬಡವನ ಮೇಲೆ?' ಎಂದು ಕೇಳಿದ.

"ಕಾರಣವಿದೆ."

"ಅದೇನು ಅಂಥಾದ್ದು ಮಹಾಪರಾಧ?"

"ನಿಮಗೆ ತಿಳಿಯದ್ದೆ ಏನಿಲ್ಲ."

"ಮತ್ತೇನು ಈಗಿನ ಭ್ರಾಂತಿ? ನನ್ನ ಮೇಲೆ ಏನಾದರೂ ದೂರಿರಬೇಕಲ್ಲ."

"ನೀವು ಸರಿಯಾಗಿ ನಡೆದುಕೊಂಡರೆ ವಾಸಿ."

"ಆಗಲಿ, ಆಗಲಿ. ನಿಮ್ಮ ಕೋಪ ಅಂದರೆ ನಂಗೆ ಬಹಳ ಇಷ್ಟ. ಹ್ಹ! ಹಾ!" ಅವನು ನಗುತ್ತಲೇ ಹೊರಟುಹೋದ. ಅವಳು ತನ್ನಲ್ಲೇ ಸಿಡಿಮಿಡಿಗೊಂಡಳು. ಇವನ ಕುಚೇಷ್ಟೆಯನ್ನು ಸುಲಭವಾಗಿ ತಡೆದು ಅಡಗಿಸುವ ದಾರಿ ಗೊತ್ತಾಗಲಿಲ್ಲ. ಸೇಠರಲ್ಲಿ ಹೇಳಿಕೊಂಡು ನ್ಯಾಯ ಕೇಳುವುದು ಅವಳ ಪ್ರತಿಷ್ಠೆಗೆ ಹೀನಾಯವಾಗಿ ಕಂಡಿತು. ತಾನೇ ಸರಿ ಮಾಡಬೇಕಾದ ವಿಷಯವೆಂದು ಅವಳ ಭಾವನೆ. ಆದರೆ ನೇರವಾಗಿ ಅವನೊಡನೆ ಜಗಳವಾಡಿ ಅಗತ್ಯವಾದರೆ ಕಂಪನಿಯನ್ನು ಬಿಟ್ಟುಬಿಡಲು ಅವಳು ಇನ್ನೂ ಸಿದ್ಧವಾಗಿರಲಿಲ್ಲ. ತನ್ನ ಪ್ರಖ್ಯಾತಿ ಇನ್ನೂ ಬೆಳೆಯುತ್ತಿತ್ತು. ತನ್ನ ಜಗತ್ತೂ ಇನ್ನೂ ಸಣ್ಣದು. ಇಬ್ಬರಿಗೂ ಅಜಗಜಾಂತರ. ವಿರೋಧದ ಪೆಟ್ಟು ಬೀಳುವುದು ತನ್ನ ಮೇಲೇ. ಸುಮ್ಮನಿದ್ದುಬಿಟ್ಟಳು.

ಇನ್ನೊಂದು ದಿನ 'ಸಾವಿತ್ರಿ'ಯಲ್ಲಿ. ಸತ್ಯವಾನ ಕಾಡಿನಲ್ಲಿ ಸೌದೆ ಕಡಿದು ಸಾಯುವ ಸಂಕಟದಿಂದ ಕೆಳಗಿಳಿದು ಬಂದು ಸಾವಿತ್ರಿಯ ತೊಡೆಗೆ

ತಲೆಗೊಟ್ಟು ಮಲಗಿದ್ದಾನೆ. ಸಾವಿತ್ರಿ ತನಗೆ ತಿಳಿದಿದ್ದ ಭಯದಿಂದ ಆವೇಶ ಹೊಂದಿ, ಸೆರಗಿನಿಂದ ಗಾಳಿ ಹಾಕುತ್ತ ಉಪಚರಿಸುತ್ತಿದ್ದಾಳೆ. ಅವನ ಮರಣ ಇವಳ ಮುಖದಲ್ಲಿ ಕಾಣುತ್ತಿದೆ. ಬಹದ್ದೂರ ಹೊರಗಡೆಗೆ ತಿರುಗಿಸಿ ಕೊಂಡಿರಬೇಕಾಗಿದ್ದ ಮುಖವನ್ನು ಅವಳ ಕಡೆಗೇ ತಿರುಗಿಸಿ ತಲೆಯನ್ನು ಹೊರಳಿಸಿ ಬಾಗಿದ್ದ ಅವಳೆದೆಗೆ ಬೇಕಾಗಿಯೇ ಒರಗಿಸಿಕೊಂಡ. ಅವನ ಮುಖದ ಮೇಲಿನ ಚೇಷ್ಟೆಯ ಛಾಯೆ ಅವಳಿಗೆ ಚೆನ್ನಾಗಿ ಕಂಡಿತು. ತೆರೆ ಯೊಳಗೆ ಇಬ್ಬರೇ ಇದ್ದಾಗ ನಾಯಕಿ "ನೀವು ನಿಮ್ಮ ದಾರಿಗೆ ಹೋಗ್ತಿ ದೀರಿ" ಎಂದು ಆಕ್ಷೇಪಿಸಿದಳು.

"ಅದೇ ಹೆಚ್ಚು ಸಹಜ ಕಂಡ್ರೀ, ನಿಮಗೆ ಗೊತ್ತಿಲ್ಲ" ಅವನು ಎಂದಿ ನಂತೆಯೇ ನಗುತ್ತ ವಾದಿಸಿಕೊಂಡ.

"ಹಳೇ ವಾದ. ನಂಗೆ ಅಷ್ಟು ಸಲಿಗೆ ಇಷ್ಟವಿಲ್ಲ–ಅನವಶ್ಯಕ–ಅಂತ ನಿಮಗೆ ಗೊತ್ತಿದ್ದೂ...."

"ಹೋಗ್ರಿ, ಹೋಗ್ರಿ. ಏನು ಮಡಿವಂತಿಕೆಯಪ್ಪ! ನಮ್ಮ ಅಜ್ಜಿ ಆಡಬಹುದಾದ ಹಾಗೆ ಆಡ್ತೀರಲ್ರೀ."

"ಹಾಗೇ ಆಗಲಿ, ದಯವಿಟ್ಟು ಇನ್ನು ಮುಂದಾದರೂ...."

"ನಾನೇನು ಹಾಗೆಲ್ಲ ಯೋಚಿಸಿಕೊಂಡು ಮಾಡಿದೆನೇ? ಎಲ್ಲ ಆ ಗಳಿಗೆ. ನಿಮ್ಮ ಸೆಳೆತ ನಿಮಗೇ ಗೊತ್ತಿಲ್ಲ. ನಾನೇನು ಮಾಡಲಿ, ಹೇಗೆ ತಿಳಿಸಲಿ?"

"ಸಾಕು, ಸಾಕು ಈ ಕುಚೋದ್ಯ."

"ಇಲ್ಲ, ನಿಜವಾಗಿ. ದೇವರಾಣೆ. ನಿಮ್ಮ ಕೈಗೆ ಸಿಕ್ಕಿ ನಾನು ಬಡಪಾಯಿ...."

"ಈ ಹಾಸ್ಯ, ಪರಿಹಾಸ್ಯ ಚೇಷ್ಟೇ ಬಿಡದೇ ಇದ್ದರೆ ನಾವು ಹೀಗೆ ಒಟ್ಟಿಗೆ ಬಹಳ ಕಾಲ ಅಭಿನಯಿಸ್ತಾ ಇರೋದು ಸಾಧ್ಯವಾಗೋದಿಲ್ಲ ಅಂತ ಕಾಣುತ್ತೆ."

"ಛಿ, ಛಿ, ಹಾಗೆನ್ನಬೇಡಿ. ನೀವು ನಾವು ಒಬ್ಬರಿಗೊಬ್ಬರು ಮಾಡಿ ಸಿದ ಹಾಗಿದೀವಿ. ಹುಂ, ಆದರೇನು ನೀವು ಅರಿತುಕೊಂಡಿಲ್ಲ. ನಾಯಕಿ........"

ನಾಯಕಿಗೆ ಕೋಪ ಹೆಚ್ಚಿತು. ಅಲ್ಲಿ ನಿಲ್ಲದೆ ಹೊರಟಳು. ಅವನು ಮುಂದೆ ಬಂದು "ಸಿಟ್ಟಾಗೋದು ಬೇಡ. ಸ್ವಲ್ಪ ಸೈರಿಸಿಕೊಳ್ಳಿ. ಸರಿ ಪಡಿಸಿಕೋತೀನಿ–ಸಾಧ್ಯವಾದಷ್ಟು" ಎಂದು ಕ್ಷಮೆ ಬೇಡಿದಂತೆ ಹೇಳಿದ. ಅವಳು ಮಾತನಾಡಲಿಲ್ಲ. ಮುನಿಸಿನಿಂದಲೇ ಹೋದಳು. ಅವಳ ಬೆನ್ನು ತಿರುಗಿದಾಗ ಅವನು 'ಹಣ್ಣಾಗುತ್ತಿದಾಳೆ, ಹುಚ್ಚಿ! ನಂಗೆ ಇದೆಲ್ಲ ಹೊಸದೆ?' ಎಂದುಕೊಂಡು ಹಲ್ಲುಕಿರಿದ.

ಈ ಬಗೆಯ ಪ್ರಬಂಧಗಳು ಆಗಾಗ ಇದ್ದೇ ಇರುತ್ತಿದ್ದುವು. ಇವು ಅವನಿಗೆ ಪ್ರಣಯದಾಟವಾದರೆ ಅವಳಿಗೆ ಬೇಸರದ ಕಾಟ; ಅವನಿಗೆ ಚೆಲ್ಲಾಟ, ಅವಳಿಗೆ ಸಂಕಟ. ಆದರೆ ದಿನದಿನವೂ ಅವಳ ಬಾಳನ್ನು ಹೆಚ್ಚು ಹೆಚ್ಚಾಗಿ ತುಂಬುತ್ತಿದ್ದ ಅಭಿನಯದ ತೃಪ್ತಿ, ಖ್ಯಾತಿಯ ಬಹುಮಾನ–ಇವು ಬೆಳೆಸಿದ ಸೌಖ್ಯಸೌಧವನ್ನು ಸಡಲಿಸುವಷ್ಟು ಗಟ್ಟಿಯಾಗಿರಲಿಲ್ಲ, ಬಹದ್ದೂರನ ಕುಟುಕು. ಮರೆತುಬಿಡುವುದು ಸಾಧ್ಯವಾಗುತ್ತಿತ್ತು. ಅಂತೂ ಒಂದಲ್ಲ ಒಂದು ದಿನದ ಇತ್ಯರ್ಥಕ್ಕಾಗಿ ಅವಳು ಕಾಯುತ್ತಿದ್ದಳು. ಅವನೂ ತನ್ನ ಸಮಯವನ್ನು ಕಾಯುತ್ತಿದ್ದ.

ಕಂಪನಿ 'ಝಾಂಸಿ ರಾಣಿ', 'ಔರಂಗ್‌ಜೇಬ್', 'ರಸಿಯಾ ಬೇಗಂ', 'ಸ್ವಪ್ನವಾಸವದತ್ತೆ', 'ಸೈರಂಧ್ರಿ', 'ಊರ್ವಶಿ', 'ಅಹಲ್ಯಾ', 'ಛತ್ರಪತಿ ಶಿವಾಜಿ' ಮೊದಲಾದ ಅನೇಕ ಚಾರಿತ್ರಿಕ ಪೌರಾಣಿಕ ನಾಟಕಗಳನ್ನೂ, ಹಲವು ಸಾಮಾಜಿಕ ನಾಟಕಗಳನ್ನೂ ಆಡಿದರು. ನಾಯಕಿಯ ಪ್ರಖ್ಯಾತಿ ನೆಗೆಯುತ್ತಿದ್ದಂತೆ ಅವಳ ಸಂಬಳವೂ ಹೆಚ್ಚುತ್ತಿತ್ತು. ಅವಳಿಗೆ ಮೂರು ಸಾವಿರ ಆದಾಗ ಬಹದ್ದೂರನು ಮ್ಯಾನೇಜರೊಡನೆ "ಹದಿನೈದು ವರ್ಷದಿಂದ ದುಡಿದ ನಮ್ಮನ್ನು ಕೇಳೋರೇ ಇಲ್ಲ, ಐದು ಸಾವಿರದಲ್ಲೇ ಕೊಳೆಯೋದು. ಇವಳು ಬಂದು ವರ್ಷವೂ ಕಳೆದಿಲ್ಲ, ಆಗಲೇ ಮೂರು ಸಾವಿರ. ಸಿನಿಮಾಕ್ಕೆ ಇಳಿದರಂತು ಮೂವತ್ತು ಸಾವಿರವನ್ನೇ ಕೊಟ್ಟಾರು. ಹುಂ, ಎಷ್ಟಾದರೂ ನಟಿಯಲ್ಲವೆ? ನಟನಾದರೆ ತಾನೆ ಅಭಿನಯಕ್ಕೆ ಮಾತ್ರ ಸಂಬಳ" ಎಂದು ಕೆಟ್ಟ ಮಾತಾಡಿದ. ಇದು ಹೇಗೋ ನಾಯಕಿಯ ಕಿವಿಗೂ ಬಿದ್ದಿತು. ಅವಳು ಚರ್ಚಿಸಲಿಲ್ಲವಾದರೂ ಇದು ಅವಳಿಗೆ ಅವನ

ಬಗ್ಗೆ ಅಸಹ್ಯವನ್ನೇ ಹುಟ್ಟಿಸಿತು. ಅವನಿಂದ ಬೇರೆಯಾಗಿಬಿಡಬೇಕೆಂಬ ಇಷ್ಟ, ಆದರೆ ಪರಿಣಾಮವೇನಾದೀತೋ ಎಂಬ ಅಧೈರ್ಯ–ಇನ್ನೂ.

ಆ ದಿನ 'ನೂರ್‌ಜಹಾನ್' ನಾಟಕ. ಬಡವನೊಬ್ಬನ ಮುದ್ದು ಮಗಳಾಗಿ, ವೀರ ಷೇರ್ ಆಫ್ಘನ್ ಸರದಾರನ ಪ್ರೇಮದ ಮಡದಿಯಾಗಿ; ಕೊಲೆಯಾದ ಪ್ರಿಯತಮನ ವಿಧವೆಯಾಗಿ; ಕಾಡಿ ಬೇಡಿ ಅಂಗಲಾಚಿದ ಮಹಾ ಮೊಗಲ್ ಸಾಮ್ರಾಟ ಜಹಾಂಗೀರನ ಪ್ರಣಯಿನಿಯಾಗಿ; ಅವನ ಒಡತಿಯಾಗಿ; ಚಕ್ರವರ್ತಿಯನ್ನೇ ತನ್ನ ಕಿರುಬೆರಳಿಗೆ ಸುತ್ತಿಕೊಂಡು ಅಧಿಕಾರ ದರ್ಪದಿಂದ ದೊಡ್ಡ ಸಾಮ್ರಾಜ್ಯದ ಆಡಳಿತವನ್ನು ನಿರ್ವಹಿಸಿದ ಸಾಮ್ರಾಜ್ಞಿಯಾಗಿ; ಅಧಿಕಾರ ಲೋಭಕ್ಕೆ ಸಿಕ್ಕಿ ಹಲವರೊಡನೆ ಹೋರಾಡಿ ಸೋತ ಸೆರೆಯಾಳಾಗಿ; ಮಾನಿನಿಯ ಮಾರ್ದವ, ಪುರುಷನ ಪೌರುಷದಿಂದ ಮೆರೆದ ಆ ಚಾರಿತ್ರಿಕ ವ್ಯಕ್ತಿಯ ಹತ್ತು ಮುಖಗಳನ್ನು ಅಭಿನಯಿಸಿ ನಾಯಕಿ ಸಭಿಕರ ಮನಸ್ಸನ್ನು ಸೂರೆಗೊಂಡಳು. ದೃಶ್ಯದೃಶ್ಯಕ್ಕೂ ಬದಲಾಯಿಸಿದ ಜರಿ ರೇಷ್ಮೆಯ ಪೈಜಾಮ, ಕುರ್ತ, ಮೇಲು ಹೊದಿಕೆಗಳಿಂದ, ಮೊಗಲ ರಮಣಿಯರ ಆಕರ್ಷಣೀಯ ಆಭರಣಗಳಿಂದ, ರಾಜೋಚಿತ ಭಾವ ಭಂಗಿಗಳಿಂದ, ಹೆಣ್ಣಿನ ಚಪಲ ಚಾತುರ್ಯ ದೌರ್ಬಲ್ಯ ಪ್ರದರ್ಶನದಿಂದ ನಾಯಕಿ ಮನಮೋಹಕವಾಗಿದ್ದಳು. ಅವಳಿಗೆ ನೂರ್‌ಜಹಾನಳಷ್ಟೆ ಹೆಮ್ಮೆ ಯಾಗಿತ್ತು. ಬಹದ್ದೂರನೂ ಜಹಾಂಗೀರನ ಪಾತ್ರವನ್ನು ಸ್ತೋತ್ರಾರ್ಹ ವಾಗಿ ನಿರ್ವಹಿಸಿದ್ದ. ಮದ್ಯಾಸಕ್ತನಾದ ಸಾಮ್ರಾಟನನ್ನು ಅಭಿನಯಿಸುವು ದಕ್ಕಾಗಿ ಅವನು ಮದ್ಯವನ್ನೂ ಕುಡಿಯುತ್ತಿದ್ದ. ಅವನಿಗೆ ಅಭ್ಯಾಸವಿತ್ತು.

ಜಹಾಂಗೀರನ ಕೆಲಸ ಮುಗಿದುಹೋಗಿತ್ತು. ಅವಳದ್ದು ಇನ್ನೊಂದು ದೃಶ್ಯ ಬಾಕಿಯಿತ್ತು. ಹಿಂದಿನ ದೃಶ್ಯ ನಡೆಯುತ್ತಿತ್ತು. ನಾಯಕಿ ತನ್ನ ಕೋಣೆಯಲ್ಲಿ ಬಟ್ಟೆ ಬದಲಾಯಿಸಿಕೊಂಡು ಕನ್ನಡಿಯ ಮುಂದೆ ನಿಂತು ಅಲಂಕಾರದ ಕಡೆಯ ತಿದ್ದುಗಳಲ್ಲಿದ್ದಳು. ಬಾಗಿಲು ತಟ್ಟಿದ ಶಬ್ದ. "ಹೂಂ" ಎಂದಳು–ಯಾರೋ ಸೇವಕನಿರಬೇಕೆಂದು. ನಿಲುವುಗನ್ನಡಿ ಯಲ್ಲಿ ಕಂಡ ಪ್ರತಿಬಿಂಬ ಬಹದ್ದೂರನದು. ಅವನು ಆಗಾಗ ಹೀಗೆ ಬರು ತ್ತಿದ್ದ, ಮಾತುಕತೆಗೆ. ಅವನ ಕೈಯಲ್ಲಿ ಸೊಗಸಾದ ದೊಡ್ಡ ತುರಾಯಿ. ಅವಳಿಗೆ ಈ ಪಾಶ್ಚಾತ್ಯ ರೀತಿ ಈವರೆಗೆ ರೂಢಿಯಾಗಿತ್ತು.

ವಾರೆ ಮಾಡಿ ಅವನನ್ನು ನೋಡಿದಳು. ಅವನು ಹುಬ್ಬೆಬ್ಬಿಸಿ ಮುಗಳುನಗೆ ಸೂಸುತ್ತ "ನನ್ನ ಮೆಚ್ಚಿಗೆ ತೋರಿಸಲೇಬೇಕು ಅಂತ ಅನ್ನಿಸಿತು–ಈ ದಿನದ ಅಭಿನಯ ಕಂಡು. ಬಂದೆ" ಮುಂದೆ ಬಂದ. ತುರಾಯಿಯನ್ನು ಕೊಟ್ಟ.

"ಬಹಳ ಸಂತೋಷ" ಅವಳಿಗೆ ಆಗಲೇ ಬಹಳ ಆನಂದವಾಗಿತ್ತು. ಈಗ ಇವನಿಂದ, ತನ್ನ ಪ್ರತಿಸ್ಪರ್ಧಿಯಿಂದ, ಈ ಮಾತು, ಕಾಣಿಕೆ ಆ ಆನಂದಕ್ಕೆ ಕಳಸವಿಟ್ಟಂತಾಯಿತು. ಆ ಕ್ಷಣದಲ್ಲಿ ಅವನ ತಪ್ಪನ್ನೆಲ್ಲ ಮನ್ನಿಸಿ ಸ್ವಾಗತದ ನಸುನಗೆ ತೋರಿಸಿಕೊಂಡಿತು. "ನಿಮ್ಮಿಂದ ಬಂದ ಮೆಚ್ಚಿಗೆಗೆ ಎರಡರಷ್ಟು ಬೆಲೆ. ಆದರೆ ಇದರಲ್ಲಿ ಕುಚೋದ್ಯವೇನೂ ಇಲ್ಲವೊ?"

ಹೂವನ್ನು ಮೂಸಿ ಕನ್ನಡಿಯ ಮುಂದಿನ ಮೇಜಿನ ಮೇಲಿಟ್ಟಳು.

"ಛಿ! ಛಿ! ಎಲ್ಲ ಕಾಲದಲ್ಲೂ ಹಾಗಿರ್ತೀನೇ? ಇಂದಿನ ಅಭಿನಯಕ್ಕಂತೂ ಎಷ್ಟು ಮೆಚ್ಚಿಗೆಯಾದರೂ ಸ್ವಲ್ಪವೆ. ಏನು ಸೊಗಸು! ಏನು ನೋಡಿ! ಸಮ್ಮೋಹನಾಸ್ತ್ರವನ್ನೇ ಎಸೆದುಬಿಟ್ಟಿದ್ದಿರಿ ಸಭೆಯ ಮೇಲೆ–ನನ್ನ ಮೇಲೂ. ಕುಡಿದು ಮಾತಾಡ್ತಾ ಇದಾನೆ ಅಂದುಕೋಬೇಡಿ. ಸತ್ಯ. ಜಹಾಂಗೀರನಾಗಿ ನಿಮ್ಮನ್ನು ನಿಧಾನವಾಗಿ ನೋಡಿದೆ, ಮರುಳಾದೆ ಎಲ್ಲರಂತೆ."

"ಧನ್ಯವಾದಗಳು!" ನಾಯಕಿಯ ಮುಖ ನಾಚಿಕೆಯಿಂದ ಕೆಂಪೇರಿತು. ಅವನನ್ನು ಇದಿರಿಸಲಾರದೆ ಅವಳು ಕನ್ನಡಿಗೆ ತಿರುಗಿ ಬಟ್ಟೆಯ ಮೇಲೆ, ಕುರುಳಿನ ಮೇಲೆ ಅತ್ತಿತ್ತ ಕೈಯಾಡಿಸುತ್ತಿದ್ದಳು–ವ್ಯರ್ಥವಾಗಿ.

"ಆಹಾ! ಈ ಉಡುಪಂತು ಎಷ್ಟು ಚೆನ್ನಾಗಿ ಒಪ್ಪುತ್ತೆ! ಏನು ಸೊಗಸು! ರತ್ನ ರಾಶಿಯ ಮೇಲೆ ಬೆಳಕನ್ನು ಹೊದಿಸಿದಂತೆ–ಸೌಂದರ್ಯ ರಾಶಿಯ ಮೇಲೆ ಈ ಉಡಿಗೆ ತೊಡಿಗೆ...."

"ಓ, ಸಾಕು, ಸಾಕು! ಇಲ್ಲೇನು ನಾಟಕವಾಡುತ್ತಿಲ್ಲ, ನಾವು" ಅವನ ಕಡೆಗೆ ತಿರುಗಿ ನಕ್ಕಳು.

"ಇದೂ ನಾಟಕವಲ್ಲ, ನಾಯಕಿ. ನಿಜ. ಕೇವಲ ನಿಜ. ಚಿತ್ತದ ಸತ್ಯ."

"ಓಹೋ!"

"ಹೂಂ. ಈ ರೂಪ ಹೇಗೆ ಕೆಣಕುತ್ತಿದೆ ಅಂತ ನಿಂಗೆ ಗೊತ್ತಿಲ್ಲ."

"ಆ!" ಅವಳಿಗೆ ಕೊಂಚ ದಿಗಿಲಾಯಿತು.

"ನಾನು ಮದ್ಯ ಕುಡಿದಿದೀನಿ ಅಂತ ತಿಳಿದಿದೀಯೆ. ಆದರೆ ನಿಜವಾಗಿ ಕುಡಿದಿರೋದು ಮೋಹ–ನೀನು ಕುಡಿಸಿದೀಯೆ."

"ಛಿ! ಛಿ! ಆಮೇಲೆ ಮಾತಾಡೋಣ. ಈಗ ಹೊತ್ತಾಯ್ತು–ದೃಶ್ಯಕ್ಕೆ."

"ಹಾಳು ದೃಶ್ಯ ಹಾಳಾಗಲಿ. ಉಹುಂ, ಉಹುಂ. ಹೋಗಲಾರೆ–ನಿನ್ನ ಸೆಳೆತದಿಂದ ತಪ್ಪಿಸಿಕೊಂಡು" ಅವನು ಇನ್ನೂ ಮುಂದೆ ಬಂದ.

"ನಡೀರಿ, ನಡೀರಿ ಹೋಗೋಣ" ನಾಯಕಿ ತಪ್ಪಿಸಿಕೊಳ್ಳಲು ಗಡಿಬಿಡಿ ಗಾಬರಿಗಳಿಂದ ಹೊರಟಳು. ಬಾಗಿಲ ಕಡೆಗೆ ಹೆಜ್ಜೆಯಿಟ್ಟಳು.

"ಓ, ನಾಯಕಿ! ನಾಯಕಿ! ಒಂದು........ಒಂದೇ ಒಂದು........" ಅವಳನ್ನು ತಬ್ಬಿಕೊಂಡ, ಮುತ್ತಿಡುವುದಕ್ಕೆ ಮುಖವನ್ನು ಮುಂದೆ ತಂದ.

ಛಟೀರ್! ಅವನ ಕೆನ್ನೆಗೆ ಏಟು ಬಿತ್ತು.

"ಹೋಗಿ! ಹೊರಗೆ!" ನಾಯಕಿ ಕೂಗಿಕೊಂಡಳು, ಸಿಟ್ಟಿನಿಂದ ನಡುಗುತ್ತಿದ್ದಳು.

"ಆ! ನಂಗೆ! ಇದು! ಬಹದ್ದೂರನಿಗೆ!" ಈಗ ಅವನಿಗೆ ಎಚ್ಚರವಾಗಿತ್ತು. ಅವಳಿಂದ ಕೈತೆಗೆದು, ಕಣ್ಣಾಗಲಿಸಿ ಹೂಂಕರಿಸಿದ.

"ಹೂಂ. ಇದಾದರೂ ಅಷ್ಟು ನಡತೇನ ಕಲಿಸೀತು–ನಿಮಗೆ!"

"ನೀನು! ಯಃಕಶ್ಚಿತ ನಟಿ! ನಂಗೆ! ನಿಂಗಾಗುತ್ತೆ ಗತಿ!"

"ಹುಂ! ಆದದ್ದಾಗಲಿ. ಅಯೋಗ್ಯ! ನಡಿ!" ಕೈತೋರಿಸಿದಳು.

"ಏನೋ ವಿನೋದ ಮಾಡಿದರೆ...."

"ವಿನೋದ! ವಿಕೃತ ಕಾಮ! ಲುಚ್ಚತನ."

"ಈ ಅಪಮಾನ!"

"ನೀನೇ ಕರೆದುಕೊಂಡೆ."

"ಹುಂ! ನನ್ನ ಗಮನಕ್ಕೇ ಎಂಥೆಂಥ ಎಷ್ಟೋ-ಹೆಂಗಸರು ಕಾಯ್ದು ಕಾಯ್ದು ಕಾತರಿಸು...."

"ಅವರಲ್ಲಿಗೇ ಹೋಗು!"

ಈವರೆಗೆ ಕೋಣೆಯಲ್ಲಿ ನಟನಟಿಯರು ತುಂಬಿಕೊಂಡಿದ್ದರು ; ಕಂಡ ದೃಶ್ಯದಿಂದ ಚಕಿತರಾದರು. ಮ್ಯಾನೇಜರ್ ಬಂದ. ಇತರರು. ಕಡೆಯಲ್ಲಿ ಸೇರರು.' ಅವರಿಗಾಗಲೇ ವಿಷಯ ತಿಳಿದಿದ್ದಿತು. ಬಹದ್ದೂರ ನಾಯಕಿಯ ಕೋಣೆಗೆ ಹೋದಾಗಲೇ ಸ್ತ್ರೀ ಸಹಜವಾದ ಕುತೂಹಲದಿಂದ ಇಬ್ಬರು ಮೂವರು ಹುಡುಗಿಯರು ಬಾಗಿಲ ಕಂಡಿಯಲ್ಲಿ ಇಣಿಕಿ ನೋಡುತ್ತಿದ್ದು ಎಲ್ಲವನ್ನೂ ಕಂಡಿದ್ದರು. ಸ್ತ್ರೀ ಸಹಜವಾದ ಚಾಪಲ್ಯದಿಂದಲೇ ಬಂದವರಿಗೆಲ್ಲ ತಿಳಿಸಿದ್ದರು. ಅಲ್ಲಿಗೆ ಬಂದವರು ಕಂಡುದುದು ನಟಿ ನಾಯಕಿಯನ್ನಲ್ಲ; ಅಧಿಕಾರವಾಣಿಯಿಂದ ಗುಲಾಮನೊಬ್ಬನ ಮೇಲೆ ರೇಗಿ ಆಜ್ಞಾಪಿಸುತ್ತಿದ್ದ ಮಹಾ ಸಾಮ್ರಾಜ್ಞಿ ನೂರ್‌ಜಹಾನಳನ್ನು! ಅವಳ ಇದಿರಿನಲ್ಲಿ ಅವರು ಕಂಡುದುದು ಬಹದ್ದೂರನನ್ನಲ್ಲ–ಹೆಡೆ ತುಳಿಸಿಕೊಂಡು ಎದ್ದು ನಿಂತು ಹೆಡೆ ಯಾಡಿಸುತ್ತಿದ್ದ ಹಾವನ್ನು! ಸ್ವಲ್ಪ ಕಾಲ ಎಲ್ಲರೂ ರಾಹು ಬಡಿದವರಂತೆ, ಮೋಡಿಗೆ ಸಿಕ್ಕಿದವರಂತೆ ಸುಮ್ಮನೆ ನಿಂತಿದ್ದರು.

“ ಈ ಅನಾಮಧೇಯಳಿಗೆ ಎಷ್ಟು ಹಮ್ಮು! ಯಾವ ಚೆಲುವಿಗಾಗೋ, ಯಾವ ಪ್ರತಿಭೆಗಾಗೋ. ಏನೋ ಮಹಾ ಪತಿವ್ರತೆ ಅಂತ ತಿಳಿದುಕೊಂಡಿದಾಳೆ. ಗಂಡನ್ನ ಬಿಟ್ಟು ಓಡಿ ಬಂದೋಳು........ದೊಡ್ಡ ಗರತಿ ಹಾಗೆ ಆಡ್ತಾಳೆ–ಯಾರಿಗೂ ತಿಳಿದಿಲ್ಲ ಅಂತ.”

“ ಬಹದ್ದೂರ್ ! ಬಹದ್ದೂರ್ ! ” ಸೇರರು ತಡೆಯಲು ಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ಅವನ ಕಡೆಯ ಮಾತು ಕಿವಿಗೆ ಬಿದ್ದೊಡನೆ ನಾಯಕಿಯ ಮನಸ್ಸಿನಲ್ಲಿ ತನ್ನ ಹಿಂದಿನ ಬಾಳೆಲ್ಲ ಅರೆಕ್ಷಣದಲ್ಲಿ ಮಿಂಚಿ ಹೋಯಿತು. ಕಣ್ಣುಗಳಲ್ಲಿ ನೀರು ತುಳುಕಿತು. ಕೆನ್ನೆಗೆ ಹರಿಯದಂತೆ ಕಷ್ಟದಿಂದ ತಡೆದುಕೊಂಡಳು. ಅವಳ ತುಟಿ ನಡುಗುತ್ತಿತ್ತು. ಮಾತು ಹೊರಡುತ್ತಿರಲಿಲ್ಲ. ಗಂಟಲು ಬಿಗಿದು ಬಂದಿತ್ತು. ಬಹದ್ದೂರ ನಿಷ್ಕರುಣೆಯಿಂದ, ತಿರಸ್ಕಾರದಿಂದ ಮತ್ತು ಅವನ ನಿರಾಸೆ ಹುಟ್ಟಿಸಿದ.ರೋಷ, ಹಿಂದಿನಿಂದ ಕೂಡಿಕೊಂಡು ಈಗ ಮೇಲಿಂದ ಮೇಲೆ ಕವಿದು ಬಂದ ಆ ಹಳೆಯ ಹಗೆತನ, ಈರ್ಷ್ಯೆ–ಇವುಗಳನ್ನೆಲ್ಲ ತುಂಬಿದ ಮಾತುಗಳನ್ನು ಮುಂದುವರಿಸಿದ.

“ ಇಂಥೋರು ಎಷ್ಟು ಜನರನ್ನೋ ನೋಡಿದ್ದೀನಿ, ಆಗಲೇ. ಹುಂ! ಬೀದೀಲಿ ಬಿದ್ದಿರ್ತಾರೆ. ಇವತ್ತು ಸರಿಯಾಗ[illegible]

ಹೆಚ್ಚಿಕೋತಿದಾಳೆ, ದಿನ ದಿನಕ್ಕೆ. ಇವಳೊಡನೆ ಇನ್ನು ಪಾರ್ಟ್ ಮಾಡೋ ದಿಲ್ಲ. ಆಗ ಗೊತ್ತಾಗುತ್ತೆ–ಇವಳ ಬೆಲೆ."

"ಇವನೊಂದಿಗೆ–ಇಂಥ ಅಯೋಗ್ಯರೊಂದಿಗೆ ಕೆಲಸ ಮಾಡೋ ದಕ್ಕಿಂತ ಭಿಕ್ಷ ಬೇಡೋದು ಲೇಸು" ಅವಳಿಂದ ಮಾತು ಬೇಧಿಸಿಕೊಂಡು ಬಂದಿತು.

"ನಿಂಗೆ ಇರೋದು ಅದೇ...."

"ಛಿ! ಛಿ! ಇದೆಲ್ಲ ಏನು ಮಾತು. ಈ ಜಗಳ ಸರಿಯಿಲ್ಲ–ಕೆಲಸ ವಿರೋವಾಗ. ಶಾಂತರಾಗಿ! ಮ್ಯಾನೇಜರೆ, ಜನಕ್ಕೆ ತಿಳಿಸಿಬಿಡಿ–ಮುಂದಿನ ದೃಶ್ಯ ಕೊಂಚ ತಡವಾಗುತ್ತೆ ಅಂತ. ಬಹದ್ದೂರ್, ಇದೆಲ್ಲ ಏನು ಮಾತು? ತಪ್ಪಾಗಿದ್ದಾವರೆ ಸ್ವಲ್ಪ ಸರಿಹೋಗಿಸಿಕೊಂಡು ಹೋದರಾಯ್ತು–ಏನು ದೊಡ್ಡ ವಿಷಯ," ಸೇಠರು ಮತ್ತೆ ಸಮಾಧಾನಕ್ಕೆ ಯತ್ನಿಸಿದರು.

"ದೊಡ್ಡ ವಿಷಯ ಇವಳಿಗೆ. ಸರಿಗಿರಿಹೋಗೋ ಮಾತೇ ಇಲ್ಲ. ಇವಳ ಪ್ರತಿಷ್ಠೆ ಸಾಕಾದಷ್ಟು ಸಹಿಸಿದೀನಿ. ಇನ್ನಾಗೋದಿಲ್ಲ. ಇವಳು ಹೋಗಬೇಕು, ಇಲ್ಲ ನಾನು."

"ನಾನು ಹೋಗಲು ಸಿದ್ಧ."

"ನೋಡಿದಿರ, ನೋಡಿದಿರ. ಆ ಮಾತೆಲ್ಲ ಯಾಕೆ, ಈಗ? ಯೋಚಿಸೋಣ ಸಾವಧಾನವಾಗಿ. ಬೇರೆಯಾಗೋದು ಎಷ್ಟರಲ್ಲಿದೆ? ಒಂದಾಗಿ ನಡೆದುಕೊಳ್ಳೋಣ, ಇಂಥ ಮನಸ್ತಾಪಕ್ಕೆ ದಾರಿಕೊಡದಂತೆ."

"ಊಹುಂ. ಅದೆಲ್ಲ ಆಗೋದಿಲ್ಲ, ಸೇಠ್‌ಜೀ. ಇನ್ನು ಕಡಿದು ಹೋಯ್ತು; ಇವಳು ಹೋಗಲೇಬೇಕು. ಈಗಲೇ ಈ ಕ್ಷಣವೇ ತೀರ್ಮಾನ ವಾಗಿ ಬಿಡಬೇಕು."

"ಬಹದ್ದೂರ್ ಸ್ವಲ್ಪ ಸ್ಥೈರಿಸಿಕೊಳ್ಳಿ. ಬಲವಂತ ಮಾಡಬೇಡಿ. ಕಾಲ ಕೊಡಿ."

"ಸಾಧ್ಯವಿಲ್ಲ. ಇಲ್ಲದಿದ್ದರೆ ನಾನೇ ಹೊರಟುಹೋಗ್ತೀನಿ."

"ಹೋಗಬಹುದು, ಹಾಗೆ ಹೋಗಲೇಬೇಕಾದರೆ." ಸೇಠರಿಂದ.

"ಆ!" ಅವನಿಗೆ ಛಳುಕು ಹೊಡೆದಂತಾಯಿತು. "ಇವಳಿದ್ದರೆ ನಂಗೆ ಬೇರೆ ದಾರಿಯಿಲ್ಲ."

" ಸರಿ, ಹಾಗಾದರೆ. ನಿಮ್ಮನ್ನು ಕಳೆದುಕೋಬೇಕಾಗುತ್ತೆ. ಉಪಾಯವಿಲ್ಲ."

" ಏನು ಸೇಠ್‌ಜೀ, ಏನು ಆಡ್ತಾ ಇದೀರಿ ಅಂತ ಗೊತ್ತಿದೆಯೋ? ನಾನು ಹೋದರೆ ನಾಳೆ ಕಂಪನಿ ಮುಳುಗಿಹೋಗುತ್ತೆ."

" ಏನು ಮಾಡೋದು, ಮುಳುಗಿಹೋಗಲಿ."

" ನಂಗಿಂತ ಅವಳು ಹೆಚ್ಚೋ ? "

" ಬಹದ್ದೂರ್, ಮಾತು, ಹೆಚ್ಚು ಕಡಿಮೆಯದಲ್ಲ. ತಪ್ಪು ನಿಮ್ಮದು."

" ಓಹೋ, ಅದು ನಿಮ್ಮ ತೀರ್ಮಾನವೋ-ಇವಳ ಕಡೆಗೇ ವಹಿಸಿ ಕೊಂಡು ಮಾತಾಡುತ್ತಿದೀರಿ " ಬಹದ್ದೂರ್ ಸೇಠರ ಮೇಲೂ ರೇಗಿದ.

" ಕಂಪನಿ ಯಾಕೆ ಕೆಡಬೇಕು. ನಾನೇ........" ನಾಯಕಿ ಮಧ್ಯೆ ಹೇಳಿದಳು.

" ನಂಗಿರಲಮ್ಮ ಈ ವಿಷಯ. ನೀವೇನು ಯೋಚಿಸಬೇಡಿ."

" ಹೂಂ, ಹಾಗಾದರೆ ನಾನಿರಬೇಕಿಲ್ಲವೋ ? " ಬಹದ್ದೂರ್ ಒತ್ತಿ ಕೇಳಿದ.

" ನಿಮ್ಮದೇ ಆಯ್ಕೆ."

" ಸರಿ, ನಿಮ್ಮ ಆಯ್ಕೆ ನಂಗೂ ಗೊತ್ತಾಯ್ತು-ನಮ್ಮಿಬ್ಬರಲ್ಲಿ. ಕಾರಣವೂ ಗೊತ್ತಾಯ್ತು" ಅರ್ಥಗರ್ಭಿತವಾಗಿ ಅಪಹಾಸ್ಯಮಾಡಿದ.

" ಏನು ಮಾತಾಡ್ತಾ ಇದೀರಿ ಅಂತ ಗೊತ್ತೊ ನಿಮಗೆ ? " ಸೇಠರೂ ರೇಗಿದರು.

" ಬೊಂಬಾಯಿಗೆಲ್ಲ ಗೊತ್ತಾಗಿದೆ, ಇಲ್ಲದೇ ಇದ್ದರೆ ಗೊತ್ತಾಗುತ್ತೆ, ಹುಂ ! "

" ನೀವು ಹೋಗೋದೇ ಸರಿ. ನಾನು ತಡೆಯೋದಿಲ್ಲ."

" ನಾನು ಇರೋದೂ ಇಲ್ಲ-ಬೇಡಿಕೊಂಡರೂ. ಬರೋದೂ ಇಲ್ಲ ಕರೆಸಿದರೂ, ತಿಳಿದುಕೊಳ್ಳಿ. ಇದಕ್ಕೆ ವ್ಯಸನಪಡುತ್ತೀರಿ ಮುಂದೆ."

" ಹೋಗಯ್ಯ, ಸಾಕು ! " ಸೇಠರು ತಡೆಯಲಾರದೆ ಗದರಿಸಿಬಿಟ್ಟರು.

ಬಹದ್ದೂರ್ ಕೊಡಹಿಕೊಂಡು ಹೊರಟುಹೋದ.

"ತಪ್ಪಾಯ್ತಲ್ಲ," ನಾಯಕಿ ನಡುಗುವ ಧ್ವನಿಯಲ್ಲಿ ಸೇಠರನ್ನು ಎಚ್ಚರಿಸಿದಳು. ಬಹದ್ದೂರನ ಕೆಟ್ಟ ಮಾತಿನ ಸೂಚನೆಯ ಚುಚ್ಚು ಅವಳ ದುಃಖಕ್ಕೆ ನಾಚಿಕೆಯನ್ನೂ ಬೆರೆಸಿತ್ತು.

"ಏನಿಲ್ಲ. ನೀವು ನೊಂದುಕೋಬೇಡಿ, ಅವನ ಮಾತಿಗಾಗಿ. ಅವನ ಕೆಟ್ಟತನವನ್ನು ನಾನು ನೋಡಿಕೋತೀನಿ. ನಾನೇ ಸದರ ಕೊಟ್ಟು, ಹೆದರಿಕೊಂಡು ಅವನನ್ನು ಹೆಚ್ಚಿಸಿದ ಹಾಗಾಯ್ತು. ಹುಂ, ಆಗಲಿ!" ಸೇಠರು ತಲೆಯಾಡಿಸಿದರು.

ಮ್ಯಾನೇಜರು ಕಡೆಯ ದೃಶ್ಯದ ತಡೆಗಾಗಿ ಮಹಾಜನರ ಕ್ಷಮೆಯನ್ನು ಬೇಡಿದಾಗ ಪ್ರೆಸ್ ಬೇಟೆಯ ನಾಯಿಗಳು ಕತೆಯೊಂದರ ವಾಸನೆ ಕಂಡುಕೊಂಡು ತೆರೆಯೊಳಗೆ ಬಂದು ಸುಳಿದಾಡಿದರು. ಅವರಿಗೆ ಹಬ್ಬದೂಟವೇ ಸಿಕ್ಕಿತು. ಇನ್ನೊಂದು ಕ್ಷಣದಲ್ಲಿ ಸಭಾಮಂದಿರವೆಲ್ಲ ಈ ಕತೆಯಿಂದ ಗುಜುಗುಟ್ಟುತ್ತಿತ್ತು. 'ಕೆನ್ನೆಗೇ ಹೊಡೆದುಬಿಟ್ಟಳಂತೆ—ಬಹದ್ದೂರನಿಗೆ, ಅಬ್ಬಬ್ಬ!' 'ಏನು ಮಾಡಿದನೋ' 'ಏನೋ ಅವಿವೇಕವಂತೆ' 'ಅಲ್ಲ, ಅವಳ ಧೈರ್ಯ!' 'ಅವನಿಗೆ ಸರಿಯಾಯ್ತು' 'ಹುಂ, ಡಾನ್‌ಜಾನ್ ಅಂದುಕೊಂಡಿದ್ದ' 'ಅದೆಷ್ಟು ಹೆಂಗಸರ ಕತೆ, ಅವನದ್ದರಲ್ಲಿ!' 'ಲುಚ್ಚಾ ಮನುಷ್ಯ ಕಂಡ್ರೀ' 'ಆದರೆ ಅಂಥಾ ನಟ! ಈ ಕಂಪನಿಯ ಗತಿ?' 'ಯಾಕೆ, ಅವಳೇನು ಕಡಿಮೆಯೇ? ಅವನನ್ನು ಮೀರಿಸಿದ್ದಾಳೆ' 'ಆದರೂ ........' 'ಆದರೇನು ಜನರೇನು ಕಡಿಮೆ ಆಗೋದಿಲ್ಲ. ಇನ್ನೂ ಹೆಚ್ಚಾಗೇ ಬರ್ತಾರೆ. ಹಣಕ್ಕೆ ತಕ್ಕ ಫಲವೂ ಸಿಕ್ಕೇ ಸಿಕ್ಕುತ್ತೆ' 'ಹ್ಞ! ಅವನಿಗೆ ಸರಿಯಾಯ್ತು ಹಾಗಾದರೆ' 'ಮೆರೆಯೋರಿಗೆಲ್ಲ ಒಂದಲ್ಲ ಒಂದು ದಿನ ಬಂದೇ ಬರುತ್ತೆ ಪಾಡು. ಬಲಿ ಹಾಕೋರು ಬಂದೇ ಬರ್ತಾರೆ' 'ಅವನೇನು ಕೆಡೋದಿಲ್ಲ ಬಿಡಿ. ಕಂಪನಿಗಳಿಗೇನು' 'ಆದರೂ ಅವನ ಬೀಳು ಮೊದಲಾಯಿತು ಅನ್ನಿ. ಅವನ ಗೌರವ ಗೌರಿಶಂಕರದಿಂದ ಇಳಿಯುತ್ತಲೇ ಬರುತ್ತೆ, ಇನ್ನು. ಏಟು ತಿಂದೋನು ಅಂದರೆ ಎರಡನೆ ಸ್ಥಾನವೇ' 'ಅಂತೂ ಗಟ್ಟಿಗಳಪ್ಪ, ಧೈರ್ಯಮಾಡಿ ಬಾರಿಸಿಬಿಟ್ಟಳಲ್ಲ ಅಂಥೋನಿಗೂ!' 'ಇನ್ನೇನ್ರಿ ಮತ್ತೆ? ಮೆಚ್ಚಬೇಕಾದ ವಿಚಾರ' 'ಹುಂ, ನಾಟಕ ಜೀವನ ಅಂದರೆ ವೇಶ್ಯಾ ಜೀವನವೇ? ಮುಠ್ಠಾಳ ಜನ ಹಾಳು ಮಾಡಿದಾರೆ ಅದನ್ನ—ಗೌರವಸ್ಥರು

ಹೆಸರಿಗೇ ಹೆದರಿಕೊಳ್ಳೋ ಹಾಗೆ' 'ಹೀಗೇ ನಾಲ್ಕಾರು ಹೆಂಗಸರು ಮುಂಪೆ ಬಂಧರೆ ಈ ಹೊಲಸೆಲ್ಲ ಹುಟ್ಟಡಗಿಹೋಗುತ್ತೆ-ಸ್ವಲ್ಪ ಕಾಲದಲ್ಲೆ' 'ಆಮೇಲೆ ಪತ್ರಿಕೆಯೋರಿಗೆ ಏನಿರುತ್ತೆ ಬರೆಯೋದಕ್ಕೆ, ಜನಕ್ಕೇನಿರುತ್ತೆ ಮಾತಾಡೋಕೆ?' 'ಏನೋಪ್ಪ, ಅವಳೇನು ಪತಿವ್ರತೆ ಅಂತ ತಿಳಿಕೋಬೇಕೆ? ಏನೇನಿದೆಯೋ ಒಳಗುಟ್ಟು' 'ಛಿ, ಛಿ, ತಿಳೀದೆ ಮಾಡದೆ ಹೇಳಬಾರದು' 'ಮನೆ ಬಿಟ್ಟು ಗಂಡ ಮಕ್ಕಳನ್ನು ಬಿಟ್ಟು ಬಂದೋಳಲ್ಲವೇನ್ರಿ? ಇನ್ನೇನು ಬೇಕು ಸಾಕ್ಷಿ? ಗರತಿಯಾಗಿದ್ದರೆ........' 'ಏ, ಹಾಗೆಂದರೆ ಕಲೆ ಮೇಲೆ ಅಭಿರುಚಿಯೇ ಇರಬಾರದೆ? ಗಂಡ ಒಪ್ಪಲಿಲ್ಲ ಅಂತ ತಾನೆ ಅನ್ನೋದು, ಅದಕ್ಕೇ ಬಿಟ್ಟಳಂತೆ' 'ಅದೇನು ಕಲಾಭಿರುಚಿಯೋ, ಹೊರ ಜೀವನದ ರುಚಿಯೋ, ಹ್ಞ!' 'ನೋಡಿದಿರಾ, ನಮಗೇ ಇಂಥಾದ್ದೆಲ್ಲ ಬೇಕು. ಇಲ್ಲದೇ ಇದ್ದರೂ ಸೃಷ್ಟಿಸಿಕೋತೀವಿ. ಖಾಯಿಲೆ ಅಂತ ಕಾಣುತ್ತೆ. ಕೆಟ್ಟ ಬುದ್ಧಿ ಮಾಡಬಾರದು' 'ಬಿಡ್ರೀ, ಬಿಡ್ರೀ ಸಾಕು. ನೀವು ಒಬ್ಬರೇ ಸಭ್ಯಸ್ಥರೋ. ನಂಗೆಲ್ಲ........' 'ಛಿ, ಛಿ! ನಾವೆಲ್ಲ ಯಾಕೆ ಜಗಳ ಕಾಯಬೇಕು. ಹಾಳಾಗಿ ಹೋಗಲಿ. ನಾಟಕ ನಡೆದರೆ ಸಾಕು' 'ಅವಳಿಗೆ ಒಳ್ಳೇ ಪ್ರೋತ್ಸಾಹ ಕೊಡಬೇಕು-ಈ ಧೈರ್ಯಕ್ಕಾದರೂ' 'ಇನ್ನು ಯಾವುದಕ್ಕೆ ತಾನೆ ಬೇಡ? ಯಾವುದರಲ್ಲಿ ಕಡಿಮೆಯಾಗಿದಾಳೆ? ರಂಗಭೂಮಿಯ ಮೇಲೆ ಬಂದು ನಿಂತರೇ ಸಾಕು. ಇಂಥ ನಟಿ ನಾನಂತೂ ನೋಡಿರಲಿಲ್ಲ.' 'ನಾನೂ' 'ನಾನೂ ಅಷ್ಟೆ' 'ಅಗೋ ನೋಡಿ ಫರದೆ ಏಳುತ್ತೆ-ಈಗ ಬರ್‍ತಾಳೆ. ಚೆನ್ನಾಗಿ ಕೈ ತಟ್ಟೋಣ' ಸಭಿಕರ ಮಾತು ನೂರೆಂಟು ತರಹ.

ಫರದೆ ಎದ್ದಿತು, ಅವಳೂ ಕಾಲಿಟ್ಟಳು-ಹೆದರುತ್ತ. ಚಪ್ಪಾಳೆಯ ಸುರಿಮಳೆಯಾಯಿತು, ದೀರ್ಘಕಾಲ. ನಾಯಕಿ ಕಕ್ಕಾವಿಕ್ಕಿಯಾದಳು. ಇದೇನು ತೆಗಳಿಕೆಯದೋ ಎಂದೆಸ್ನಿಸಿತು. ಇಲ್ಲ, ಮೆಚ್ಚಿಗೆಯದೇ. ಅವಳಿಗೆ ಸಂದೇಹ ಉಳಿಯಲಿಲ್ಲ. ಕ್ಷಣದ ಹಿಂದೆ ರಾಜಬಹದ್ದೂರ್ ಮಾಡಿದ್ದ ಅಪಮಾನ, ಆಡಿದ್ದ ಕೆಟ್ಟ ಮಾತು, ಅವನನ್ನು ಕಳೆದುಕೊಂಡಿದ್ದ ಭಯ-ಎಲ್ಲವೂ ಮಾಯವಾದುವು. ದೃಶ್ಯ ಅತ್ಯಂತ ಯಶಸ್ವಿಯಾಗಿ, ಇನ್ನೂ ಹೆಚ್ಚಿನ ಮೆಚ್ಚಿಗೆ, ಹೇರಳವಾಗಿ ದೊರಕಿತು. ನಾಯಕಿಯ ಎದೆ ಉಬ್ಬಿತು. ಸಂತೋಷದ ಹನಿ ಹರಿಯಿತು. ಸೇಠರ ಮನಸ್ಸು ಕುಣಿದಾಡಿತು. ನಟ

ವರ್ಗಕ್ಕೆ ಆಶ್ಚರ್ಯ. ಇವಳ ಶಕ್ತಿಗೇನು ಅವರು ಕುರುಡಾಗಿರಲಿಲ್ಲ, ಆದರೂ ಈ ಸ್ವಾಗತ–ಈ ಕತೆ ಹರಡಿದ ಮೇಲೆ–ಅವರ ಎಣಿಕೆಯನ್ನು ಮೂರು ಮೂರುದ್ದದಷ್ಟು ಮೀರಿತ್ತು. ಹಲವರಿಗೆ ಸಂತೋಷ, ಕೆಲವರಿಗೆ ಅಸೂಯೆ. 'ಇವಳ ಗತಿಯಾಯಿತು, ತಾನೂ ಬಹದ್ದೂರ ಇವರೇ ಗತಿ ಕಂಪನಿಗೆ; ಅವನೂ ತನ್ನವನಾದ' ಎಂದುಕೊಂಡಿದ್ದ ಲೀಲ ಮುಸುಗುಟ್ಟುತ್ತ ಹೊಟ್ಟೆ ಕಿವಿಚಿಕೊಂಡಳು.

ನಾಯಕಿ ತೆರೆಯೊಳಕ್ಕೆ ಬಂದೊಡನೆ ಪ್ರೆಸ್ಸಿನವರು ಸುತ್ತುಗಟ್ಟಿದರು. ಅವರಿಗೆಲ್ಲ ಬೇಕಾಗಿದ್ದುದು ಶಂಖದಿಂದ ತೀರ್ಥ. ಆದರೆ ಅದು ಬೀಳಲೇ ಇಲ್ಲ ನಾಯಕಿ ಆ ಪ್ರಶ್ನೆಗಳಿಗೆ ಒಂದೇ ಉತ್ತರವಾಗಿ "ನನ್ನ ನಾಟಕ ಸಾರ್ವಜನಿಕ. ಬಾಕಿಯುದೆಲ್ಲ ಸ್ವಂತ ಜೀವನ. ಜನಕ್ಕಲ್ಲ. ದಯವಿಟ್ಟು ಕ್ಷಮಿಸಿ," ಎಂದು ಹೇಳಿದಳು. ಅವರು ಅಷ್ಟಕ್ಕೆ ಬಿಡುತ್ತಾರೆಯೆ?

"ಸಾರ್ವಜನಿಕ ವ್ಯಕ್ತಿಯಾದ ಮೇಲೆ ಎಲ್ಲ ವಿಷಯದಲ್ಲೂ ಜನಕ್ಕೆ ಆಸಕ್ತಿ ಕುತೂಹಲ ಇದ್ದೇ ಇರುತ್ತವೆ." ಒಬ್ಬ ವಾದಿಸಿದ.

"ಆದರೇನು ಅದು ತಪ್ಪಾಗಬಾರದೆ? ಅದೆಲ್ಲ ಅಭ್ಯಾಸ ಬಂದ ಹಾಗೆ ಬದಲಾಯಿಸುತ್ತೆ."

"ಇಷ್ಟು ಖಂಡಿತವಾದರೆ ಹೇಗೆ?" ಇನ್ನೊಬ್ಬ.

"ಇದಕ್ಕೇ ಸರಿಹೋಗಿಸಿಕೊಳ್ಳಬೇಕಾಗುತ್ತೆ; ನಿಮ್ಮ ದುರದೃಷ್ಟ!" ನಾಯಕಿ ನಗುತ್ತ ಹೊರಟೇ ಹೋದಳು.

"ಏನೋ ಹೆಂಗಸು, ಒಂದು ಪ್ರಶ್ನೆ ಕೇಳಿದರೆ ಹತ್ತು ಉತ್ತರ ಹೇಳ್ತಾಳೆ ಅಂತ ಇದ್ದರೆ, ಎಷ್ಟು ಗಟ್ಟಿಯಪ್ಪ!" ಒಬ್ಬ ಆಶ್ಚರ್ಯಪಟ್ಟ.

"ಅದಕ್ಕೇ ಬಿತ್ತು ಬಹದ್ದೂರಸಿಗೆ ಏಟು!" ಇನ್ನೊಬ್ಬ ನಕ್ಕ. ಎಲ್ಲರೂ ಸೇರಿಕೊಂಡರು-

"ಅಂತೂ ನಮ್ಮ ಮುಂದಾಳುಗಳ ಹಾಗಲ್ಲಪ್ಪ, ಒಂದು ಪ್ರಶ್ನೆ ಕೇಳಿದರೆ ಒಂದು ಸ್ಪೀಚನ್ನೇ ಕೊಡ್ತಾರಲ್ಲ. ಕಷ್ಟದ ಸಮಸ್ಯೆ–ಇವಳು."

"ಅದೂ ಒಂದು ವಿಷಯುವಲ್ಲವೆ–ಬರೆಯೋದಕ್ಕೆ. ನಮಗೇನು ಏನು ಸಿಕ್ಕಿದರೂ ಸಾಕು."

"ಹೂಂ, ಗುಪ್ತಗಾಮಿನಿ ಗ್ರೇಟಾ ಗಾರ್ಬೋ ಹಾಗೆ."

"ಅದೆಲ್ಲ ಇರಲಿ, ಈಗ ಸಿಕ್ಕಿರೋ ರಸವತ್ತಾದ ಕತೆಯೇ ಸಾಲದೆ, ಎಷ್ಟೋ ದಿನ ಎಷ್ಟೋ ಕಾಲಂ ತುಂಬೋದಕ್ಕೆ? ನಡೀರಿ."

ಹೌದು, ಅವರ ನೋಟು ಪುಸ್ತಕಗಳೆಲ್ಲ ಇದ್ದ, ಇಲ್ಲದ ವಿವರಗಳಿಂದ ಬಹಳ ಮಟ್ಟಿಗೆ ಭರ್ತಿಯಾಗಿದ್ದುವು. ಅವರೆಲ್ಲ ಈ ಮುತ್ತಿಗೆ ತೆಗೆಯಲು ಮನಸ್ಸುಮಾಡಿ ಹೊರಟುಹೋದರು-ಎರಡನೆಯ ಕೈಯವರನ್ನು ಹುಡುಕಿಕೊಂಡು.

ನಡುರಾತ್ರಿಯಲ್ಲಿ ಎಚ್ಚರವಾದಾಗಲೂ ನಾಯಕಿಯ ಮುಂದೆ ಅಂದಿನ ಯೋಚನೆಗಳು ಮತ್ತೆ ಹಾಡಿದುವು. ಈ ವಿವಿಧ ಗಾನದ ಮುಮ್ಮೇಳವೆಲ್ಲ ತೃಪ್ತಿಯೇ, ಸಂತೋಷವೇ. ಹಿಮ್ಮೇಳದಲ್ಲಿ ಇನ್ನೂ ಸ್ವಲ್ಪ ಆತಂಕದ ಅಪಸ್ವರ, ಮುಂದೆ ಹೇಗೋ ಎಂದು. ಅದಕ್ಕಿಂತ ಹೆಚ್ಚಾಗಿ ಬಹದ್ದೂರನ ಕೆಟ್ಟ ಮಾತಿನ ಕರ್ಕಶ ಸ್ವರ. ಇದು ಒಟ್ಟು ಮೇಳವನ್ನೇ ಕೆಡಿಸಿತ್ತು. ಅವನ ಹೇಸಿಕೆಯ ನಡತೆ ಹಳೆಯ ಮುಳ್ಳುಗಳನ್ನು ಕಿತ್ತು, ಹೀನಾಯದ ಜೀಲಿಯನ್ನು ಸುಟ್ಟು, ಹೆದ್ದಾರಿಗೇ ತಂದುಬಿಟ್ಟಿತ್ತು. ತನ್ನಲ್ಲಿ ಬೆಲೆಯಿದ್ದರೆ ಮುಂದೆ ನಾಗಾಲೋಟ. ಅದು ಸರಿ. ಆದರೆ ಅವನ ಕೊಂಕು ನುಡಿ ಹಣ್ಣನ್ನು ಹುಳು ಕೊರೆದಂತೆ, ಬಡಗಿಯ ಬೈರಿಗೆಯು ಮರವನ್ನು ಕೊರೆದಂತೆ, ಕೆಟ್ಟ ಆಹಾರ ಹೊಟ್ಟೆಯನ್ನು ನುಲಿದಂತೆ, ಸಂಕಟಪಡಿಸುತ್ತಿತ್ತು. ಅವನೇಕೆ ಹಾಗೆ ಹೇಳಿದ? ಬರಿಯ ದ್ವೇಷವೆ? ಸೇಠರು ತನಗೆ ತೋರಿಸಿದ ಆದರಕ್ಕಾಗಿ ಅಸೂಯೆಯೆ? ಅಷ್ಟೆ. ಇನ್ನು ಯಾವುದಕ್ಕೆ ತಾನೆ ಅವಕಾಶ ಕೊಟ್ಟಿದ್ದಳು? ನಿಜ, ಅವರ ಮನೆಯೊಂದರಲ್ಲಿದ್ದಳು. ಆದರೆ ಖರ್ಚೆಲ್ಲ ತನ್ನದೇ. ಬಾಡಿಗೆಯನ್ನು ಕೊಡುತ್ತಿರಲಿಲ್ಲವೆ? ಏನು ದಾಕ್ಷಿಣ್ಯ, ಏನು ಉಪಕಾರ? ಹುಂ, ಸೇಠರು ಬಹಳವಾಗಿ ತನ್ನಲ್ಲಿಗೆ ಬರುತ್ತಿದ್ದರು, ಹೌದು, ಅದೆಲ್ಲ ಕೇವಲ ಸ್ನೇಹ. ಉಹುಂ, ಅವರೇನೋ ಸ್ನೇಹವನ್ನು ಮೀರಿದ ಸೂಚನೆಯನ್ನೇ ಆಗಾಗ ಕೊಡುತ್ತಿದ್ದಂತಿತ್ತು. ಹೂಂ. ಬಹಳ ಬೆಲೆಯ ಉಡುಗೊರೆಗಳನ್ನು ಕೊಟ್ಟಿದ್ದರು-ಏನಂದುಕೊಂಡೋ, ತಿಳಿದುಕೊಂಡೋ. ತಾನು ಆಗ ಈಗ ಬೇಡವೆಂದಿದ್ದರೂ, ಬೇಕಾದಷ್ಟನ್ನು ತೆಗೆದುಕೊಂಡೂ ಇದ್ದಳು. ಆದರೆ ತಾನು ಬೇರೆಯ ತರಹ ಸ್ವಲ್ಪವೂ ಉತ್ತೇಜನ ಕೊಟ್ಟಿರಲಿಲ್ಲವಲ್ಲ. ಅವರ ಸ್ವಭಾವ, ನಡತೆ, ಮಾತುಗಳು ಈ

ಸಿಂದೆಗೆ ಅವಕಾಶ ಕೊಟ್ಟಿರಬಹುದೆ? ಇದು ತನಗೆ ಹೊಳೆದಿರಲಿಲ್ಲ. ಸಂಬಳ ಏರಿದಾಗ ಬಹದ್ದೂರ ಏನನ್ನೋ ಗಳುಹಿದ್ದ. ಆದರೆ ತಾನೇನು ಅರ್ಹತೆ ಪಡೆದಿರಲಿಲ್ಲವೆ? ಛಿ, ಛಿ. ಬೇಕಾದವರಿಗೆ ಎಲ್ಲೆಲ್ಲೂ ಕಾಣುತ್ತೆ ತಪ್ಪು. ಮುಖ್ಯವಾಗಿ ತನಗೆ ಮನೆಯಿಲ್ಲದಿರುವುದೇ ಈ ಹಲ್ಕ ಮಾತಿಗೆಲ್ಲ ಕಾರಣ. ತಾನು ಗರತಿಯ ಜೀವನದಲ್ಲಿದ್ದರೆ ಹೀಗೆಲ್ಲ ಅಪವಾದದ ಸೂಚನೆಯಾದರೂ ಬರುವುದಕ್ಕೆ ಅವಕಾಶವಿರುತ್ತಿತ್ತೆ? ಹುಂ, ಎಷ್ಟು ಬಿಗಿಯಾಗಿರುತ್ತಿತ್ತು! ಸಂಸಾರಗೆಟ್ಟವಳೆಂದೇ ತನ್ನ ಮೇಲೆ ಅನುಮಾನ, ತನ್ನ ಹೆಸರು ಅವರಿವರ ಬಾಯಲ್ಲಿ. ಅಯ್ಯೋ, ಹಾಗೇಕೆ ಹಟಹಿಡಿದರು—ಅವರು! ತನಗೀಗ ಮನೆ ಯಿಲ್ಲ; ರಕ್ಷಿಸುವುದಕ್ಕೆ, ಪ್ರೀತಿಸುವುದಕ್ಕೆ ಗಂಡಿಲ್ಲ; ಮುದ್ದಿಸುವುದಕ್ಕೆ ಮಗುವಿಲ್ಲ. ಚಂದು! ಚಂದು! ಎಲ್ಲಿ ಚಂದು? ಎಲ್ಲಿ ಅವರು? ನೋಡುವು ದಕ್ಕೂ ಸಿಕ್ಕದ ಹಾಗೆ ಹೋಗಿಬಿಟ್ಟರಲ್ಲ! ತನಗೆ ಏನಿದ್ದೇನು—ಅವರಿಲ್ಲದೆ? ....ಪತ್ರಿಕೆಗೆ ಹಾಕಿಸಿಬಿಡುವುದೆ- ಈ ನಾಟಕ ಜೀವನವನ್ನು ಸುಟ್ಟು? ........ ಅ? ........ಏನು ನಾಟಕ ಬಿಡುವುದೆ? ಜೀವನದ ಹುಚ್ಚನ್ನು ಬಿಡಬಲ್ಲಳೆ? ಅದೂ ಇಷ್ಟೊಂದು ಮುಂದುವರಿದು, ಇಷ್ಟೆಲ್ಲ ಸಹಿಸಿಕೊಂಡು? ಈಗ ಎಣ್ಣೆ ಬರುವ ಕಾಲದಲ್ಲಿ ಕಣ್ಣು ಮುಚ್ಚಿಕೊಂಡಂತೆ. ಊರು ಕಾಣುತ್ತಿರು ವಾಗ ಕಾಡಿಗೆ ಓಂದಿರುಗಿದಂತೆ. ಉಹುಂ, ಉಹುಂ, ತಾನೇನು ತಪ್ಪು ಮಾಡಿಲ್ಲ. ಅದೊಂದೇ ಸಾಕು ತೃಪ್ತಿ. ಇದರಲ್ಲೇ ಸಾಯುವುದು. ಅಪ ಮಾನವಾಗಲಿ, ಕಷ್ಟಗಳು ಬರಲಿ, ಆ ಎದೆಯ ನೋವೂ ಹಿಂಡಲಿ........ ಆಹಾ! ಈಗ ಅವರೊಡನೆ, ಮಗುವಿನ ಜತೆಯಲ್ಲಿ, ಇಲ್ಲಿದ್ದರೆ! ಕನಸು, ಕನಸು!

ಬೆಳಿಗ್ಗೆ ಪತ್ರಿಕೆಗಳು ಬಂದುವು. ಅವಳ ಕತೆಯ ಪ್ರವಾಹವನ್ನೇ ತಂದುವು. ಅವಳ ಹೆಸರೂ ಬಹದ್ದೂರನದೂ ದಪ್ಪದಪ್ಪ ಅಕ್ಷರಗಳಲ್ಲಿ. ಅಗೋ ಅಲ್ಲಿ 'ನಟ ಸಾಮ್ರಾಟ ರಾಜಬಹದ್ದೂರನಿಗೆ ಕೆನ್ನೆ ಏಟು! ಏಳು ತಾರೆ ಮಾಲಾಳಿಂದ!' ಇಲ್ಲಿ ಈ ಪತ್ರಿಕೆಯಲ್ಲಿ 'ಅಪೆರಾ ಹೌಸ್‌ನಲ್ಲಿ ಕೋಲಾಹಲ! ಶ್ರೇಷ್ಠ ನಟಿ ಮಾಲಾ ಕೆನ್ನೆಗೆ ಕೊಟ್ಟಳು! ನಟ ರಾಜಬಹ ದ್ದೂರನ ಭಂಗ!' ಓಹೋ, ಬೇರೆಯದರಲ್ಲಿ! 'ರಾಜಬಹದ್ದೂರನ ಅವಿ ವೇಕ! ಮಾಲಾಳು ಶಿಕ್ಷಿಸಿದಳು!' ಇನ್ನೊಂದನ್ನು ನೋಡೋಣ 'ಗುಪ್ತ

ಗಾಮಿಸಿ ಅಭಿನೇತ್ರಿ ಮಾಲಾ ಹೊರಗೆ ಬಂದಳು ! ಬಹದ್ದೂರನಿಗೆ ಬಿತ್ತು ಏಟು.' ಇದೋ ? 'ರಾಜಬಹದ್ದೂರ ಫಾರಸೀ ಕಂಪನಿಯನ್ನು ಬಿಟ್ಟ! ನಟ ಶಿರೋಮಣಿ ಮಾಲಾ ಹೊಡೆದೋಡಿಸಿದಳು !' ಇದೂ 'ಬಾಂಬೆಯ ಕೀರ್ತಿ ಮೂರ್ತಿ ಬಹದ್ದೂರನಿಗೆ ಒತ್ತು! ಹೊರಗಿನ ಹೊಸ ನಟಿ ಮಾಲಾ ಳಿಂದ !' ಹೀಗೇ ಗಪ್ಪನೆ ಹಿಡಿದುಕೊಳ್ಳುವ ಮೇಲು ಬರಹಗಳು–ಎಷ್ಟೋ. ಪ್ರತಿಯೊಂದು ಮೇಲು ಬರಹದ ಕೆಳಗೂ ಬಹದ್ದೂರನ ಮತ್ತು ಅವಳ ಚಿತ್ರ ಗಳು, ಹುಳಿ ಉಪ್ಪು ಕಾರ ಹಚ್ಚಿದ ದೀರ್ಘವಾದ ಕತೆ; ಇಬ್ಬರದ್ದೂ ಜೀವನ ಪರಿಚಯ ; ಅಭಿನಯ ಪ್ರತಿಭೆಗಳ ಹೋಲಿಕೆ, ವಿಮರ್ಶೆ ; ಭವಿಷ್ಯ ಗಳ ಚರ್ಚೆ. ಮುಂದೆಯೂ ದೇಶಾದ್ಯಂತ ದಿನ, ವಾರ, ಮಾಸ ಪತ್ರಿಕೆಗಳ ಲ್ಲೆಲ್ಲ ಈ ಸ್ವಾರಸ್ಯದ ಕತೆ ಪ್ರಕಟವಾಯಿತು. ನೂರು ನಾಟಕ, ಹತ್ತು ಸಿನಿಮಾಗಳು ಕೊಡಲಾಗದಿದ್ದ ಪ್ರಕಟನೆಯನ್ನು ನಾಯಕಿ ಈ ಘಟನೆ ಯೊಂದರಿಂದಲೇ ಪಡೆದಳು. ಅಪೆರಾ ಹೌಸ್‌ನಲ್ಲಿ ಗಂಟೆಗಳೊಳಗಾಗಿ ಸ್ಥಳಗಳು ಕಾದಿರಿಸಲ್ಪಡುತ್ತಿದ್ದುವು, ಕ್ಯೂ ಉದ್ದ ಹೆಚ್ಚುತ್ತಿತ್ತು. ಒಳಗೆ ಹೋಗಲಾಗದವರೂ ದಾರಿಯ ಅಕ್ಕಪಕ್ಕಗಳಲ್ಲಿ ಗುಂಪಾಗಿ ನಿಂತು, ಟ್ರಾಫಿಕ್‌ಗೆ ಅಡ್ಡಿ ತಂದು, ಬಹದ್ದೂರನನ್ನು ಹೊಡೆದ ಹೆಣ್ಣಿನ ಕೇವಲ ಮುಖದರ್ಶನಕ್ಕಾಗಿ ಕಾದಿರುತ್ತಿದ್ದರು. ಕಾರಿನಲ್ಲಿ ಕಂಡ ಮುಖವನ್ನು ತಿಳಿದವರು ಇತರರಿಗೆ 'ಅವಳೇ ! ಅವಳೇ ! ನಗುತ್ತಿದಾಳಲ್ಲ ಹುಡುಗಿ ಅವಳೇ !' ಎಂದು ಕೈಬೀಸಿ ತೋರಿಸುತ್ತಿದ್ದರು. 'ಊಹೂಂ, ಇವಳೇಯೆ ! ನೋಡೋದಕ್ಕೆ ಗೊಂಬೆ ಇದ್ದ ಹಾಗಿದಾಳೆ. ಎಷ್ಟು ಧೈರ್ಯ!' ಎಂಬ ಉದ್ಗಾರಗಳು ಕೇಳಿಸುತ್ತಿದ್ದುವು. 'ಚೆನ್ನಾಗಿ ಮಾಡಿ ದಳು. ಹಾಗೇ ಆಗಬೇಕಾಗಿತ್ತು ಅಂಥೋನಿಗೆ !' ಎಂದು ಮುಂತಾದ ಮೆಚ್ಚಿಗೆ. ಎಲ್ಲೆಲ್ಲೂ ಸಿನಿಮಾ ಫ್ಯಾನ್‌ಗಳೂ ಕೂಡ 'ಮಾಲಾ' ಹೆಸರು ಕಂಡೀತೆ ಎಂದು ಸ್ವಾಗತಿಸಲು ಸಿದ್ಧವಾಗಿದ್ದರು. ವ್ಯವಹಾರ ನಿಪುಣರಾದ ಸೇಠರು ಈ ಅವಕಾಶವನ್ನು ಕಳೆದುಕೊಂಡಾರೇ ? ಕಬ್ಬಿಣ ಕಾದಿದ್ದಾಗ ಬಡಿಯುವಂತೆ ಬೇಗ ಬೇಗನೆ ಎರಡು ಮೂರು ಚಿತ್ರಗಳನ್ನು ತಯಾರಿಸಿ ದರು. ನಾಟಕದ ಅಭಿಮಾನಿಗಳನ್ನು ಗೆದ್ದಿದ್ದಂತೆ ನಾಯಕಿ ಸಿನಿಮಾ ಅಭಿಮಾನಿಗಳನ್ನೂ ಮೊದಲನೆಯ ಚಿತ್ರದಿಂದಲೇ ಮರುಳುಗೊಳಿಸಿ ವಶ

ಪಡಿಸಿಕೊಂಡಳು. ಕೋಟ್ಯಾನುಕೋಟಿ ಎದೆಗಳನ್ನಾಳಿದಳು. 'ಮಾಲಾ' ಹೆಸರು ಮನೆಯ ಮಾತಾಯಿತು. ಒಮ್ಮೆಯೇ ಸಿಡಿದು ಬೆಳಗುವ ಉಲ್ಕಾಪಾತದಂತಾಯಿತು, ಆವಳ ಹೆಸರು. ಬಿರುಗಾಳಿ ಬೀಸಿದಂತೆ ಹರಡಿಕೊಂಡಿತು–ಕೀರ್ತಿ. ಬೊಂಬಾಯಿಯನ್ನು ಜಯಿಸುವುದು ಅವಳ ಹಿರಿಯಾಸೆಯಾಗಿದ್ದರೂ ಭಾರತವನ್ನೇ ಜಯಿಸಿ ಪೂರ್ತಿಮಾಡಿದ್ದಳು. ಕೆಲವು ವರ್ಷಗಳಲ್ಲೇ ಅವಳು ಅಭಿನಯಿಸಿದ್ದ ಹಲವಾರು ಚಿತ್ರಗಳು ದೊಡ್ಡ ಸಣ್ಣ ಊರುಗಳಲ್ಲೆಲ್ಲ ವಾರಗಟ್ಟಲೆ ಕಿಕ್ಕಿರಿದ ಮಂದಿರಗಳಲ್ಲಿ ನಡೆಯುತ್ತಿದ್ದುವು. ಮಾಲಾಳ ಕಲಾ ಪ್ರಶಂಸೆ ಮೇಲು ಸಮಾಜಗಳಲ್ಲಿ ಟಾಜ್ ಮಹಲ್, ಟಾಗೋರರ ಕಾವ್ಯ–ಇವುಗಳ ಪ್ರಶಂಸೆಯಂತೆ ಕಲಾಭಿರುಚಿಯ ಹೆಗ್ಗುರುತಾಯಿತು.

ಹುಟ್ಟಿದ ಹೆಣ್ಣುಗಳಿಗೆ 'ಮಾಲಾ' ಹೆಸರಿಡುವುದು ಒಂದು ಫ್ಯಾಷನ್ ಆಯಿತು. ಹುಟ್ಟಿಬಿಟ್ಟಿದ್ದ ರತ್ನ, ಜಯ, ಜಯಂತಿ, ಕುಸುಮ....ಇವರೂ ಕ್ರಮವಾಗಿ ರತ್ನಮಾಲಾ, ಜಯಮಾಲಾ, ಜಯಂತಿಮಾಲಾ, ಕುಸುಮಮಾಲಾಗಳೇ ಆಗುತ್ತ ಬಂದರು. ಶಾಲಾ ಕಾಲೇಜುಗಳಲ್ಲಿ ಮಾಲಾಗಳು ನಾಯಿ ಕೊಡೆಯಂತೆಯೇ ಹೆಚ್ಚಿಕೊಂಡುವು. ಮುಂದೆ 'ಗಾಂಧಿ' ರಸ್ತೆ 'ಗಾಂಧಿ' ಚೌಕ, 'ಗಾಂಧಿ' ನಗರಗಳು ಎಲ್ಲೆಲ್ಲೂ ಆಗಿ ಅಂಚೆಯವರಿಗೆ ಕಕ್ಕಾಬಿಕ್ಕಾದಂತೆ ಮಾಲಾ ಹೆಸರು ಹುಡುಗಿಯರ ವ್ಯಕ್ತಿತ್ವವನ್ನೇ ಅಳಿಸಿಬಿಡುವುದಾಗಿ ಹೆದರಿಸಿತು. ಗಂಡಂದಿರೂ ಹೆಂಡಂದಿರ ಹೆಸರನ್ನು ತಿರಿಚಿ ಮಾಲೆ ಮಾಡಲು ಹಿಂಜರಿಯಲಿಲ್ಲ. ಬಡ ಬ್ರಹ್ಮಚಾರಿಗಳು ಮನಸ್ಸಿನಲ್ಲೇ 'ಮಾಲಾ' ಜಪವನ್ನು ಮಾಡುತ್ತಿದ್ದರು. 'ಮಾಲಾ' ಶಿರೋನಾಮೆಯ ಕವನಗಳೂ, ನಾಟಕಗಳೂ, ಕಾದಂಬರಿಗಳೂ ಹೊರಗೆ ಬಂದುವು. ಒಬ್ಬ ಸಸ್ಯ ವಿಜ್ಞಾನಿ ತನ್ನ ಹೊಸ ಸಸ್ಯಕ್ಕೆ ಇದೇ ಹೆಸರಿಟ್ಟ. 'ಮಾಲಾ' ಚೌಕ 'ಮಾಲಾ' ರಸ್ತೆಗಳಿಗೂ ಕೆಲವು ಮುನಿಸಿಪಾಲಿಟಿಗಳು ಧೈರ್ಯ ಮಾಡಿದ್ದರೂ ಮಡಿವಂತ ಸರಕಾರದವರು ಒಪ್ಪಲಿಲ್ಲವೆಂಬ ಸಮಾಚಾರ ಹೊರಟಿತ್ತು. 'ಮಾಲಾ ಭವನ' 'ಮಾಲಾ ಮಂದಿರ' ಕಾಫಿ ಟೀ ಹೋಟಲುಗಳೇನು ಹಿಂದೆ ಬೀಳಲಿಲ್ಲ. ಜಟಕಾ ಕುದುರೆಗಳೂ, ಹಸು, ಎಮ್ಮೆ, ಮನೆಮನೆಯ ನಾಯಿ, ಬೆಕ್ಕುಗಳಲ್ಲೂ ಎಷ್ಟೋ 'ಮಾಲಾ'ಗಳೇ. ಒಂದೊಂದೆ ಹೇಳುವು

ದಕ್ಕೆ–ಇಂತಹ ದೊಡ್ಡ ದೇಶದಲ್ಲಿ? ಅವೇ ಒಂದು ಮಾಲಾ; ಹನುಮಂತನ ಬಾಲವೆಂದರೂ ಸರಿಯೆ. ಇದಿಷ್ಟು ತಿಳಿಸಿದರೇ ಸಾಕು–ಮಹ ಮಹೋಪಾಧ್ಯಾಯ ಪಂಡಿತ ವೇ. ಬ್ರಂ. ಶ್ರೀ ಮಧ್ವಾಚಾರ್ಯರು "ಅಯ್ಯೋ, ಎಂಥ ಕಲಿಗಾಲ ಬಂದಿತು. 'ಮಾಲಾ ಮಯ ಜಗತ್' ಆಗಿಹೋಯಿತಲ್ಲ," ಎಂದು ತಲೆತಲೆ ಚಚ್ಚಿಕೊಂಡರು–ಮಾಲಾಳ ಚಿತ್ರವೊಂದನ್ನು ಮತ್ತೆಮತ್ತೆ ದಿಟ್ಟಿಸುತ್ತ.

ಹೆಸರೊಂದೇ ಅಲ್ಲ, ಕ್ರಾಂತಿಯನ್ನುಂಟುಮಾಡಿದುದು. ಬಹದ್ದೂರನ ಅನುಕರಣೆಯನ್ನು ಮೀರಿಸಿ ಮಾಲಾಳ ಅನುಕರಣೆ. ಇದಕ್ಕೆ ಅವಳ ಪ್ರಖ್ಯಾತಿಯು ಗಾತ್ರವೂ, ಹೆಂಗಸಿನ ಅನುಕರಣ ವೈಶಿಷ್ಟ್ಯವೂ ಕಾರಣಗಳು. ಡ್ರಿಲ್ ಮಾಡಿಸಿದ ಹಾಗೆ. ಒಂದು ಚಿತ್ರದಲ್ಲಿ ಅವಳ ಜಡೆ ಎಡಭುಜದಿಂದಿಳಿದರೆ ಹೆಣ್ಣುಮಕ್ಕಳದೂ ಎಡದಿಂದಲೇ ಇಳಿಯುತ್ತಿದ್ದುವು: ಇನ್ನೊಂದರಲ್ಲಿ ಬಲದಿಂದ ಆದರೆ ಇವರದೂ ಬಲದಿಂದಲೇ. ಅವಳ ಬೈತಲೆ ಮಧ್ಯದಲ್ಲಿದ್ದರೆ ಮಧ್ಯ, ವಾರೆಯಾಗಿದ್ದರೆ ವಾರೆ. ಅವರ ಸೀರೆ ರವಿಕೆಯ ಹೊಂದು ಬಣ್ಣ ಅವಳು ಹಾಕಿದ ಮಾದರಿಗಳಿಂದಲೇ. ಬೆಂಡೋಲೆ ಬಳೆ, ಹಾರ ಉಂಗುರ, ಕುಂಕುಮ ಸೆರಗಿನ ಹೊದಿಕೆ, ಮುಡಿಯ ಹೂ, ಅಡಿಯ ಚಪ್ಪಲಿ....ಎಲ್ಲ ಎಲ್ಲವೂ ಅವಳ ಚಿತ್ರಗಳು ಬದಲಾಯಿಸಿದಂತೆ ಹುಡುಗಿಯರಲ್ಲೂ ಬದಲಾವಣೆ. ಅವಳಿಗೆ ಸ್ವಭಾವ ಚೇಷ್ಟೆಗಳಿಲ್ಲದಿದ್ದರೂ ಆ ಚಿತ್ರ ಈ ಚಿತ್ರದಲ್ಲಿ ಮೋಹಿಸಿದ ನಿಲುವು, ನಡೆ, ನಗು, ನೋಟ, ಬಳುಕು, ಥಳುಕು, ಬಿಂಕ, ಕೊಂಕು, ಎಲ್ಲವೂ ಅವಳ ಹೆಸರಿನಿಂದಲೇ ಸ್ತ್ರೀ ಲೋಕದಲ್ಲಿ ಚಲಾವಣೆಯ ನಾಣ್ಯಗಳಾಗಿದ್ದುವು; ಬಿಸಿಬಿಸಿಯ ಚರ್ಚೆಗೂ ಆಸ್ಪದ ಕೊಡುತ್ತಿದ್ದುವು. ಕಾಲೇಜಿನ ಗಂಡು ಪಿಳ್ಳೆಗಳು ಹೆಣ್ಣು ಪಿಳ್ಳೆಗಳ ಕಡೆಗೆ ಕಣ್ಣು ಹಾಕಿ ತಮ್ಮತಮ್ಮಲ್ಲೇ "ಮಾಲಾ ಮುರುಕು ಕಣೋ–ಎಷ್ಟು ವ್ಯತ್ಯಾಸ! ಏನು ಅಭಾಸ!" ಎಂದು ನಗುತ್ತಿದ್ದರು. ಅವಳ ಹಾಡುಗಳು ಸಿನಿಮಾದಿಂದ ಹೊರಬಿದ್ದರೆ ಸಾಕು, ಮಾರನೆಯ ಗಳಿಗೆಯೇ ಸಾರ್ವಜನಿಕ ಆಸ್ತಿ. ರೇಡಿಯೋದಲ್ಲಿ, ಹೋಟಲುಗಳಲ್ಲಿ, ವಧೂ ಪರೀಕ್ಷೆಗಳಲ್ಲಿ, ಮದುವೆ ಮನೆಗಳಲ್ಲಿ, ಹಾಸ್ಟಲುಗಳಲ್ಲಿ, ಅಡಿಗೆ ಮನೆ ಬಚ್ಚಲು ಮನೆಗಳಲ್ಲಿ, ಟಾಂಗಾಗಳಲ್ಲಿ, ಎತ್ತಿನ ಬಂಡಿಗಳಲ್ಲಿ, ವಿಹಾರದಲ್ಲಿ, ವಿನೋದಾವಳಿಗಳಲ್ಲಿ, ಮೂಗಿನ

ಕೂಗಿನಲ್ಲಿ, ಸಿಳ್ಳಿನ ಸ್ವರದಲ್ಲಿ, ರಾಗ ರಾಗಗಳಲ್ಲಿ, ಭಾಗ ಭಾಗಗಳಲ್ಲಿ, ಅಭ್ಯಾಸ ಅಭಾಸಗಳಲ್ಲಿ. ಪತ್ರಿಕೆಗಳಲ್ಲಿ ಅವಳ ಬಗ್ಗೆ ಇದ್ದ ಬಿಸಿ ಸುದ್ದಿ, ಓದಿದ ಬಾಯಿನಿಂದ ಓದಿದ ಬಾಯಿಗೇ ಹಬ್ಬುತ್ತಿತ್ತು, ಕ್ಷಣಕಾಲದಲ್ಲೋ ಎನ್ನುವಂತೆ ಊರನ್ನೆಲ್ಲ ಸಾರಿ ಬರುತ್ತಿತ್ತು. ಅವಳು ಗುಪ್ತಗಾಮಿನಿ ಯಾಗಿಯೇ ಇರುತ್ತಿದ್ದು ಜನರನ್ನು ಗಯ್ಯಾಳಿಗಳಿಗಿಂತ ಹೆಚ್ಚಾಗಿ ಕೆಣಕು ತ್ತಿದ್ದಳು. ಅಪ್ಪಿ ತಪ್ಪಿ ಅವಳಾಡಿದುದೂ ಸುದ್ದಿ, ಆಡದಿದ್ದುದೂ ಸುದ್ದಿಯೇ.

ಅವಳು ಸುಳಿದಾಡಿದಲ್ಲಿ ಸುತ್ತ ಆಟೋಗ್ರಾಫ್ ಕಾಟದವರು, ಫೋಟೋಗ್ರಾಫರು, ಪ್ರೆಸ್ಸಿನವರು. ಸುದ್ದಿಗಾರರಿಂದ ತಾನೆಷ್ಟು ತಪ್ಪಿಸಿ ಕೊಂಡರೂ ಅವರು ನೊಣಗಳಂತೆ ಮುತ್ತುವುದು ಮಾತ್ರ ತಪ್ಪುತ್ತಿರಲಿಲ್ಲ: ಕಡೆಗೆ ಸ್ನೇಹಿತರಿಂದಲೋ, ಮನೆವಾರ್ತೆಯ ಗುಮಾಸ್ತರು, ಡ್ರೈವರು, ಅಡಿಗೆಯವರು, ಆಳುಗಳು–ಇವರಲ್ಲಿ ಯಾರಿಂದಲೋ, ತಮ್ಮ ಆಹಾರವನ್ನು ಸಂಪಾದಿಸಿಕೊಳ್ಳುತ್ತಿದ್ದರು. ಎಷ್ಟೋ ಜನರು ಕಾಶ್ಮೀರ, ತಿರುವನಂತಪುರ, ಷಿಲಾಂಗು, ಕರಾಚಿಗಳಿಂದಲೂ ಅವಳ ಚಿತ್ರಕ್ಕಾಗಿ ಬೇಡಿ ಬರೆಯುತ್ತಿದ್ದರು. ಅಭಿನಯದ ಮೆಚ್ಚಿಗೆಯಿಂದ ಅಭೇದ್ಯ ರಹಸ್ಯ ಪ್ರಶ್ನೆಗಳವರೆಗೂ ಬರೆದ ಕಾಗದದ ಮಳೆಯೇ ಸುರಿಯಲಾರಂಭಿಸಿದ ಮೇಲೆ ಅವಳು ಸೌಜನ್ಯ ಕ್ಕಾದರೂ ಉತ್ತರದ ಸಾಲವನ್ನು ತೀರಿಸಲು ಸೆಕ್ರೆಟೇರಿಯಟ್ಟನ್ನೇ ಸ್ಥಾಪಿಸ ಬೇಕಾಯಿತು. ಈ ಮಹನೀಯರಲ್ಲಿ ಐದು ರೂಪಾಯಿ ಸಾಲ ಕೇಳುವ ವರಿಂದ, ಟನ್ನುಗಟ್ಟಲೆ ಪ್ರಣಯದ ಸಾಲ ಹೊರಿಸುವವರೂ ಇದ್ದರು. ಹಗುರವಾದ ವಿನೋದದಿಂದ ದಿಗ್ಭ್ರಮೆಯನ್ನೇ ಹುಟ್ಟಿಸುವ ಬರವಣಿಗೆ ಗಳು. ತಮ್ಮ ಪ್ರಣಯ ಪ್ರಸ್ತಾಪಕ್ಕೆ ಒಪ್ಪದಿದ್ದರೆ ಆತ್ಮಹತ್ಯಾಸ್ತ್ರವನ್ನು ಬಿಡುವುದಾಗಿಯೂ ಕೆಲವು ಹುಚ್ಚರು. ನಿರಾಸೆಗೊಳಗಾದ ಪ್ರೇಮಿಯೊಬ್ಬ ನೀರಿನಲ್ಲಿ ಮುಳುಗಿಕೊಂಡನೆಂದೂ ವದಂತಿ ಹುಟ್ಟಿ, ಈ ಪಿಶಾಚಿ ನಾಯಕಿ ಯನ್ನು ಎಷ್ಟೋ ದಿನ ಕಾಡುತ್ತಿತ್ತು. ಅದನ್ನು ಸುಳ್ಳೆನಿಸಲು ಯಾರೂ ಯತ್ನಿಸಲೇ ಇಲ್ಲ. ಪ್ರೇಮ ಸೂಚನೆಗಳು ಬಂದಷ್ಟೇ ಹೇರಳವಾಗಿ ಮದು ವೆಯ ಪ್ರಸ್ತಾಪಗಳೂ. ನಾಯಕಿ ಈ ರಾಶಿಯಲ್ಲಿ ಅಲ್ಲೊಂದು ಇಲ್ಲೊಂ ದನ್ನು ತೆಗೆದುಕೊಂಡು ಓದಿ, ಇನ್ನಷ್ಟನ್ನು ಓದಿಸಿ ಕೇಳಿ, ಮತ್ತಷ್ಟರ

ಸಾರಾಂಶವನ್ನು ತಿಳಿದುಕೊಂಡು, ಉಳಿದುವುಗಳ ವಿಷಯುವನ್ನು ಕೇಳದೆಯೇ ಇದ್ದು ಬಿಡುತ್ತಿದ್ದಳು. ಇದೊಂದು ವಿನೋದದ 'ಹಾಬಿ'ಯಾಗಿತ್ತು. ತಪ್ಪು ಮಾಡಿ ಯಾವುದಾದರೂ ಸಭೆಗಳಿಗೆ ಹೋದರಂತು, ಸಂದರ್ಭ ಅವಳಿಗೆ ಸಂಬಂಧಿಸಿರಲಿ ಬಿಟ್ಟಿರಲಿ, ಅವಳಿಂದ ಮಾತನಾಡಿಸದೆ, ಹಾಡಿಸಿ ಹಣ್ಣು ಮಾಡದೆ, ಜನ ಬಿಡುತ್ತಲೇ ಇರಲಿಲ್ಲ. ಸ್ವಲ್ಪ ಕಾಲದ ಮೇಲೆ ಈ ಹವ್ಯಾಸವನ್ನೇ ಬಿಡಬೇಕಾಯಿತು.

-೧೪-

ಅವಳ ಸಂಬಳ ಸಾವಿರ ಸಾವಿರವಾಗಿ ನೆಗೆದು ಹತ್ತು ಸಾವಿರವಾಯಿತು. ಚಿತ್ರದ 'ಕಾಂಟ್ರ್ಯಾಕ್ಟ್'ಗಳಿಂದಂತೂ ಒಂದೊಂದರಿಂದಲೂ ಒಂದೊಂದು ಆಸ್ತಿಯೇ ಬರುತ್ತಿತ್ತು. 'ಅತ್ಯುನ್ನತ ವರಮಾನದ ತಾರೆ'ಯ ಗೌರವವೂ ಬಂದಿತು. ವರಮಾನದಂತೇ ಕರ್ಚೂ ಧಾರಾಳ. ಈ ಮನೆಯನ್ನು ಬಿಡಲು ಸೇಠರು ಒಪ್ಪದೆ "ಇದನ್ನು ನಿಮ್ಮದು ಅಂತಲೇ ತಿಳಿದುಕೊಳ್ಳಿ. ಬಾಡಿಗೆ ಬಂಕ ಕಟ್ಟಿಕೊಂಡು ನಂಗೇನಾಗಬೇಕು. ನಿಮ್ಮ ಬಲವಂತಕ್ಕೆ ತಗೋತಿದೀನಿ" ಎಂದಿದ್ದರೂ, ಅವಳು "ಎಲ್ಲಿದ್ದರೇನು ಹೇಗಿದ್ದರೇನು ಎಲ್ಲ ನಿಮ್ಮ ದಯ" ಎಂದು ವಿನೋದಕ್ಕೆ ತಿರುಗಿಸಿ 'ಮಲಬಾರ್ ಹಿಲ್' ನಲ್ಲೇ ಇನ್ನೊಂದು ದೊಡ್ಡ ಮನೆಯನ್ನು ಕೊಂಡುಕೊಂಡಿದ್ದಳು. ಅತಿ ನವೀನ ರೀತಿಯ ಏರ್ಪಾಡು-ಒಳಗೆ. ಗೃಹಕೃತ್ಯದ ಸಿಬ್ಬಂದಿ ಬಡಾಯಿ ಸಿತ್ತು. ಎರಡು ಕಾರುಗಳು. ಅತಿಥಿಗಳು ಇದ್ದೇ ಇರುತ್ತಿದ್ದರು. ಅವರಿಗೆ ರಾಜೋಪಚಾರ ನಡೆಯುತ್ತಿತ್ತು. 'ಪಾರ್ಟಿ'ಗಳು ಬೇರೆ. ತನ್ನ ಮೇಲೂ ಅವಳು ಲೆಕ್ಕವಿಲ್ಲದೆ ಕರ್ಚುಮಾಡಿಕೊಳ್ಳುತ್ತಿದ್ದಳು. ಹಿಂದೆ ಹಣ ಗಂಡನಿಂದ ಬರಬೇಕಾಗಿದ್ದಾಗಲೇ ಅಷ್ಟೊಂದು ಹುಯಿಲು. ಈಗ ತನ್ನದೇ ಎಲ್ಲ; ಕೇಳಬೇಕೆ? ಸ್ವೇಚ್ಛೆಯ ವೆಚ್ಚ. ಹೆಣ್ಣಿನ ಉಡುಗೆ ತೊಡುಗೆ ಅಲಂ ಕಾರಗಳ ತೂಬಿನಲ್ಲಿ ಎಷ್ಟು ಹಣವಾದರೆ ತಾನೆ ಹೋಗಲಾರದು? ಅಲ್ಲದೆ ಕಷ್ಟಕ್ಕೆ ಕರಗಿ ಕೈಬಿಚ್ಚಿ ಕೊಡುತ್ತಿದ್ದಳು. ಕಷ್ಟ ತಿಳಿಸುವವರೂ, ಬೇಡಿ ಕಾಡುವವರೂ, ಕಡಿಮೆಯಿರಲಿಲ್ಲ. ಅಲ್ಲದೆ ದೇಶದಲ್ಲಿ ಒಂದಲ್ಲ ಒಂದು ಕ್ಷೋಭೆ ಕಾದುಕೊಂಡೇ ಇರುತ್ತಿದ್ದಿತು. ಅವಳ ಧಾರಾಳದ ಆಳವೇ ಗೊತ್ತಾಗುವಂತಿರಲಿಲ್ಲ. ಕೈಯಿಂದ ಕೊಡುವುದಲ್ಲದೆ 'ಸಹಾಯಾರ್ಥ'

ನಾಟಕಗಳನ್ನಾಡಿ, ಸಾವಿರ ರೂಪಾಯಿನಿಂದ ಟಿಕೀಟು ದಣ ಹಾಕಿ, ಒಂದೊಂದರಿಂದಲೂ ಎಂಬತ್ತು ತೊಂಬತ್ತು ಸಾವಿರ ರೂಪಾಯಿಗಳನ್ನು ಒದಗಿಸುತ್ತಿದ್ದಳು. ಈ ಸಂದರ್ಭಗಳು ಜನ ರಂಜನೆಯ ತುಂಬು ಸಾಗರದ ಮೇಲಿನ ತುಳುಕಿನ ಅಲೆಗಳಾಗುತ್ತಿದ್ದುವು. ಸ್ವಂತ ಧಾರಾಳ ಹೀಗಾದರೂ ಸೆಂಟ್ರಲ್ ಬ್ಯಾಂಕಿನಲ್ಲಿ ಅವಳ ಲೆಕ್ಕ ನೇರವಾಗಿ ಏರುತ್ತಿತ್ತು-ಅವಳ ಯತ್ನ ವಿಲ್ಲಿದೆಯೇ. ಅಂದ ಮೇಲೆ ಜನ ಆ ಕಾಲದಲ್ಲಿ ಅತ್ಯಂತ ಜಯಪ್ರದವಾದ ಜೀವನದ ಅತಿ ಸ್ವಲ್ಪ ವ್ಯಕ್ತಿಗಳಲ್ಲಿ ಅವಳೊಬ್ಬಳೆಂದು ಗಣಿಸಿ, ಅವಳನ್ನು ಅತ್ಯಂತ ಸುಖಿಯೆಂದು ತಿಳಿದು, ಅಸೂಯೆ ಪಡುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ. ಒಂದು ಭಾಗದಲ್ಲಿ ಅವರು ಸರಿಯೇ; ಆದರೆ ಒಂದು ಭಾಗದಲ್ಲಿ ಮಾತ್ರವೇ.

ಈ ಚಿತ್ರಕ್ಕೆ ಇನ್ನೊಂದು ಭಾಗವೂ ಇದ್ದಿತು. ಪ್ರಸಿದ್ಧ ತಾರೆಯ ಜೀವನ ಹೂವಿನ ಹಾಸಿಗೆಯೆಂದ ಮೂರ್ಖರು ಯಾರು? ಪ್ರಖ್ಯಾತರ ಫಜೀತಿಯೆಲ್ಲ ಒಂದೇ. ನಾಯಕಿಗೆ ದಿನೇ ದಿನೇ ನಾಟಕ ಸಿನಿಮಾಗಳ ಕೆಲಸ ಹೆಚ್ಚುತ್ತ ಬಂದು ಶ್ರಮಸಾಧ್ಯವಾಗಿತ್ತು. ಆದರೆ ಬಿಡುವಂತಿಲ್ಲ. ಕಂಪನಿಗಳ ಒತ್ತಾಯ ಒಂದು ಕಡೆ. ಬೆಳೆಯುತ್ತಿದ್ದ ಕರ್ಚನ್ನೂ ಗಣಿಸದಿರ ಲಾಗುತ್ತದೆಯೆ? ಇವೆರಡಕ್ಕೂ ಹೆಚ್ಚಾಗಿ ದಿನದಿನವೂ ಬೆಳೆಯುತ್ತಿದ್ದ ಪ್ರಜಾ ರಂಜನೆಯನ್ನು ಇನ್ನೂ ಬೆಳೆಯಿಸುತ್ತಿರುವ ಹಂಬಲಿನ ಸ್ವಂತ ನಿರ್ಬಂಧ ಬೇರೆ. ಬಂದಷ್ಟು ಹೆಸರಿನ ಮೇಲೆ ಹಾಯಾಗಿ ಮಲಗಿ, ಮೈಮರೆತು ನಿದ್ದೆಹೋಗಿ, ಬೆಳಗ್ಗೆ ಎದ್ದು, ಆ ಹೆಸರು ಕಳೆದುಹೋಯಿತೆಂದು ಕೇಳಿ ಸಹಿಸುವ ಜೀವವಲ್ಲ, ಅವಳದ್ದು. ಮೇರೆಗಾಣದ ಆಸೆಗೆ ಸದಾ ದುಡಿಯಲು ಪ್ರಾಣವನ್ನೇ ಬಿಡಲು ಸೊಂಟ ಕಟ್ಟಿ ನಿಂತ ಜೀವ. ಯಶಸ್ಸು ಎಲ್ಲಿ ಒಂದೇ ರೀತಿ ನಿಂತುಬಿಟ್ಟೀತೋ, ಕೆಳಗಿಳಿದುಬಿಟ್ಟೀತೋ ಎಂಬ ಸದಾಕಾಲದ ಭಯ. ಅಲ್ಲದೆ ಕಲೆಯ ಮೇಲಿನ ಹುಚ್ಚಂತೂ ಮೊದಲಿನಿಂದಲೂ ಮುಖ್ಯ ಪ್ರೇರಣೆಯೆ. ಇವಕ್ಕೆ ತಕ್ಕ ಬೆಲೆಯನ್ನು ಕೊಡಲೇಬೇಕಾಗಿತ್ತು. ಖ್ಯಾತಿ ವಂತರ ದುರದೃಷ್ಟ. ಕೆಲಸ ಸ್ವಾರಸ್ಯವಾಗಿದ್ದಿತೆಂದರೆ, ರಕ್ತಸಾರವನ್ನೂ ಹೀರುತ್ತಿತ್ತು, ಕಷ್ಟವಾಗಿತ್ತು. ಎಷ್ಟೋ ದಿನಗಳು ರಾತ್ರಿ ಸ್ಟೂಡಿಯೋ ದಲ್ಲಿ, ಸಂಜೆ ನಾಟಕದಲ್ಲಿ, ಉಳಿದ ಕಾಲ ತಯಾರಿಕೆಯಲ್ಲಿ ಕಳೆಯುತ್ತಿದ್ದುವು. ಸೋತು ಮನೆಗೆ ಬಂದರೆ ಅಲ್ಲಿಯೂ ಪುರಸತ್ತು ಅಷ್ಟಕ್ಕಷ್ಟೆ. ಅವರಿವರು

ಬಂದರು, ಆ ಕಾಗದ, ಈ ವ್ಯವಹಾರ–ಒಂದಲ್ಲ ಒಂದು ಕಾದುಕೊಂಡೇ ಇರುತ್ತಿದ್ದುವು. ಕೊನೆಗಾಣದ ವಿಷಯ ಸಾಲು. ಮುಗಿಸಿದಷ್ಟೂ ಅನು ಗ್ರಹ ಯಾಚನೆ ಇದ್ದೇ ಇರುತ್ತಿತ್ತು, ಅಕ್ಷಯ ಪಾತ್ರೆಯಿಂದ ಹೊರ ಬಂದಂತೆ. ದಿನ ದಿನದ ಬಲೋದ್ಬಂಧಿಗಳೂ ಜತೆಗೆ. ಇಷ್ಟೇಯೆ? ಇದಾದರೂ ಕೆಲಸದ ಹೊರೆಯ ಮಾತು. ಈವಾಗಲೋ ಆವಾಗಲೋ ಯಾವಾಗಲೋ ಇದನ್ನೆಲ್ಲ ಗಂಟು ಮೂಟೆ ಕಟ್ಟಿ ಒಂದು ಮೂಲೆಯಲ್ಲಿ ಬಿಸುಟು ಕೊಂಚ ಕಾಲ ಸುಮ್ಮನಿರುವುದೆಂದು ತೀರ್ಮಾನಿಸಿಕೊಂಡರೂ ದೇಹ ಕ್ಕಷ್ಟು ವಿರಾಮವೇ ಹೊರತು ಮನಸ್ಸಿಗುಂಟೆ? ಹೊಸ ಹೊಸ ಜಯದ ಆವೇಶ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವನ್ನೇ ಉಂಟುಮಾಡುತ್ತಿರು ತ್ತಿತ್ತು. ಬೇಕು ಬೇಕೆನ್ನುವಂತೆಯೇ ಇದ್ದರೂ ಇದರ ದಣಿವೇನು ಕಡಿಮೆ ಯಿಲ್ಲ. ಈ ಹೆಸರುಪೈರಿನ ಮಧ್ಯೆ ಕಳೆಯ ಬೆಳೆಯೂ ಕೂಡ ಇದ್ದೇ ಇರಬೇಕಲ್ಲ–ಬಿಸಿಲಿನಲ್ಲಿ ಬೆಳಕಿನೊಡನೆ ಸುಡುವ ಬಿಸಿಯೂ ಇದ್ದಂತೆ. ಒಂದಲ್ಲ ಒಂದು ಕಿರಿಕಿರಿ–ಸಂತೋಷದಂತೆಯೇ. ಇವಳೆಷ್ಟು 'ಗುಪ್ತ ಗಾಮಿನಿ'ಯಾಗಿದ್ದರೂ ಸ್ವಂತ ಜೀವನದ ಸಿರಿ ಇವಳಿಗೆ ಸ್ವಲ್ಪವೇ. ಅದು ಹೇಗೋ ಏನೋ ಇವಳ ಜೀವನದ ಬಗ್ಗೆ ಇದ್ದ ಇಲ್ಲದ ಸಲ್ಲದ ಸುದ್ದಿಗಳೆಲ್ಲ ಎಲ್ಲೆಲ್ಲೂ ಕಂಡು ಕಾಡಿ ಹಿಂಸಿಸುತ್ತಿದ್ದುವು. ಈ ಅನಂತ ಪ್ರವಾಹವನ್ನು ತಡೆಯಲು ಇವಳು ಯಾವಾಗಲೂ ಪ್ರಯತ್ನಪಡುತ್ತಲೇ ಇದ್ದಳು–ವ್ಯರ್ಥ ವಾಗಿ. ಇದೊಂದು ಮನಸ್ಸಿನ ಮೇಲೆ ಖಾಯಂ ಆಗಿ ನಿಂತ ಬಿಗಿತ. ಇದು ಸಾಕು ಸಾಕಾಗುತ್ತಿತ್ತು. ಅನೇಕ ವೇಳೆ ಬೆಂಗಳೂರಿನ ತನ್ನ ಮನೆಯ ನೆನಪನ್ನು ತಂದುಕೊಂಡು 'ಆಹಾ! ಅದೆಂಥ ಸ್ವಂತ ಜೀವನ! ಏನು ಶಾಂತಿ! ಅದು ಇಲ್ಲೂ ಸಾಧ್ಯವಾಗಿದ್ದರೆ!' ಎಂದು ಹಂಬಲಿಸುತ್ತ 'ಸಂಸಾರವಿದ್ದರೆ ಅದೂ ಸಿಕ್ಕುತ್ತಿರಲಿಲ್ಲವೆ–ಅಷ್ಟಿಷ್ಟಾದರೂ? ಛಿ! ಹೇಗೆ ಒಡೆದುಹೋಯಿತು–ಅನ್ಯಾಯವಾಗಿ' ಎಂದು ಮರುಗುತ್ತಿದ್ದಳು. ಪೊಟರೆ ಯೊಳಗಿನ ಕಪ್ಪೆಯಂತೆ ಎಂತಹ ಸಂತೋಷದಲ್ಲೂ ಈ ಯೋಚನೆಯೊಂದು ಅವಳ ಎದೆಯ ಪೊಳ್ಳೊಂದರಿಂದ ಕೂಗುತ್ತಲೇ ಇರುತ್ತಿತ್ತು. ನಿಂತ ಮರಕ್ಕೆ ಹತ್ತಿದ ಗೆದ್ದಲಿನಂತೆ, ಬಾಳಿಗಂಟಿದ ಕ್ಷಯದಂತೆ ಒಳಗೊಳಗೇ ಕಿತ್ತು ತಿನ್ನುತ್ತಿತ್ತು. ಆದರೆ ಇದನ್ನು ಬಿಟ್ಟು ಅದನ್ನು ಮತ್ತೆ ಆರಿಸಿ

ಕೊಳ್ಳಲು ಮಾತ್ರ ಮನಸ್ಸು ಒಪ್ಪದು. ಎರಡರಲ್ಲೊಂದಾದರೆ ಆ ಶಾಂತಿಗಿಂತ ಈ ಶಾಂತಿಯನ್ನೇ ತಡೆಯಬಹುದೆನ್ನಿಸುತ್ತಿತ್ತು. ಇನ್ನೊಂದು ವಿಷಯ. ಗಂಡಿನ ಸಂಗದಲ್ಲಿ, ಆಕರ್ಷಣೆಯ ಸನ್ನಿವೇಶಗಳಲ್ಲಿ, ಪ್ರಣಯದ ಮಾತು ಓದು ಅಭಿನಯಗಳಲ್ಲಿ ಇರುತ್ತ, ಆ ಆವೇಶಪೂರಿತ ಬಾಳಿನಲ್ಲಿ ಕಾಯದ ಕರೆಯನ್ನು ಹದ್ದಿನಲ್ಲಿಡುವುದು ಸಾಮಾನ್ಯದ ವಿಷಯವಾಗಿರಲಿಲ್ಲ. ನಿಜ, ಮದುವೆಗೆ ಮುಂಚೆ ಅವಳ ಬಾಳೇನು ಈ ಭಾಗದಲ್ಲಿ ಶಿಕ್ಷಣ ಹೊಂದಿರಲಿಲ್ಲ. ಆದರೆ ಮಡದಿಯಾದ ಮೇಲೆ ಪರಸಂಗ ಪಾಪವೆಂದುಕೊಳ್ಳದಿದ್ದರೂ ಸುಶಿಕ್ಷಣ ನಡತೆಯಲ್ಲವೆಂದು, ಅವಮಾನವೆಂದು ನಿರ್ಣಯಿಸಿಕೊಂಡಿದ್ದಳು. ರಾಜನ ನೆನಪು ಇತರರ ಯೋಚನೆಯನ್ನೂ ಕೂಡ ಹೇಸಿಕೆಯನ್ನಾಗಿ ತೋರಿಸುತ್ತಿತ್ತು. 'ಎಂದೆಂದಿಗೂ ನಾನು ಅವರವಳೇ. ಇಲ್ಲಿ ಅವರಿಗೊಬ್ಬರಿಗೇ ಜಾಗ' ಎಂದು ಎದೆ ಮುಟ್ಟಿಕೊಳ್ಳುತ್ತಿದ್ದಳು. ಈ ನೆನಪು, ಬಯಕೆಗಳು ಯಾವಾಗಲೂ ಅವಳ ಬೆನ್ನಿನ ಹಿಂದೇ ಇದ್ದುವು. ಆದರೆ ಇದಕ್ಕಿಂತಲೂ ಒಂದು ತೂಕ ಹೆಚ್ಚೆನ್ನುವಂತೆ ಮುಖದ ಮುಂದೆಯೇ ಇದ್ದ ಚಂದುವಿನ ಚಿತ್ರ. ಮಕ್ಕಳು ಕಣ್ಣಿಗೆ ಬಿದ್ದ ಕಡೆ ಅವರ ಮುಖವನ್ನು ದಿಟ್ಟಿಸುವುದು ಅವಳ ಸ್ವಭಾವವಾಗಿ ಹೋಗಿತ್ತು. ವರ್ಷಗಳು ಕಳೆದಂತೆಲ್ಲ ಅವನ ಬೆಳೆವಣಿಗೆಯನ್ನು ಊಹಿಸಿಕೊಂಡು ಮುಖಗಳನ್ನು ಪರೀಕ್ಷಿಸುತ್ತಿದ್ದಳು. ಇದರಲ್ಲಿ ಸಹಾಯವಾಗುವಂತೆ ತನ್ನ ಪದಕದೊಳಗಿದ್ದ ಚಂದುವಿನ ಚಿತ್ರವನ್ನು ನೋಡುತ್ತಿದ್ದಳು. ಅವನ ಕುರುಹಾಗಿ ಉಳಿದಿದ್ದುದು ಈ ಸಣ್ಣ ಚಿತ್ರವೊಂದೇ. ಇದನ್ನು ದಾದಿಯಿಂದ ತರಿಸಿಕೊಂಡಿದ್ದಳು—ಪಾರ್ಕಿನಲ್ಲಿ ಭೇಟಿಯಾಗುತ್ತಿದ್ದಾಗ. ಆದರೆ ರಾಜನ ಚಿತ್ರ ಸಿಕ್ಕಿರಲಿಲ್ಲ. ನಾಶದ ವಿಷಯವನ್ನು ದಾದಿ ಹೇಳಿದ್ದಳು. ಮನೆಯನ್ನು ಬಿಡುವಾಗ ಅವನ ಚಿತ್ರವನ್ನು ತರದಿದ್ದುದಕ್ಕಾಗಿ ನಾಯಕಿ ಕೈಕೈ ಕೊಡಹಿಕೊಂಡಿದ್ದಳು. ಈಗಲೂ ಚಂದುವಿನ ಚಿತ್ರವನ್ನು ನೋಡಿಕೊಂಡಾಗೆಲ್ಲ 'ಅಯ್ಯೊ, ನಂಗೇನು ಹುಚ್ಚು ಬಂದಿದ್ದು, ಆ ಹಟದಲ್ಲಿ ಮನೆಯಿಂದ ಹೊರಟಾಗ. ಆ ಚಿತ್ರವನ್ನಾದರೂ ತರಲಿಲ್ಲವಲ್ಲ' ಎಂದು ನೊಂದುಕೊಳ್ಳುತ್ತಿದ್ದಳು. ಚಂದುವಿನ ಚಿತ್ರದಲ್ಲೇ ಅವನ ತಂದೆಯನ್ನು ಗುರುತಿಸಲು ಒದ್ದಾಡುತ್ತಿದ್ದಳು; ಕಣ್ಣೀರಿನ ಪರೆ ಮುಂದೆ ಇದ್ದ ಚಿತ್ರವನ್ನೂ ಮಸಕಾಗಿಸುತ್ತಿತ್ತು. ಕಂಡ ಮಕ್ಕಳಲ್ಲಿ ಕೆಲವು

ಬಾರಿ ಚಂದುವೇ ಖಂಡಿತವಾಗಿ ಕಂಡಂತಾಗಿ ಅವರ ಹೆಸರು, ಊರು, ತಂದೆ ತಾಯಿ–ಏನೇನನ್ನೋ ವಿಚಾರಿಸಿ ನಿರಾಶಳಾಗುತ್ತಿದ್ದಳು, ಸಿಟ್ಟುಸಿರು ಬಿಡುತ್ತಿದ್ದಳು ತಂದೆ ಮಕ್ಕಳು ಬೊಂಬಾಯಿನಲ್ಲೇ ಇರಲಿಲ್ಲವೆಂದು ಅವಳಿಗೇನು ಗೊತ್ತು ಪಾಪ! ಬಹಳ ವೇಳೆಗಳಲ್ಲಿ ಅವಳು ' ಈ ಜೀವನದಲ್ಲಿ ಯಾವುದರ ತೂಕ ಹೆಚ್ಚು–ಸಂತೋಷದ್ದೋ, ವ್ಯಥೆಯದೋ; ಪ್ರಖ್ಯಾತಿಯದೋ, ಫಜೀತಿಯದೋ?' ಎಂದು ತನ್ನನ್ನೇ ಕೇಳಿಕೊಳ್ಳುತ್ತಿದ್ದಳು. ನಿಜವಾಗಿ ಅದೃಷ್ಟದ ಆವೇಶ, ದುರದೃಷ್ಟದ ಕ್ಲೇಶ ಎರಡೂ ಅವಳ ನರಗಳಿಂದ ತೆರಿಗೆಯನ್ನು ತೆಗೆಯುತ್ತಿದ್ದುವು.

ಇಷ್ಟೇ ಸಾಲದೋ ಎನ್ನುವಂತೆ ಅಷ್ಟುಕಾಲ ಇನ್ನೊಂದು ಕೆಟ್ಟ ಅಂಕವೂ ನಡೆಯಿತು. ಇವಳಿಗೆ ಶತ್ರುಗಳೂ ಇದ್ದರು. ಇವರ ಮುಖ್ಯಸ್ಥ ರಾಜಬಹದ್ದೂರನೆಂದು ಊಹಿಸುವುದು ಸುಲಭ. ಇವನು ಈ ಕಂಪನಿಯನ್ನು ಬಿಟ್ಟ ಮೇಲೆ ಬೇರೆ ಕಂಪನಿಗಳಲ್ಲಿ ಸೇರಿಕೊಂಡಿರುವುದು ಅವನು ನಿರೀಕ್ಷಿಸಿಕೊಂಡಿದ್ದಷ್ಟು ಸುಲಭವಾಗಿರಲಿಲ್ಲ. ಸೇಠರ ಪ್ರಭಾವ ಬಹಳ ಕಂಪನಿಗಳ ಮೇಲಿತ್ತು. ಅವರ ಏಜಂಟರುಗಳು ಎಲ್ಲೆಲ್ಲೂ ಇದ್ದರು. ಇಲ್ಲದಿದ್ದ ಕಡೆ ಹುಟ್ಟಿಕೊಂಡರು. ಸೇಠರು ಬಹಳ ಮಾತಾಡದಿದ್ದರೂ ಕೆಲಸವನ್ನು ಚುರುಕಾಗಿ ಚೆನ್ನಾಗಿ ನಡೆಯಿಸುತ್ತಿದ್ದರು. ಬಹದ್ದೂರ ಕೆಟ್ಟ ಮಾತಾಡಿದ ಮೇಲೆ ಅವರ ಕಣ್ಣು ಅವನ ಮೇಲೆಯೇ ಇದ್ದಿತು. ಸೇಠರು ಸೇಡಿಗೆ ನಿಂತರೆ ಬಹದ್ದೂರ ಹೇಗೆ ಬದುಕಾನು. ಸೇರಿದ ಸ್ಥಳಗಳೆಲ್ಲ ಸ್ವಲ್ಪ ಕಾಲದಲ್ಲೇ ಬಹದ್ದೂರನಿಗೆ ಬಹಳ ಬಿಸಿಯಾಗತೊಡಗಿದುವು. ಒಂದಾದಮೇಲೊಂದರಂತೆ ಬದಲಾಯಿಸಿಕೊಂಡು ಬೇಸತ್ತ. ಆದರೇನು ಅವನು ಹಿಂದಿರುಗಿ ಬಂದು ಬೇಡುವ ಜೀವವಲ್ಲ. ಹೆಮ್ಮೆಯ ಹಿಮಾಲಯ ವನ್ನೇರಿದ್ದವನು. ಕಡೆಗೆ ನೌಕರಿಯಲ್ಲಿ ನಿರಾಸೆ ಹೊಂದಿ ತನ್ನದೇ ಒಂದು ಕಂಪನಿಯನ್ನು ಸ್ಥಾಪಿಸಿ ಯಾವಾಗಲೋ ಒಂದೊಂದು ಚಿತ್ರವನ್ನು ತಯಾರಿಸುತ್ತ ಹಾಗೂ ಹೀಗೂ ನಡೆಸಿಕೊಂಡು ಬರುತ್ತಿದ್ದ. ಅವನ ಹೆಸರು ಮಾಸಲು ಮೊದಲಾಯಿತು. ಇಂತಹ ವ್ಯಕ್ತಿಯು ಸುಮ್ಮ ನಿದ್ದಾನೇ? ಅವನ ಕಿಚ್ಚು ಕಡಿಮೆಯಾಗಿರುತ್ತದೆಯೇ? ಕೆಲವು ಪತ್ರಿಕೆ

ಗಳಿಂದ ತನ್ನ ಪ್ರತಿಸ್ಪರ್ಧಿಯ ಮೇಲೆ ಟೀಕೆಯನ್ನು ಕಾರಿಸಿದ. ಅಷ್ಟೊಂದು ಪ್ರಶಂಸೆಯ ಆರ್ಕೆಸ್ಟ್ರಾದಲ್ಲಿ ಈ ಕೆಲವು ಅಪಸ್ವರಗಳು ನಾಯಕಿಗೆ ಕರ್ಕಶ ವಾಗಿ ಕಂಡರೂ ಸಹಿಸಿಕೊಂಡಳು. ಅಲ್ಲದೆ ಇದು ಸೇಠರ ಗಮನಕ್ಕೆ ಬಂದ ಸ್ವಲ್ಪ ಕಾಲದಲ್ಲೇ ನಿಂತುಹೋದುವು. ಆದರೆ ಅವನ ಇನ್ನೊಂದು ಅಸ್ತ್ರ ಅಡಗಿರಲಿಲ್ಲ. ಕೆಲವು ಹಳದಿ ಪತ್ರಿಕೆಗಳಲ್ಲಿ ಅವಳು ಮತ್ತು ಸೇಠರು ಇಬ್ಬರನ್ನೂ ಹೆಸರಿಲ್ಲದೆ ಸೂಚಿಸಿ ಚಮತ್ಕಾರದಿಂದ ಕಟ್ಟಿದ ಕತೆಗಳು ಕಾಣಿಸಿ ಕೊಂಡವು. ಕ್ರಮೇಣ ಇತರ ಪತ್ರಿಕೆಗಳಿಗೂ ಹರಡಿದುವು, ದಿನದಿನಕ್ಕೂ ಹೆಚ್ಚುತ್ತಿದ್ದುವು–ಬ್ಯಾಕ್ಟೀರಿಯಾಗಳು ಬೆಳೆದಂತೆ. ಇದರಿಂದ ಅವಳಿಗೆ ಬಹಳ ಜುಗುಪ್ಸೆಯುಂಟಾಯಿತು. ಇನ್ನು ಸ್ವಲ್ಪ ದಿನಗಳಲ್ಲೇ ಈ ಪತ್ರಿಕೆ ಗಳು ಇನ್ನೂ ಮುಂದೆ ಹೋಗಿ 'ಮಾಲಾಳ ವಿವಾಹ ವಿಚ್ಛೇದವೇ?' 'ಮಾಲಾಳ ಪುನರ್ವಿವಾಹವೇ?' 'ಮಾಲಾಳ ಕೈಹಿಡಿಯುವ ಪುಣ್ಯವಂತ, ಸೇಠ್ ಧನ್‌ಚಂದ್ ಆದರೆ ಆಶ್ಚರ್ಯವಿಲ್ಲ' 'ಮಾಲಾ-ಧನ್‌ಚಂದ್ ಸಂಬಂಧ ಮದುವೆಯಲ್ಲಿ ಪರಿಣಮಿಸಬಹುದು' ಹೀಗೆ ನೂರಾರು ತಲೆಬರಹಗಳ ಕೆಳಗೆ ದೊಡ್ಡ ವರದಿಗಳು ಪ್ರಕಟವಾಗುತ್ತಿದ್ದುವು. 'ಮಾಲಾ-ಸೇಠರು ಎಂದಿಗಿಂತ ಒಂದಾಗಿರುತ್ತಾರೆ' ಎಂದು ಮೊದಲಾಗಿ ಅವರಿಬ್ಬರೂ ಒಟ್ಟಿಗೆ ನಿಂತ ಕುಳಿತ ಓಡಾಡಿದ ಮಾತನಾಡಿದ ಸಂದರ್ಭಗಳೆಲ್ಲ ಬಣ್ಣ ಹಾಕಲ್ಪಟ್ಟು ಅಚ್ಚಾಗುತ್ತಿದ್ದುವು. ಇವುಗಳನ್ನು ಅದುಮುವುದಕ್ಕೆ ಅವಳಿಗೆ ತಕ್ಕ ಶಕ್ತಿ ಯಿರಲಿಲ್ಲ. ಈ ಕತೆಗಳೆಲ್ಲ ಸುಳ್ಳೆಂದು ಅವಳು ಕೊಟ್ಟಿದ್ದ ಹೇಳಿಕೆಗಳಿಗೆ ತಕ್ಕ ಪ್ರಾಶಸ್ತ್ಯ ಸಿಕ್ಕಿರಲಿಲ್ಲ. ಇಂಥ ವಿಷಯಕ್ಕೆ ಗಮನ ಕೊಡಬಾರದೆಂದು ಸುದ್ದಿಗಾರರಿಗೆ ಬಿನ್ನವಿಸಿಕೊಂಡುದುದೂ ಬೈದು ಹೇಳಿದುದೂ ವ್ಯರ್ಥ ವಾಯಿತು. ನಿರೀಕ್ಷಣೆಗೆ ವಿರುದ್ಧವಾಗಿ, ಅವಳು ಮಾಡಿದ ಯತ್ನಗಳಿಂದ ಕತೆಗಳು ಮತ್ತಷ್ಟು ಹೆಚ್ಚಿಕೊಂಡವು–ಹೈರಾವಣನ ರಕ್ತ ನೆಲಕ್ಕೆ ಬಿದ್ದಂತೆ. ಈ ಸುದ್ದಿಗಳ ಸ್ವಾರಸ್ಯವನ್ನು ಕಳೆದುಕೊಳ್ಳುವುದು ಪತ್ರಿಕೆಗಳಿಗೆ ಇಷ್ಟವಿಲ್ಲ ವೆನ್ನುವುದು ಸ್ಪಷ್ಟವಾಯಿತು. ಈ ಜಾಡ್ಯಕ್ಕೆ ಶಸ್ತ್ರಕ್ರಿಯೆ ಮಾಡುವ ಡಾಕ್ಟರೆಂದರೆ ಸೇಠರೆಂದು ಅವಳ ನಂಬಿಕೆ. ಅವರಿಗೆ ಆ ದಾರಿ ಗೊತ್ತು, ಸಾಮರ್ಥ್ಯವಿತ್ತು. ಅವರ ಗಮನಕ್ಕೆ ಇದು ಬಂದಿರಲಿಲ್ಲವೆಂದು ಹೇಳು ವಂತೆಯೇ ಇರಲಿಲ್ಲ. ಆದರೂ ಅವರೇಕೆ ಹೀಗೆ ತಟಸ್ಥರಾಗಿದ್ದರೆಂಬುದು

ಅವಳಿಗೆ ಸಮಸ್ಯೆಯಾಯಿತು, ಏನೆಲ್ಲ ಅನುಮಾನವನ್ನು ತಂದಿತು. ಆದರೆ ಹೇಗೇ ಆದರೂ, ಅವರು ತಮ್ಮ ಹೆಸರನ್ನು ಹೀಗೆ ಎಳೆದಾಡಿಸಿಕೊಳ್ಳಲು ಒಪ್ಪುವಂತಹವರೆ ಎಂದೂ ಅವಳಿಗೆ ಅನುಮಾನ, ಹಾಗೂ ಅತ್ಯಾಶ್ಚರ್ಯ. ಈ ಸುದ್ದಿಗಳು ಎಲ್ಲೆಲ್ಲೂ ಹರಡಿ ಶಾಮಣ್ಣನೂ ಬೆಂಗಳೂರಿನಿಂದ "ಮಗು, ಇದೇನು ಈ ಸಮಾಚಾರ? ನೀನು ಬೇರೆಯ ನಿಯಮವನ್ನು ಅನುಸರಿಸುವುದಾಗಿ ಹೇಳಿರಲಿಲ್ಲವೆ?" ಎಂದು ಮೃದುವಾಗಿ, ಸೂಕ್ಷ್ಮವಾಗಿ ಬರೆದಿದ್ದ. ಅವಳು ಈ ಅಪಪ್ರಚಾರವನ್ನು ತಡೆಯುವಷ್ಟೂ ತಡೆದು ಈ ಕೋಟಲೆಯ ಕುಟುಕು ಸಹಿಸಲಸಾಧ್ಯವಾದಾಗ ಹೇಗಾದರೂ ಈ ಗುಲ್ಲಿನ ಸೊಲ್ಲನ್ನು ನಿಲ್ಲಿಸಲೇಬೇಕೆಂದು ನಿರ್ಧರಿಸಿ ಸೇಠರೊಡನೆ ಪ್ರಸ್ತಾಪಿಸುವ ಯೋಚನೆಯನ್ನು ಮಾಡಿದಳು.

ಆ ಒಂದು ದುರ್ದಿನವೂ ಅವಳು ಇವೇ ಹೇಸಿಗೆಯ ಕಗ್ಗದ ಕಂತೆಗಳನ್ನು ಓದಿ ರೋಸಿಹೋಗಿ ಹಾಳೆಗಳನ್ನು ಸುತ್ತಮುತ್ತ ಹರಡಿಕೊಂಡು ಮುಸಿಮುಸಿಗುಟ್ಟುತ್ತ ಸೋಫದ ಮೇಲೆ ಒರಗಿಕೊಂಡಿದ್ದಾಗ ಸೇಠರು ಬಂದರು. ಅವರನ್ನು ಕಂಡು ಅವಳಿಗೇನು ಸಂತೋಷವಾಗಲಿಲ್ಲ. ಆದರೂ ನಸುನಗುತ್ತ ಸ್ವಾಗತಿಸಿದಳು.

"ಏನು ಟಾಜ್‌ನಲ್ಲಿ ಮಹಾರಾಜರ ಪಾರ್ಟಿ ಮರೆತುಬಿಟ್ಟಿದೀರೋ?" ಸೇಠರು ನಸುನಗುತ್ತ ನೆನಪುಕೊಟ್ಟು ಕುಳಿತುಕೊಂಡರು.

"ಇಲ್ಲ. ಆದರೆ ಮೈಯಲ್ಲಿ ಅಷ್ಟು ಚೆನ್ನಾಗಿಲ್ಲ," ಅಸಮಾಧಾನದಿಂದ ಹೇಳಿದ ಮಾತು.

"ಯಾಕೆ? ಏನಾಗಿದೆ? ಈಚೀಚೆಗೆ ಆರೋಗ್ಯ ಅಷ್ಟೊಂದು ಉತ್ತಮವಾಗಿಲ್ಲ."

"ಹೂಂ, ಏನೋ ಇರುತ್ತವಲ್ಲ ಒಂದಲ್ಲ ಒಂದು."

"ಅಲ್ಲಿಗೆ ಬಂದರೆ ಎಲ್ಲ ಸರಿಹೋಗುತ್ತೆ, ಏಳಿ. ಅವರ ಪಾರ್ಟಿ ಅಂಥ ಇಂಥಾದ್ದಲ್ಲ. ಬಹಳ ಭಾರಿ. ಭಾರಿಭಾರಿ ಮನುಷ್ಯರೆಲ್ಲ ಬರ್ತಾರೆ. ಬಹಳ ಆಮೋದ ವಿನೋದ. ಸ್ವಲ್ಪ ಆಲಸ್ಯವಿದ್ದರೆ ಅಳಿಸಿಹೋಗುತ್ತೆ."

"ಆಗಲಿ ನೋಡೋಣ," ಅವಳು 'ಇಲ್ಲ' ಎನ್ನಲಿಲ್ಲ. ಅಂದವಳೂ ಅಲ್ಲ, ಅನ್ನುವವಳೂ ಅಲ್ಲ. ನೂರು ಜನರ ಮಧ್ಯೆ ಮೆರೆಯು

ಹಾತೊರೆಯುವುದು ಅವಳ ಸ್ವಭಾವ, ದೌರ್ಬಲ್ಯ. ಅಲ್ಲದೆ ಇಂಥ ಪಾರ್ಟಿ ಗಳಿಗೆ ಬೊಂಬಾಯಿನ ಮೇಲು ಮನೆತನಗಳ ಸುಪ್ರಸಿದ್ಧ ಸುಂದರಿಯರು, ಶ್ರೇಷ್ಠ ಗಾಯಕಿಯರು, ನರ್ತಕಿಯರು, ಹೆಸರಾದ ಇತರ ನಟಿಯರು– ಸಮಾಜದಿಂದ ಆಯ್ದವರು, ಎಲ್ಲರೂ ಬರುತ್ತಿದ್ದರು. ಈ ಸ್ತ್ರೀ ಸಮೂಹದಲ್ಲಿ ತಾರೆಗಳ ಮಧ್ಯದ ಚಂದ್ರನಂತೆ ಮೆರೆಯುವಾಸೆ ನಾಯಕಿಯನ್ನು ಬಿಟ್ಟೀತೆ? ಇಂತಹ ಅವಕಾಶಗಳನ್ನು ಕಳೆದುಕೊಂಡಾಳೆ? ಅಲ್ಲದೆ ಗೌರ್ನರೂ ಬರ ಬಹುದು; ಲಕ್ಷಾಧೀಶ್ವರ ಕೋಟ್ಯಾಧೀಶ್ವರರೂ, ಉನ್ನತೋನ್ನತ ಅಧಿಕಾರಿ ಗಳೂ, ನಾಡಿನ ಮುಂದು ಸಾಲಿನ ಮುಖಂಡರೂ, ಮೇಲು ಮಟ್ಟದ ಕಲಾ ವಿದರೂ ಸೇರುವ ಸುಸಂದರ್ಭ; ರಾಜಮನೆತನಗಳಂತೂ ಇದ್ದೇ ಇದ್ದುವು. ಎಂದ ಮೇಲೆ, ಪರೋಕ್ಷದ ಮೆಚ್ಚಿಕೆ ಪ್ರತ್ಯಕ್ಷವಾಗಿ ಸಿಕ್ಕುತ್ತಿರಲಿಲ್ಲವೆ? ಸ್ವಲ್ಪ ಪ್ರಕಟನೆಯೇ ಇದು? ನಾಯಕಿ, ಈ ಆಹಾರದಿಂದಲೇ ಬೆಳೆದವಳು, ಇದಕ್ಕಾಗಿಯೇ ಹಾತೊರೆಯುತ್ತಿದ್ದವಳು. ಸರಿ, ಹೋಗುವುದನ್ನು ಯಾವಾ ಗಲೋ ತೀರ್ಮಾನಿಸಿಕೊಂಡಿದ್ದಳು. ಆದರೂ ಆ ಗಳಿಗೆಯಲ್ಲಿ ಸೇಠರಿಗೆ ಅಸಮಾಧಾನವನ್ನು ತೋರಿಸಬೇಕಾಗಿದ್ದು ಹಾಗೆ ಹೇಳಿದಳು, ಅಷ್ಟೆ. ಸೇಠರಿಗೆ ಅವಳ ಅನುಮಾನ ಒಪ್ಪಿಗೆಯೆಂದೇ ತಿಳಿಸುವುದು ಅವಶ್ಯಕವಾಗಿರ ಲಿಲ್ಲ. ಯಾವಾಗನಿಂದಲೋ ಅವಳ ಮನಸ್ಸಿನ ಚಲನೆಯನ್ನು ಅರಿತು ಕೊಂಡಿದ್ದರು. ಅವಳ ಸುತ್ತಲೂ ಬಿದ್ದಿದ್ದ ಪತ್ರಿಕೆಗಳನ್ನು ಕಂಡೇ ಅವಳ ಅಸಮಾಧಾನದ ಕಾರಣವನ್ನು ಊಹಿಸಿಕೊಂಡಿದ್ದರು. ಆದರೆ ಅಸಮಾಧಾನ ಆಳವಾದದ್ದಲ್ಲವೆಂದು ಅವರ ಭಾವನೆ. ಆ ವಿಷಯವನ್ನು ಚರ್ಚಿಸುವುದು ಅವರಿಗೆ ಇಷ್ಟವಿರಲಿಲ್ಲ. ಅದನ್ನು ಬೇರೆಯ ರೀತಿ– ಸಂತೋಷದ ರೀತಿಯಿಂದ ಬರಮಾಡಿಕೊಳ್ಳಬೇಕೆಂದು ಅವರ ಆಸೆ. ಆದುದ ರಿಂದ ಈಗ ಅವಳ ಗಮನವನ್ನು ತಿರುಗಿಸಬೇಕೆಂದು ಯೋಚಿಸಿದರು. ಅವಕಾಶವೂ ಇತ್ತು.

"ಇದನ್ನು ಹಾಗೇ ಹಿಡಿದುಕೊಂಡು ಬಂದೆ," ಜೇಬಿನಿಂದ ತೆಗೆದ ಮಖಮಲ್ ಡಬ್ಬಿಯನ್ನು ಅವಳ ಕಡೆಗೆ ನೀಡಿದರು. ಒಡವೆಯಾಸೆಯ ಹಿನ್ನೆಲೆಯ ಸ್ತ್ರೀ ಸಹಜದ ಕುತೂಹಲದಿಂದ ಅವಳ ಕೈ ಅದನ್ನು ತೆಗೆದುಕೊಂಡಿತು.

"ಬಹಳ ಚೆನ್ನಾಗಿವೆ!" ಆ ಗಳಿಗೆಯಲ್ಲಿ ತನ್ನನ್ನು ಮರೆತಿದ್ದಳು. ಒಡವೆಯೊಂದರ ಅರಿವು ಮಾತ್ರ. ಅದೊಂದು ವಜ್ರದ ಪದಕ. ನಿಜ ವಾಗಿಯೂ ನಿಗಿನಿಗಿಯೆನ್ನುತ್ತಿತ್ತು.

"ನಿಮಗೆ ಚೆನ್ನಾಗಿ ಒಪ್ಪುತ್ತೆ ಅನ್ನಿಸಿತು, ತಂದೆ. ಎಲ್ಲಿ, ಕಟ್ಟಿ ಕೊಳ್ಳಿ ನೋಡೋಣ," ಸೇಠರು ತೃಪ್ತಿಯಿಂದ ಹೇಳಿದರು.

"ಓ, ಸೇಠ್‌ಜೀ, ನೀವು ಒಂದಲ್ಲ ಒಂದು ಏನಾದರೂ ತರ್ತಾಲೇ ಇರ್ತೀರಿ." ಅದನ್ನು ಎದೆಯ ಮೇಲಿಟ್ಟುಕೊಂಡವಳು ತಟ್ಟನೆ ತೆಗೆದು "ಉಹುಂ, ಬೇಡಿ. ಕೊಟ್ಟುಬಿಡಿ," ಎಂದು ಹಿಂತಿರುಗಿಸಲು ಕೈನೀಡಿದಳು. ಅವಳಿಗೆ ಆ ಕ್ಷಣದಲ್ಲಿ ಆ ಕತೆಗಳಲ್ಲೊಂದು ನೆನಪು ಬಂದಿತ್ತು–ಸೇಠರು ಅವಳ ಮೇಲೆ ಒಡವೆಗಳನ್ನು ಸುರಿಯುತ್ತಾರೆಂಬುದು. ನಿಜವಾದದ್ದು.

"ಉಂಟೆ, ಉಂಟೇ ಎಲ್ಲಾದರೂ. ಎಷ್ಟು ಚೆನ್ನಾಗಿತ್ತು, ಏನು ಕತೆ. ಇದೆಲ್ಲ ಏನು ಮಹಾ ವಿಷಯ. ಏನೋ ಕಂಡಿತು, ತಂದೆ. ಅಷ್ಟೆ," ಸೇಠರು ತೆಗೆದುಕೊಳ್ಳದೆ ಸ್ವಲ್ಪ ಹಿಂದಕ್ಕೆ ಸರಿದುಕೊಂಡರು.

"ಇಲ್ಲ. ಇಲ್ಲ. ನಿಮ್ಮ ಇಷ್ಟಾನ ಅಲಕ್ಷಿಸುತ್ತೀನಿ ಅಂತಲ್ಲ........"

"ನಂಗೆ ಗೊತ್ತು."

"ಆದರೆ ಹೀಗೆ ನನ್ನ ಮೇಲೆ ಇಂಥಾದ್ದನ್ನೆಲ್ಲ ಸುರೀಬಾರದು," ಕತೆಯ ಮಾತನ್ನೇ ಜೋಡಿಸಿಕೊಂಡು ಹೇಳಿದಳು.

"ಛಿ, ಅದೆಂಥ ಮಾತು! ಸುರಿಯೋದೇನು? ಇದು ನಂಗೆ ಹೆಚ್ಚೆ? ದೇವರು...."

"ಅದಲ್ಲ ಹೇಳಿದ್ದು. ಸರಿ ಮತ್ತೆ...."

"ಎಲ್ಲರ ಮೇಲೂ ಸುರಿಯೋದಕ್ಕಾಗುತ್ತೇ? ಅದಕ್ಕೂ ಯೋಗ್ಯತೆ ಇರಬೇಡವೆ? ಇದನ್ನು ನಾನಾಗಿ ಕೊಡುತ್ತಲೇ ಇಲ್ಲ. ನಿಮ್ಮ ಸ್ನೇಹ, ನಿಮ್ಮ ಸೌಂದರ್ಯ, ಸಂಪಾದಿಸಿಕೊಂಡಿವೆ–ಖಂಡಿತವಾಗಿ ಹೇಳೋದಾದರೆ."

ಇಂತಹ ಮಾತುಗಳನ್ನು ಕೇಳಲು ನಾಯಕಿಗೆ ನಲವತ್ತು ಕಿವಿ. ಅಮೃತವರ್ಷದಂತಿರುತ್ತಿದ್ದುವು. ಅವಳ ಹರ್ಷ ಮಿಗಿಲಾಗಿ, ನಗೆ ಸೂಸಿ, ಮೊಗ ಕೆಂಪೇರಿತು.

“ ನಿಮ್ಮ ಮನಸ್ಸು ಬಹಳ ದೊಡ್ಡದು. ಹಿಂದೆಯೂ ಈಗಲೂ ಮಾಡಿ ಮಾಡ್ತಾ ಇರೋ ಉಪಕಾರಗಳೆಲ್ಲ ಸಾಲದು ಅಂತ ಇವೂ ಬೇರೆ........”

“ ಎಂಥ ಉಪಕಾರ! ಹಕ್ಕು ಅನ್ನಿ; ನಿಮ್ಮ ಪ್ರತಿಭೆಯ ಹಕ್ಕು. ಯಾರಾಗಿದ್ದರೂ....”

“ ನಾನು ಒಪ್ಪೋದಿಲ್ಲ.”

“ ಒಬ್ಬರು ಒಪ್ಪದೆ ಇದ್ದರೇನು, ನಮ್ರತೆಗಾಗಿ. ನಾನು ತಿಳಿದಿಲ್ಲವೆ, ಜನರು....”

“ ಎಲ್ಲ ಜನರೂ ಹಾಗೇನು ತಿಳಿದಿಲ್ಲ. ಬೇಕಾದಷ್ಟು ಅಪಾರ್ಥ ಗಳನ್ನು ಕಲ್ಪಿಸುತ್ತಾರೆ,” ಅವಳಿಗೆ ನೋವಿನ ನೆನಪು ತಟ್ಟನೆ ಬಂದಿತು. ಯೋಚಿಸಿಕೊಂಡಿದ್ದ ವಿಷಯಕ್ಕೆ ಮತ್ತೆ ಬಂದಳು.

“ ಛಿ! ಛಿ! ಎಲ್ಲಾದರೂ....”

“ ಇಲ್ಲಿ ನೋಡಿ, ಈ ಪತ್ರಿಕೆಗಳಲ್ಲಿ!” ಅವಳು ಕೆಲವನ್ನು ಅವರಿಗೆ ಕೊಟ್ಟಳು. ಸೇಠರಿಗೆ ಇವೇನು ಹೊಸದಾಗಿರಲಿಲ್ಲ. ಎಷ್ಟನ್ನೋ ಓದಿ ಕೊಂಡಿದ್ದರು. ಗುಟ್ಟಾಗಿ ಸಂತೋಷವನ್ನು ಅನುಭವಿಸುತ್ತಿದ್ದರು. ಆದರೂ ಅವಳೆದುರಿಗೆ ಹಾಳೆಗಳನ್ನು ತಿರಿವಿ ನೋಡಿದರು.

“ ಇಂಥವು ಅಷ್ಟನ್ನು ನೀವೂ ನೋಡಿರಲೇಬೇಕು.”

“ ಹೂಂ........” ತಲೆಯಾಡಿಸುತ್ತ ಉದ್ಗಾರವನ್ನು ತೆಗೆದು ಒಪ್ಪಿಕೊಂಡರು.

“ ಇವು ದೊಡ್ಡ ತಲೆನೋವು. ತಪ್ಪಿಸಬೇಕು.”

“ ಹೂಂ.”

“ ಅದೂ ನಿಮ್ಮ ಮನಸ್ಸಿಗೆ ಬಂದೇ ಇರಬೇಕು.”

“ ಹೂಂ.”

“ ಅದು ನಂಗೆ ಮೀರಿದ್ದು. ನಿಮಗೇ ಸಾಧ್ಯ.”

“ ಹೂಂ.”

“ ಏನು ಯೋಚನೆ ಮಾಡಿದೀರ? ಯಾವ ಯತ್ನ....”

“ ಅದನ್ನೇ ಯೋಚಿಸುತ್ತಿದ್ದೆ. ಯಾವ ದಾರಿ ಹಿಡಿಯೋಣ ಅಂತ.”

" ನಾವಿಬ್ಬರೂ ಒಟ್ಟಿಗೆ ಹೇಳಿಕೆ ಕೊಟ್ಟರೆ ? "

" ಆಗಬಹುದು."

" ಅದಕ್ಕೂ ಸರಿಯಾಗದಿದ್ದರೆ ಮಾನ ನಷ್ಟಕ್ಕೇಂತ ಕೋರ್ಟಿಗೆ ಹೋಗಬಹುದಲ್ಲವೆ ? "

" ಹೂಂ."

" ನಾನು ಹೆಂಗಸು. ಹೆಚ್ಚು ಹಚ್ಚಿಸಿಕೊಳ್ಳೋದಕ್ಕೆ ಹೆದರಿಕೊಂಡು ಸುಮ್ಮನಿದ್ದೆ."

" ಸರಿಯಾದದ್ದೇ. ಕೋರ್ಟಿನ ಕಷ್ಟ ಅಷ್ಟಿಷ್ಟಲ್ಲ. ಅದೂ ಇಂಥ ವಿಚಾರದಲ್ಲಿ ದೀರ್ಘವಾಗಿ ಎಳೆಯುತ್ತೆ. ಖರ್ಚಿನ ಮಾತೂ ಇರಲಿ. ಮುಖ್ಯವಾಗಿ ಸಾಕ್ಷಿ, ಸವಾಲು ಅಂತ ಇನ್ನೂ ಬೇಕಾದಷ್ಟು ಕತೆಗಳ ಬಾಲ ಬೆಳೆಯುತ್ತೆ. ಇನ್ನೂ ಗುಲ್ಲು ಹೆಚ್ಚುತ್ತ ಹೋಗುತ್ತೆ. ಹಳೇ ಮನೆ ಸರಿಮಾಡೋಕ್ಕೆ ಹೋಗಿ ಮೇಲೇ ಕೆಡವಿಕೊಂಡ ಹಾಗಾಗುತ್ತೇನೋ. ಅಂತ ಯೋಚಿಸ್ತಾ ಇದ್ದೆ."

" ಮತ್ತೆ, ಏನು ಹೇಳಿಕೇಲೇ ಮುಗಿಯುತ್ತೇ ? "

" ಇಲ್ಲ ಅಂತ ಕಾಣುತ್ತೆ."

" ನಂಗೂ ಹಾಗೇ ಅನ್ನಿಸುತ್ತೆ. ಮತ್ತೆ, ಇನ್ನು ಯಾವುದು ಸುಲಭವಾದ ದಾರಿ ? ಈ ಪತ್ರಿಕೆಗಳ ಮೇಲೆ ಏನಾದರೂ ಹಣದ ಕೈವಾಡ ನಡೆದರೆ...."

" ಹೂಂ, ಅದೂ ಒಂದು ದಾರಿ. ಆದರೆ ಅದನ್ನು ಕೊನೆಯಿಲ್ಲದ ಹಾಗೆ ನಡೆಸ್ತಾಲೇ ಇರಬೇಕಾಗುತ್ತೆ. ಅವರು 'Black-mail' ಮಾಡ್ತಾಲೇ ಇರೋದೇನು ಅಸಾಧ್ಯವಲ್ಲ. ದುಡ್ಡೂ ಕೊಟ್ಟು ದುಃಖಾನೂ ಉಂಡು...."

" ನಿಜ, ನಿಜ. ಆದರೆ ಇನ್ನು ಯಾವ ದಾರಿಯೂ ಇಲ್ಲವಲ್ಲ."

" ಅದೇ. ಇನ್ನು ಯಾವುದೂ ಇಲ್ಲವೇ ಅಂತ."

" ಇನ್ನು ಯಾವುದಿದೆ ? ನೀವೇ ಯೋಚಿಸಿ ಹೇಳಿ."

" ಇನ್ನೂ ಒಂದಿದೆ–ಯಲ್ಲ," ಸೇಠರು ನಸುನಕ್ಕರು.

" ಆ ! ಯಾವುದು ? " ತೀಕ್ಷ್ಣವಾಗಿ ಯೋಚಿಸಿದಳು.

" ಆ ಕತೆಗಳನ್ನೆಲ್ಲ ನಿಜಾನೇ ಮಾಡಿಬಿಟ್ಟರೆ ! "

" ಆ ! ಏನೂ ! " ನಾಯಕಿಗೆ ಛಳುಕು ಹೊಡೆದಂತಾಯಿತು. ಬಿರಿಗಣ್ಣು ಬಿಟ್ಟು ನೋಡಿದಳು. ಹೆಚ್ಚು ಮಾತೇ ಹೊರಡಲಿಲ್ಲ.

" ಹೂಂ.. ಅದೇ. ಇದನ್ನು ಬಹಳ ಕಾಲದಿಂದ-ಯಾಕೆ, ನಿಮ್ಮನ್ನು ನೋಡಿದಾಗಿನಿಂದ ಯೋಚಿಸಿಕೊಂಡು ಕನಸು ಕಂಡಿದೀನಿ. ನೀವು ಮಾತ್ರ ದೊಡ್ಡ ಮನಸ್ಸು ಮಾಡಿ ಒಪ್ಪಿದರೆ...."

" ಅಯ್ಯೋ, ಏನು ಸೇಠಜೀ ನೀವು ಹೇಳೋದು ! " ನಾಯಕಿ ಭ್ರಮೆಯಿಂದ ಕೂಗಿಕೊಂಡಳು.

" ನಿಜ, ನಿಮಗೆ ನಾನು ತಕ್ಕವನಲ್ಲ. ನಾನೇನು ಆದರ್ಶ ಜೀವನ ನಡೆಸಿಲ್ಲ. ಲಂಗು ಲಗಾಮಿಲ್ಲದೆಯೇ ಬಾಳಿದೀನಿ-ನೀವು ಇಲ್ಲಿಗೆ ಬರೋ ವರೆಗಾದರೂ. ಬರಿ ಹಣದ ರಾಶಿ ಗುಡ್ಡೆ ಹಾಕಿಕೊಂಡು ಅದರ ಬಲದ ಮೇಲೆ ಪ್ರಸ್ತಾಪ ಮಾಡಿದೀನಿ ಅಂದುಕೋಬಹುದು. ಒಂದು ವಿಧದಲ್ಲಿ ನಿಜವೂ ನಿಜವೆ. ನಂಗೆ ಇನ್ನೇನಿದೆ? ಆದರೂ ನನ್ನ ಪ್ರೇಮವೂ ಕೂಡ ನಿಮ್ಮದೇ ಆಗಿದೆ. ಅದೂ ಒಂದು ಕಾಣಿಕೆ ಅಂದುಕೊಂಡು ನೋಡಬೇಕು. ನನ್ನ ಹೆಂಡತಿ ಸತ್ತು ಹೋದಂದಿನಿಂದ ನನ್ನ ಮನೆಗೆ, ನನಗೆ ಒಡತಿಯಿಲ್ಲ. ಹೋದವಳ ಸ್ಥಳವನ್ನು ಅಲಂಕರಿಸಿ ಅಂತ ಕೇಳಿಕೊಳ್ತಾ ಇದೀನಿ-ಕಡಿಮೆಯ ಹೀನಾಯದ ಪ್ರಸ್ತಾಪ ಅಂತ ಹಿಂಜರಿಯೋದಾದರೆ...."

" ಛಿ, ಛಿ, ಹಾಗಿಲ್ಲ. ಅದೆಲ್ಲ ಯಾವುದೂ ಅಲ್ಲ. ಆದರೆ ನಾನು ಮದುವೆಯಾದೋಳು ಅನ್ನೋದನ್ನೇ ಮರೆತುಬಿಟ್ಟರಲ್ಲ ! " ಗಾಬರಿಯಿಂದ ಹೇಳಿದಳು.

" ಇಲ್ಲ, ಗೊತ್ತಿದೆ. ಆದರೆ ಮನೆಯನ್ನು-ಆತನನ್ನು ಬಿಟ್ಟಿರಿ ಅನ್ನೋದೂ ಗೊತ್ತಿದೆ."

" ಅದು ಅವರು ಬೇಡ ಅಂತಲ್ಲ ; ಕಲೆ ಬೇಕು ಅಂತ. ಅವರು ಒಪ್ಪದೆ ವಿರೋಧ...."

" ಅದನ್ನೂ ಕೇಳಿದೀನಿ. ಹೇಗಾದರೂ ಮತ್ತೆ ಒಂದಾಗೋದಂತೂ ಇಲ್ಲವಲ್ಲ."

" ಆದರೆ ? ಮತ್ತೆ ಮದುವೆ ಮಾಡಿಕೊಳ್ಳೋದೆ ! "

" ಹುಂ, ಕಾನೂನಿನ ಪ್ರಕಾರ ಬೇರೆಯಾಗಿ...."

" ಉಹುಂ, ನಾನು ಕೇಳಿದ್ದು ಅದಲ್ಲ, ಅವಕಾಶದ ಮಾತಲ್ಲ. ನಾವು ಬೇರೆಯಾಗಿದ್ದರೇನು, ಎಂದೆಂದಿಗೂ ಒಂದೇ ಇಬ್ಬರೂ. ಒಬ್ಬರಿಗೊಬ್ಬರು."

" ಛಿ, ಹಾಗಾಗೋದುಂಟೆ? ನೀವು ಹೀಗೇ ಇರೋದುಂಟೆ, ಎಷ್ಟು ಕಾಲ ಆದರೂ? "

" ಹುಂ, ಜೀವನವೆಲ್ಲ. ನಿಜವಾಗಿರೋದು ಒಂದೇ ಮದುವೆ-ಪ್ರೇಮದ್ದು. ಮಿಕ್ಕದ್ದೆಲ್ಲ-ಇದ್ದರೆ-ಅನುಕೂಲವಾದ ಸಂಬಂಧ, ಅಷ್ಟೆ. ಅವುಗಳಲ್ಲಿ ಪ್ರೇಮ ಹೇಗಿರುತ್ತೆ. ಒಂದಕ್ಕಿಂತ ಹೆಚ್ಚು ಸಾರಿ ಪ್ರೀತಿಸೋದು ಸಾಧ್ಯವೆ? "

ಅವಳ ಆಶ್ಚರ್ಯದ ಪ್ರಶ್ನೆ ಸೇಠರನ್ನು ಬೆರಗುಗೊಳಿಸಿತು. ಅರ್ಥ ಮಾಡಿಕೊಳ್ಳಲು ಕೊಂಚ ಕಾಲವೇ ಆಯಿತು. ಆಗ ಇಬ್ಬರೂ ಮೌನವಾಗಿ ಯೋಚಿಸುತ್ತಿದ್ದರು.

" ಹಾಗಾದರೆ, ಇನ್ನೂ ಆತನನ್ನು ಪ್ರೀತಿಸ್ತೀರ-ಬಿಟ್ಟಿದ್ದೂ."

" ಜತೆಗಿರುವುದನ್ನು ಬಿಟ್ಟಿದ್ದರೆ ಪ್ರೇಮ ಹೇಗೆ ಕಡಿಮೆಯಾಗುತ್ತೆ? ಈ ಅಗಲುವಿಕೇಲಿ ಇನ್ನೂ ಹೆಚ್ಚುತ್ತಿದೆ-ವ್ಯಥೆಯ ರೂಪದಿಂದ. ಅವರನ್ನು ಇದಕ್ಕಿಂತ ಕಡಿಮೆ ಪ್ರೀತಿಸಿದ್ದರೆ ಮದುವೆಯಾಗುತ್ತಿದ್ದೆನೆ? ಇಲ್ಲ. ನನ್ನ ಎದೇನೆಲ್ಲ ಅವರಿಗೆ ಧಾರೆಯೆರೆದಿದೀನಿ. ಪೂರ್ಣವಾಗಿ ಪ್ರೀತಿಸಿದೀನಿ. ಅವರೊಬ್ಬರೇ ನಂಗೆ. ಬೇರೆಯವರ ಯೋಚನೆಯೂ ಅನುಚಿತ-ಬರೋದಿಲ್ಲ. ನಮಗೆ ನಾವುಗಳೇ ಮೀಸಲು. ಮಾತು ಕೊಟ್ಟಿದೀವಿ; ಮುರಿಯೋದು ಅನೀತಿ. ಮದುವೆ ಅಂದರೆ ಇದೇ ಅಲ್ಲವೆ? ನಮ್ಮ ಭಾವನೆಯನ್ನು ನಾವೇ ಗೌರವಿಸಬೇಡವೆ? "

ಸೇಠರು ಇದರ ಮುಂದೆ ಏನನ್ನೂ ಹೇಳಲಿಲ್ಲ. ಅವರು ತಮ್ಮ ನಂಬಿಕೆಗಳನ್ನು ತಲೆಕೆಳಗುಮಾಡಿ, ಸುತ್ತ ನೋಡಿ, ಪರೀಕ್ಷಿಸುತ್ತಿದ್ದರು.

" ಸೇಠ್‌ಜೀ. ನಿಮ್ಮಿಂದ ಎಷ್ಟೋ ಉಪಕಾರ ಪಡೆದಿದೀನಿ. ನನ್ನ ಈಗಿನ ಸ್ಥಿತಿಗತಿ, ಪ್ರಖ್ಯಾತಿ, ಎಲ್ಲ ನಿಮ್ಮ ಸಹಾಯದ ಬಂಡವಾಳದ ಮೇಲೇ ಬೆಳೆದ ಬಡ್ಡಿ. ಬಹಳ ಕೃತಜ್ಞಳಾಗಿದೀನಿ. ಆದರೆ ಇದು ಈ ವಿಷಯ-ನನ್ನನ್ನೂ ಮೀರಿದ್ದು. ದಯವಿಟ್ಟು ತಪ್ಪಾಗಿ ಭಾವಿಸಬೇಡಿ," ನಾಯಕಿ ಕೈಜೋಡಿಸಿದಳು.

" ತಪ್ಪಾಗಿ ಭಾವಿಸಿದ್ವಿ....ಈಗ ಇಲ್ಲ," ಸೇಠರು ನಿಧಾನವಾಗಿ ತಡೆ ತಡೆದು ಹೇಳಿದರು. " ನಿಮ್ಮ ಹೊರ ಸ್ವಭಾವ ನಡೆವಳಿಕೆಗಳ ಹಗುರದ ಸಂತೋಷ ತಪ್ಪು ತಿಳಿವಳಿಕೆಯನ್ನು ಕೊಟ್ಟಿತ್ತು. ಕೇಳಿಬಿಟ್ಟೆ...."

" ಅದು ನನ್ನ ವ್ಯಥೆಯ ಹಾವಿಗೆ ಬಣ್ಣದ ಬುಟ್ಟಿಯ ಹಾಗೆ. ಮುಚ್ಚಳ ತೆಗೆದು ತೆಗೆದು ಇತರರನ್ನೆಲ್ಲ ಯಾಕೆ ಕಚ್ಚಿಸಲಿ? ಏನು ಅಧಿಕಾರ ಇದೆ ನಂಗೆ, ಅದರಲ್ಲಿ ಏನು ಸಂತೋಷ? ಅದಕ್ಕೇ ಬುಟ್ಟಿಯನ್ನು ಭದ್ರವಾಗಿ ಮುಚ್ಚಿಕೊಂಡು ಬಣ್ಣವನ್ನಷ್ಟೇ ಮೇಲೆ ಕಾಣಿಸ್ತೀನಿ–ಒಳಗೆ ಹಾವು ರೋಷ ದಿಂದ ಎಷ್ಟಾದರೂ ನನ್ನೇ ಕಚ್ತಾ ಇರಲಿ ಅಂತ."

" ನಿಮ್ಮನ್ನು ನೋಡಿ ಬಹಳ ವ್ಯಥೆಯಾಗುತ್ತೆ–ಕನಿಕರವೇ. ಆದರೆ ಉಪಾಯವಿಲ್ಲ ಅಂತ ಕಾಣುತ್ತೆ."

" ನಿಜ. ನಾವಿಬ್ಬರೂ ನಿಸ್ಸಹಾಯರೇ ಇದರಲ್ಲಿ. ಹಾಗೇಂತ ಇದು ನಿಮಗೆ ಬೇಸರ ತರದಿದ್ದರೆ ನಂಗೆ ಎಷ್ಟೋ...."

" ಛಿ, ಛಿ. ಉಂಟೆ. ನಾನೀಗ ನಿಮ್ಮನ್ನು ಅರ್ಥ ಮಾಡಿಕೊಂಡಿ ದೀನಿ. ನಂಗೇನೋ ನಿರಾಸೆಯೋ, ವ್ಯಥೆಯೋ. ಆದರೆ ಬೇಸರವಿಲ್ಲ, ಸಿಟ್ಟೂ ಇಲ್ಲ. ಬದಲಾಗಿ ನಿಜವಾದ ಮೆಚ್ಚಿಗೆಯೇ–ಯೋಚಿಸಿಕೊಂಡರೆ. ಅಭಿನಯದಲ್ಲಿ ಹೇಗೋ ವ್ಯಕ್ತಿತ್ವದಲ್ಲೂ ನೀವು ಬಹಳ ದೊಡ್ಡೋರು...."

" ನಿಮ್ಮ ದೊಡ್ಡತನ–ಹಾಗೆ ತಿಳಿಸೋದು. ಇಲ್ಲದೆ ಸಾಮಾನ್ಯರಾಗಿ ದ್ದರೆ, ಸ್ವಾರ್ಥಪರರಾಗಿದ್ದರೆ ಆ ದೃಶ್ಯವೇ ಬೇರೆಯಾಗಿರುತ್ತಿತ್ತು. ಅದನ್ನು ಊಹಿಸಿಕೊಂಡರೂ ಗಾಬರಿಯಾಗುತ್ತೆ. ಅಂಥ ಅನೇಕ ಸನ್ನಿವೇಶಗಳನ್ನು ಕಂಡ ದುರದೃಷ್ಟ, ನನ್ನದು. ನಿಮ್ಮದೊಂದು ವೈಶಿಷ್ಟ್ಯ."

" ಹೆಚ್ಚೇನೂ ಇಲ್ಲ. ನಿಮ್ಮ ಭಾವನೆಯನ್ನು ನೀವು ಗೌರವಿಸಿದಂತೆ, ನಾನೂ ಗೌರವಿಸುತ್ತೀನಿ; ನಿಮ್ಮನ್ನೂ ಅದಕ್ಕಾಗಿ ಗೌರವಿಸುತ್ತೀನಿ, ಅಷ್ಟೆ. ಆ ಭಾವನೆಗೋಸ್ಕರ ನೀವು ಬಹಳವನ್ನು ಕಳೆದುಕೊಳ್ಳೋದಕ್ಕೆ ಸಿದ್ಧರಾಗಿ ದೀರಿ; ಹಾಗೇ ನಾನೂ ನಿಮ್ಮನ್ನು ನಾನು ಭಾವಿಸಿದ ರೀತಿಯಲ್ಲಿ ಕಳೆದು ಕೊಳ್ಳೋದಕ್ಕೆ ಸಿದ್ಧವಾಗ್ತೀನಿ."

" ಇದು ನಮ್ಮ ನಿಮ್ಮ ಸ್ನೇಹದ ಮಧ್ಯೆ ಏನಾದರೂ ಒಡಕು...."

" ಛೆ, ಎಂಥ ಮಾತು! ಅದು ಇನ್ನೂ ಬಲಗೊಳ್ಳುತ್ತೆ–ಇದರಿಂದ."

" ಓ, ನಿಮ್ಮನ್ನು ಹೇಗೆ ವಂದಿಸಲಿ ! "

" ಅದೇನು ದೊಡ್ಡದು, ಬಿಡಿ. ನ್ಯಾಯವಾದದ್ದೇ. ಅದಿರಲಿ, ಹೋಗೋಣವೆ–ಪಾರ್ಟಿಗೆ ? " ,

" ಹೂಂ," ನಾಯಕಿ ಪದಕವನ್ನು ಕಟ್ಟಿಕೊಂಡು ಏಳುತ್ತ " ಮತ್ತೆ, ಈ ಸುಡುಗಾಡು ಪತ್ರಿಕೆಗಳ ಸಮಾಚಾರ ? " ಎಂದು ಕೇಳಿದಳು.

" ನೀವು ಹೇಳಿದ್ದನ್ನೆಲ್ಲ ಮಾಡೋಣ–ಆಮೇಲೆ, ಇನ್ನೂ ಚೆನ್ನಾಗಿ ಯೋಚಿಸಿ. ಅದರ ಚಿಂತೆ ಬಿಡಿ. ನಂಗಿರಲಿ."

ಪಾರ್ಟಿಯಲ್ಲಾದ ಬಳಕೆಯನ್ನು ಬಹಳವಾಗಿ ಬೆಳೆಯಿಸಿಕೊಂಡು, ಒಂದು ದಿನ ಮಹಾರಾಜರು ನಾಯಕಿಯ ಮನೆಯಲ್ಲಿ ಜೇನು ಸೋರುವ ತುಟಿಗಳಿಂದ ಪ್ರೇಮವನ್ನೇ ತೊಟ್ಟಿಕ್ಕಿಸಿ ರಾಜೋಚಿತವಾಗಿಯೇ ಶರಣು ಹೋಗಿ ಸೆರೆ ಹಿಡಿಯಲು ಮುಂಡಿಯೂರಿದರು–ಡೊಳ್ಳು ಹೊಟ್ಟೆಗೆ ಕಸರತ್ತು ಮಾಡಿಸಿ. ನಾಯಕಿ ಸ್ಪಷ್ಟವಾಗಿಯೇ ನಕ್ಕು " ನಿಮ್ಮ ರಾಜ್ಯ ನಂಗೆ ತೀರ ಚಿಕ್ಕದು. ದೊಡ್ಡ ರಾಜ್ಯವನ್ನು ಆಳಿ ಅಭ್ಯಾಸವಾಗಿ ಹೋಗಿದೆ. ಸರಿ ಹೋಗೋದಿಲ್ಲ," ಎಂದು ವಿನೋದವಾಗಿಯೇ ಹೇಳಿ ರಾಜ ಪ್ರಣಯಿಯಿಂದ ನುಣಿಚಿಕೊಂಡು ವೀರನನ್ನು ಹೊರಗಟ್ಟಿ ಬಾಗಿಲನ್ನು ಹಾಕಿಸಿದಳು. ರಾತ್ರಿಯೆಲ್ಲ ಅವಳಿಗೆ ದಿಗಿಲು–ಎಷ್ಟಾದರೂ ರಾಜ, ಮತ್ತೆಲ್ಲಿ ಧಾಳಿಯಿಡುವನೋ, ಬಾಗಿಲನ್ನೊಡೆಸುವನೋ, ಕಿಟಕಿಯಿಂದಲೇ ಬಂದುಬಿಡುವನೋ ಎಂದು. ಸಂಯುಕ್ತೆಯ ಪಾತ್ರವನ್ನು ಎಷ್ಟೋ ಬಾರಿ ಅಭಿನಯಿಸಿದ್ದಳೆಂದ ಮೇಲೆ ಬೇಡವೆ ಹೆದರಿಕೆ ? ಮುಂದಿನ ದಿನಗಳಲ್ಲಿ ಇದು ಒದಗಿಸಿದಷ್ಟು ವಿನೋದವನ್ನು ಅವಳ ಜೀವನದಲ್ಲೇ ಇನ್ನು ಯಾವ ಸಂಗತಿಯೂ ಒದಗಿಸಿರಲಿಲ್ಲ.

-೧೫-

ಅವಳು ಮಹಾರಾಜರಿಗೆ ಹೇಳಿದ್ದಂತೆಯೇ ಅವಳ ರಾಜ್ಯ ದೊಡ್ಡದಾಗಿತ್ತು. ನೂರ್‌ಜಹಾನಳದ್ದಕ್ಕಿಂತ ಬಹಳ ವಿಶಾಲ. ಒಟ್ಟು ಭಾರತ. ಕೋಟ್ಯಾನುಕೋಟಿ ಹೃದಯಗಳ ಮೇಲೆ ಈ ಸಾಮ್ರಾಜ್ಞಿಯ ಆಡಳಿತ ದೀರ್ಘಕಾಲ ತಡೆಯಿಲ್ಲದೆ ನಡೆಯಿತು. ಸ್ಪರ್ಧೆಯಿಲ್ಲದ ನಿರಂಕುಶ ಪ್ರಭುತ್ವ.

ನಲವತ್ತನೆಯ ವಯಸ್ಸಿನಲ್ಲೂ ಅಭಿನಯ ಪ್ರಪಂಚದಲ್ಲಿ ಅವಳು ದೊಡ್ಡ ಶಕ್ತಿಯಾಗಿದ್ದಳು. ನಿಜ, ತಾರುಣ್ಯದ ತಾರೆಯರು ಅನೇಕರು

ಹುಟ್ಟಿಕೊಂಡಿದ್ದರು, ಜನರನ್ನು ಸೆಳೆಯುತ್ತಿದ್ದರು, ತಮ್ಮ ರಾಜ್ಯವನ್ನು ಸ್ಥಾಪಿಸಿ ವಿಸ್ತರಿಸುತ್ತಲೂ ಇದ್ದರು. 'ಮಾಲಾ ಮಯ ಜಗತ್' ಎನ್ನುವ ಹುಚ್ಚು ಇಳಿಯುತ್ತ ಬಂದು ಜನ ಇತರ ವ್ಯಕ್ತಿಗಳನ್ನೂ ಗಮನಿಸುತ್ತ ಬಂದಿದ್ದರೂ, ಪ್ರಧಾನ ಪದವಿ ಇನ್ನೂ ನಾಯಕಿಯದೇ. ಅವಳ ಆರೋಗ್ಯ ಕಡಿಮೆಯಾಗಿ, ಶಕ್ತಿಗುಂದಿದ್ದು ಹಿಂದಿನಷ್ಟು ಹೆಚ್ಚಾಗಿ ಕೆಲಸಮಾಡದೆಯೇ ಇತರರಿಗೆ ಅವಕಾಶ ಸಿಕ್ಕಿದ್ದಿತೋ ಎನ್ನಿಸುತ್ತಿತ್ತು. ಈಗಲೂ ಅವಳ ಚಿತ್ರ ಗಳಿಗೆ, ನಾಟಕಗಳಿಗೆ ಅದೇ ನೂಕು ನುಗ್ಗು. ಆದರೆ ಆ ಚಿತ್ರ, ನಾಟಕಗಳೇ ಕಡಿಮೆಯಾಗುತ್ತಿದ್ದುವು. ಅಲ್ಲದೆ ತಾರುಣ್ಯದಲ್ಲೇ ಸೌಂದರ್ಯವನ್ನು ಕಂಡು ಕೊಳ್ಳುವ ಮೂರನೆಯ ವರ್ಜೆಯ ಜನರನ್ನು ಅವಳು ಇತರರಿಗೆ ಕ್ರಮೇಣ ಕಳೆದುಕೊಳ್ಳುತ್ತಿದ್ದರೂ ಅಲ್ಪ ಸ್ವಲ್ಪವಾದರೂ ಅಭಿರುಚಿಯುಳ್ಳವರು ಇನ್ನೂ ಅವಳ ಅನುಯಾಯಿಗಳಾಗಿಯೇ ಇದ್ದರು. ತಿಳಿದವರು ಅವಳಿಗೂ ಇತರ ರಿಗೂ ವೈಲಿಗಳ ಅಂತರವಿದೆಯೆಂದು ಹೇಳುತ್ತಿದ್ದರು; ಅಲ್ಲದೆ, ಪ್ರೌಗ್ಗ ಮಾಗುತ್ತ ಅವಳ ಸೌಂದರ್ಯ ಒಂದು ರೀತಿಯಿಂದ ಇನ್ನೂ ಹೆಚ್ಚು ಹೆಚ್ಚು ಆಕರ್ಷಕವಾಗುತ್ತಿದೆಯೆಂದೂ ಹೇಳುತ್ತಿದ್ದರು. ಹೀಗೆಂದರೆ ಅವಳ ವಿಷಯ ವನ್ನು ವರ್ತಮಾನ ಕಾಲದಲ್ಲಿ ಹೇಗೋ ಹಾಗೆ ಭೂತಕಾಲದಲ್ಲಿಯೂ ಮಾತ ನಾಡುವುದು ಅಲ್ಲಲ್ಲಿ ಕೇಳಿಬರುತ್ತಿರಲಿಲ್ಲವೆಂದಲ್ಲ. ಏನಾದರೂ ಅವಳ ಹೆಸ ರನ್ನು ಇತರ ಹೆಸರುಗಳೊಂದಿಗೆ ಹೇಳುವಾಗ ಅವಳ ಹೊಗಳಿಕೆಯ ಹೋಲಿ ಕೆಯೇ ಇನ್ನೂ ಪದ್ಧತಿಯಾಗಿದ್ದಿತು. ಅವಳ ಅಭಿಪ್ರಾಯವನ್ನೇ ಹೇಳುವು ದಾದರೆ ತನ್ನ ಹೆಸರಿನೊಂದಿಗೆ ಇತರ ಹೆಸರಿನ ಬೆರೆಕೆಯನ್ನೇ ಅವಳು ಸೈರಿಸುತ್ತಿರಲಿಲ್ಲ. ಆದರೆ ಹೊಸಬರನ್ನು ಅವಳು ದ್ವೇಷಿಸುತ್ತಿದ್ದಳೆಂದಾ ಗಲೀ, ಅವರನ್ನು ಅಲ್ಲಗಳೆದು ಕೆಳಗೆಳೆಯುತ್ತಿದ್ದಳೆಂದಾಗಲೀ ಅಲ್ಲ. ಅವಳು ಅಷ್ಟೊಂದು ಕೀಳಲ್ಲ. ಯಾಕೆ, ಎಷ್ಟೋ ನಟಿಯರನ್ನು ಅವಳೇ ಬೆಳಕಿಗೆ ತಂದಿದ್ದಳು. ಅವರು ಮುಂದೆ ಬರುವುದರಲ್ಲೂ ಅವಳ ಸಹಾಯವನ್ನು ಹೊಂದಿದ್ದರು. ಇದರಲ್ಲಿ ಬಹಳ ಧಾರಾಳವಾಗಿದ್ದಳು. ಅವರ ಬಗ್ಗೆ ಅವಳ ಉತ್ಸಾಹ, ಉಪಕಾರಗಳನ್ನು ಕಂಡು ಆ ನಟಿಯರೇ ಆಶ್ಚರ್ಯಪಟ್ಟಿದ್ದರು. ಅಸೂಯೆ ತುಂಬಿದ ನಾಟಕಪ್ರಪಂಚದಲ್ಲಿ ಕೆಲವರು ಅವಳು ತನ್ನ ಧಾರಾಳಬುದ್ಧಿಯಿಂದ ಆತ್ಮಹತ್ಯ ಮಾಡಿಕೊಳ್ಳುತ್ತಿದ್ದಳೆಂದೇ ಹೇಳು

ತ್ತಿದ್ದರು. ಆದರೆ ಅವಳು ಗಮನಿಸುತ್ತಿರಲಿಲ್ಲ–ಅದನ್ನೆಲ್ಲ. ಹುಂ. ಅವೆಲ್ಲ ಸರಿ. ಆದರೆ ತನ್ನೊಡನೆ ಹೋಲಿಕೆ! ಅದು ಮಾತ್ರ ಅವಳಿಗೆ ಅರ್ಥವೇ ಆಗುತ್ತಿರಲಿಲ್ಲ. 'ಇದೊಂದು ದೊಡ್ಡ ಹುಮ್ಮು–ಇವಳಿಗೆ. ಒಂದು ದಿನ ಬೀಳ್ತಾಳೆ, ಕಾಣುತ್ತಾಳೆ' ಎಂದವರು ಕೆಲವರಾದರೆ, 'ಅವಳ ಹೆಮ್ಮೆ ನ್ಯಾಯವಾದದ್ದೇ; ಅವಳಿಗಲ್ಲದೆ ಇನ್ನು ಯಾರಿಗಿರಬೇಕು. ಅವಳಿಗೆ ಸರಿಗಟ್ಟೋರು ಹುಟ್ಟಿಲ್ಲ, ಹುಟ್ಟೋದೂ ಇಲ್ಲ' ಎಂದು ಅವಳನ್ನೇ ಸಮರ್ಥಿಸುತ್ತಿದ್ದವರು ಹಲವರು. ಹೀಗಿದ್ದರೂ ಅವಳು ಹೊಸ ನಟಿಯು ರನ್ನು ಕಂಡು ಅಸೂಯೆಪಡುತ್ತಿದ್ದಳು–ಅವರ ವಯಸ್ಸಿಗಾಗಿ. ಅವರಲ್ಲಿ ಗರತಿಯರಂತೂ ಅವಳ ಜೀವನವನ್ನೇ ಮತ್ತೆ ಮುಗುಚಿಹಾಕಿ ಎದೆಗುದಿ ಯನ್ನೇ ತರುತ್ತಿದ್ದರು. 'ಆಹಾ, ಎಂಥ ಪುಣ್ಯವಂತೆಯರು!' ಎಂದು ಕೊಂಡು ಮರುಗುತ್ತಿದ್ದಳು. ಆದರೆ ಇವರ ಅದೃಷ್ಟಕ್ಕೆ ನಾನೂ ಅಷ್ಟು ಕಾರಣ ಎಂದು ಹೆಮ್ಮೆಪಡುತ್ತ ಸಮಾಧಾನ ಹೊಂದುತ್ತಿದ್ದಳು. ನನ್ನ ದುಃಖದ ಬಗೆ ಇವರಿಗೆ ದಾರಿಯಾಗಲು ಸಹಾಯವಾಗಿರಬೇಕು ಎಂದು ತೃಪ್ತಿಯಲ್ಲಿ ವ್ಯಥೆಯನ್ನು ಹೂಳುತ್ತಿದ್ದಳು.

ಅವಳಿಗೆ ತಾನು ಕಡಿಮೆ ಕೆಲಸಮಾಡುತ್ತಿರುವುದು ಗೊತ್ತಿತ್ತು– ನೋವನ್ನೇ ತರುವಷ್ಟು ಗೊತ್ತಿತ್ತು. ಆದರೆ ಹೆಚ್ಚಿಗೆಗೆ ಶಕ್ತಿಯಿಲ್ಲ; ಸಹಿಸುತ್ತಿದ್ದಳು. ಇತರರು ಹತ್ತು ಚಿತ್ರ, ನಾಟಕಗಳಿಂದ ಮಾಡುವ ಪರಿಣಾಮವನ್ನು ತಾನು ಒಂದರಿಂದಲೇ ಮಾಡಬಲ್ಲಳೆಂದು ಅವಳಿಗೆ ಸಮಾ ಧಾನ, ಹೆಮ್ಮೆ. ಈ ನಂಬಿಕೆಯಲ್ಲಿ ಸತ್ಯವಿಲ್ಲದೆಯೂ ಇರಲಿಲ್ಲ. ಹಣ ಕಾಸಿನ ಸಾಕ್ಷಿಯಾದರೂ ಅವಳನ್ನೇ ಸಮರ್ಥಿಸುತ್ತಿತ್ತು. ಅವಳು ಅಪರೂಪ ವಾದಂತೆಲ್ಲ ಅವಳ ಬೆಲೆ ಹೆಚ್ಚುತ್ತಿತ್ತು, ಸಿನಿಮಾ ಜನರು ದಿನದಿನವೂ ಹೆಚ್ಚುತ್ತಿದ್ದರು, ದುಡ್ಡಿನ ಬೆಲೆ ಕಡಿಮೆಯಾಗಿ ಉತ್ಪತ್ತಿಯ ಸಂಖೆ ಹೆಚ್ಚು ತ್ತಲೇ ಇತ್ತು.

ಸಾಮಾಜಿಕವಾಗಿಯೂ ಅವಳ ಗೆಲುವು ಎಂದಿನಂತೆಯೇ ಇದ್ದಿತೆನ್ನ ಬಹುದು. ಹೋದೆಡೆಗಳಲ್ಲೆಲ್ಲ ಅವಳೇ ಇನ್ನೂ ಮುಂದಾಳು. ಹೋಗ ದೆಡೆಗಳಲ್ಲಿಯೂ ಅವಳ ಮಾತು ಬರದೆ ಇರುತ್ತಲೇ ಇರಲಿಲ್ಲ. ಕಂಡಲ್ಲಿ ಮೆಚ್ಚಿಗೆಯ ಜನರು ಸುತ್ತುಗಟ್ಟಿರುತ್ತಿದ್ದರು, ಸ್ತುತಿಸುತ್ತಲೂ ಇದ್ದರು.

ಇದು ಅವಳ ವಯಸ್ಸಿಗೆ ಅಮೃತ ಕುಡಿಸುತ್ತಿತ್ತು. ತಾನಾಗಿಯೂ ಅವಳು ಇನ್ನೂ ಯುವಕರ-ಮಧ್ಯವಯಸ್ಕರ, ಮುದುಕರ ಮಾತು ಹಾಗಿರಲಿ-ತಲೆಯನ್ನು ತಿರುಗಿಸಬಲ್ಲವಳಾಗಿದ್ದಳು, ಆ ಚೆಲುವಿನಿಂದ. ಅದು ಇನ್ನೂ ತನ್ನ ಮೋಡಿಯನ್ನು ಕಳೆದುಕೊಂಡಿರಲಿಲ್ಲ. ಎಲ್ಲಾದರೂ ಅಲ್ಪ ಸ್ವಲ್ಪ ಗಮನ ಕಡಿಮೆಯಾದಂತಿದ್ದರೆ, ಆ ಸೌಂದರ್ಯಕ್ಕೆ ಸಹಾಯವಾಗಿ ಒಂದೆರಡು ಉತ್ತೇಜನಕರವಾದ ನುಡಿ ಅವಳ ಬಾಯಿಂದ ಬಿದ್ದರೆ ಯಕ್ಷಿಣಿ ಪೂರ್ತಿಯಾಗುತ್ತಿತ್ತು. ಅವಳಿಗೆ ಈ ಸಣ್ಣ ಚೇಷ್ಟೆ ವಿನೋದವಾಗಿ ಹಿತವಾಗಿರುತ್ತಿತ್ತು. ಸುಲಭವಾಗಿ ವಿನೋದವಾಗಿಯೇ ಒಂದು ನಗುವಿನಿಂದ, ಒಂದು ಕೈಯಾಡಿಸುವುದರಿಂದ, ತಲೆಯಾಡಿಸುವುದರಿಂದ, ಬೆನ್ನು ಚಪ್ಪರಿಸುವುದರಿಂದ, ಹೇಗೆ ಅವರನ್ನು ಸೆಳೆದುಬಿಡುವುದು ಸಾಧ್ಯವಾಗಿತ್ತೋ, ಹಾಗೆಯೇ ಸ್ವಲ್ಪ ನೋಟ ಧ್ವನಿಗಳನ್ನು ಬದಲಾಯಿಸಿ ಅವೇ ಚುಟಕಗಳಿಂದಲೇ ಅವರು ಹೆಚ್ಚಿಗೆಗೆ ಹೋಗದಂತೆ ತಡೆಯುವುದೂ ಅವಳಿಗೆ ಸಾಧ್ಯವಾಗಿತ್ತು. ಹುಡುಗತನದ ಅವಿವೇಕದ ಸೂಚನೆ ಕಂಡುಬಂದಾಗ ಅವಳು 'ಹುಚ್ಚಪ್ಪ!' ಎಂದು ನಸುನಕ್ಕೇ ಅನೇಕ ಯುವಕರ ಕಾವನ್ನು ಹಲವು ಡಿಗ್ರಿಗಳಷ್ಟು ಕೆಳಗಿಳಿಸಿಬಿಡುತ್ತಿದ್ದಳು. ಪತ್ರಿಕೆಗಳು ಇನ್ನೂ ದಪ್ಪ ಅಕ್ಷರದ ಮೇಲುಬರಹದಿಂದ, ಅವಳ ವಿಷಯಗಳಿಂದ, ಚಿತ್ರಗಳಿಂದ ಬಹಳ ಜಾಗವನ್ನು ತುಂಬುತ್ತಿದ್ದುವು. ಸುದ್ದಿಯ ನಾಯಿಗಳು ಇನ್ನೂ ಸುತ್ತಲೂ ಸುತ್ತಾಡುತ್ತ ಶಾಂತಿಗೆ ಭಂಗ ತರುತ್ತಲೇ ಇದ್ದುವು. 'ಗುಪ್ತಗಾಮಿನಿ' ಗುಣವಾಚಕ ಹಾಗೆಯೇ ಇತ್ತು. ಕಾಗದಗಳ ಹೊರೆಯೇನು ಕಡಿಮೆಯಾಗಿರಲಿಲ್ಲ-ಅಂಚೆಯ ಇಲಾಖೆಗೆ ಇನ್ನೂ ಸುಗ್ಗಿಯ ಕಾಲವೇ. ಫೋಟೋಗ್ರಾಫ್, ಆಟೋಗ್ರಾಫ್ ಇತ್ಯಾದಿ ಎಲ್ಲ ಎಲ್ಲವೂ ಎಂದಿನಂತೆಯೇ. ನೋಡುವವರಿಗೆ ಅವಳ ಪ್ರಜಾರಂಜನೆ ಶಾಶ್ವತವೆಂದೇ ಅನ್ನಿಸುತ್ತಿತ್ತು.

ಆದರೂ ನಾಯಕಿಗೆ ತನ್ನ ಬಗ್ಗೆ ಕುರುಡಿರಲಿಲ್ಲ. ತನ್ನ ಹಿಡಿತವನ್ನು ಉಳಿಸಿಕೊಳ್ಳಲು ವಿಶೇಷ ಯತ್ನಗಳನ್ನು ಮಾಡದೆ ಇರಲಿಲ್ಲ. ಚೆಲುವಿನ ಮೇಲೆ ಕಾಲದ ಹಾವಳಿಯನ್ನು ತಿಳಿದುಕೊಂಡಿದ್ದಳು. ಆ ಹಾವಳಿಯನ್ನು ತಡೆಯುವ, ಅದರ ಮುದ್ರೆಯನ್ನು ಅಳಿಸುವುದರಲ್ಲಿ ಸಂತತವಾಗಿ ಶ್ರಮಿಸುತ್ತಿದ್ದಳು. ಅದು ಅವಳ ಸೌಂದರ್ಯದ ಗುಟ್ಟು. ಸೊಂಟದ ಗಾತ್ರ ಹೆಚ್ಚ

ದಂತೆ, ಹೊಟ್ಟೆ ಮುಂದೆ ಚಾಚಿಕೊಳ್ಳದಂತೆ, ಎದೆ ಜೋಲದಂತೆ, ಗಲ್ಲ 'ಡಬ್ಬಲ್' ಆಗದಂತೆ, ಕೈಕಾಲುಗಳು ಕೊರಡಾಗದಂತೆ, ವ್ಯಾಯಾಮ ವನ್ನು ಮಾಡುತ್ತಿದ್ದಳು, ಔಷಧಿಗಳನ್ನು ತೆಗೆದುಕೊಳ್ಳುತ್ತಿದ್ದಳು. ಆಕಾರ ವನ್ನು ಆಕರ್ಷಕವಾಗಿಯೇ ಹಿಡಿದಿಟ್ಟಿದ್ದಳು. ನಿಲುವಿಗೆ, ನಡೆಗೆ ವಿಶೇಷ ಗಮನ. ಚಲನೆಗೆ ಚುರುಕನ್ನು ಚುಚ್ಚುತ್ತಿದ್ದಳು-ಶ್ರಮಪೂರ್ವಕವಾಗಿ. ಕೆಂಪಿಳಿಯುತ್ತಿದ್ದ ತುಟಿಗೆ, ಕೆನ್ನೆಗೆ, ಸ್ವಲ್ಪವೇ ಸ್ವಲ್ಪ ರಂಗು ಹೆಚ್ಚಾಗಿತ್ತು. ಮೊದಲಿನ ಅಲ್ಲೊಂದು ಇಲ್ಲೊಂದು ಬಿಳಿಗುರುಳು ಬೇರು ಸಹಿತ ಕಿತ್ತು ಹಾಕಲ್ಪಟ್ಟಿದ್ದುವು. ಈಗ-ಅವು ಹೆಚ್ಚು ಹೆಚ್ಚಾಗುತ್ತಿರುವಾಗ, ಕುರುಳಿಗೂ ಕಪ್ಪು ರಂಗು, ನಯವಾಗಿ. ಹುಬ್ಬಿಗೆ ಕೊಂಚ ತಿದ್ದು. ಎದೆಗೆ ಸ್ವಲ್ಪ ಸುಧಾರಣೆ. ಅಗತ್ಯ ಕಂಡ ಕಡೆ ಸ್ವಲ್ಪವೇ ಬಿಚ್ಚಿ ತೋರಿಸುವ ಕಲೆ, ಮುಚ್ಚಿ ತೋರಿಸುವ ಕಲೆಗೆ ದಾರಿಕೊಟ್ಟಿತ್ತು. ಅವಳಿಂದ ಬಂದ ಇದೂ ಒಂದು ಹೊಸ ಫ್ಯಾಷನ್ ಆಗಿಯೇ ಪರಿಗಣಿಸಲ್ಪಟ್ಟು ಹರಡಿಕೊಳ್ಳುತ್ತಿತ್ತು. ಯಾವುದು ಹೇಗಾದರೂ ಅವಳ ಚೆಲುವಿನ ಮುಖ್ಯಾಂಶವಾದ ಆ ಕಣ್ಣುಗಳ ಸೆಳೆತದ ಬೆಳಕು ಮಾತ್ರ ಎಂದಿನಂತೆಯೇ ಇತ್ತು; ಅವೇ ಮುಖಕ್ಕೆ ಮೋಹಕವಾದ ಮೆರಗನ್ನು ಕೊಟ್ಟಿದ್ದುವು. ಯಾಕೆ, ಅವೇ ಆವಳ ವಿಶೇಷ ವ್ಯಕ್ತಿತ್ವವನ್ನು ಕಾಣಿಸುವ ಕಿಟಕಿಗಳು. ಅವುಗಳಲ್ಲಿ ಇಣಿಕಿದವ ಸೆರೆ ಯಾಗುತ್ತಿದ್ದ. ಆದರೆ ಅವಳು ಮಾತ್ರ ಅಷ್ಟನ್ನೇ ನಂಬಿಕೊಳ್ಳದೆ ಎಲ್ಲ ಭಾಗಗಳನ್ನೂ ಹೊಸದಾಗಿಟ್ಟುಕೊಳ್ಳುವ ಸೂಕ್ಷ್ಮ ಯತ್ನದಲ್ಲಿರುತ್ತಿದ್ದಳು.

ಅಲ್ಲದೆ ಚೈತನ್ಯ ಮುಪ್ಪಿನಿಂದ ಮೊಂಡಾದೀತೆಂಬ ಭಯ ಹರೆಯದವರ ಸಹವಾಸವನ್ನು ಬಯಸುತ್ತಿತ್ತು. ಅವರು ಸುತ್ತುಮುತ್ತು ಇರುತ್ತಿದ್ದರೆ, ಅವಳ ರಕ್ತ ಆರಿರದಂತಿರುತ್ತಿತ್ತು; ಯಾಕೆ, ಯುವಕರೊಡನಿದ್ದಾಗ ಇನ್ನೂ ಹೆಚ್ಚು ಬಿಸಿಯಾಗಿಯೇ ಇರುತ್ತಿತ್ತು. ಅವರೊಡನೆ ಮಾತುಕತೆ, ನಗೆ ನಲಿವುಗಳ ಸಂಪರ್ಕ ಚೈತನ್ಯವನ್ನು ಚೂಪಾಗಿ ಇರಿಸುವುದಲ್ಲದೆ ಅದಕ್ಕೆ ಹೊಸತನವನ್ನೂ ಕೊಡುತ್ತಿತ್ತು; ತನ್ನ ವಯಸ್ಸನ್ನು ಮರೆಸಿ ಹಿಂದಕ್ಕೆ ಒಯ್ಯುತ್ತಿತ್ತು; ತಾನೂ ವಯಸ್ಸಾದವಳಲ್ಲ, ಯುವತಿಯೇ,ಎನ್ನುವ ಭ್ರಾಂತಿ ಯನ್ನೇ ಉಂಟುಮಾಡುತ್ತಿತ್ತು; ಹೊರಗಿನವರಿಗೂ ನಿಜವನ್ನು ಮರೆಮಾಡು ತ್ತಿತ್ತು; ಒಂದು ಮಾತಿನಲ್ಲಿ ಕಾಲವನ್ನು ನಿಲ್ಲಿಸುತ್ತಿತ್ತು. ಮತ್ತೆ, ಅವಳಿಗೆ

ಮೆಚ್ಚಿಗೆ, ಆರಾಧನೆ, ಪೂಜೆ–ಈ ಆಸೆ, ಬೆಳೆಯುವ ತಲೆಮಾರಿನಿಂದ ಬಂದರೇ ಹೆಚ್ಚು ತೃಪ್ತಿ. ಅವರಲ್ಲವೇ ನಾಳಿನವರು, ಅವಳ ನಾಳೆಯ ಜಗತ್ತಿನವರು? ಅವರಿಂದಲಲ್ಲವೇ ತನ್ನ ಬಾಳು ಜೀವವಾಹಿನಿಯಾಗಿ ಹರಿಯಬೇಕಾದದ್ದು? ಅವರಿಗೇ ಪ್ರಾಶಸ್ತ್ಯ ಜಾಸ್ತಿ. ಅವರ ಅರ್ಪಣೆಯ ಸಂಪೂರ್ಣತೆ ಅವಳಿಗೆ ಬೇಕು, ಸ್ವಲ್ಪವೂ ಕಡಿಮೆಯದಲ್ಲ. ಲೆಕ್ಕಮಾಡಿ ಅಳೆಯದ, ನಿಷ್ಕಪಟ ವಾದ ಹೊಸ ಹುಚ್ಚು ಗಾಳಿ, ಅವರದ್ದು; ಡ್ರಾಯಿಂಗ್ ರೂಮಿನ ಫ್ಯಾನಿನ ಕೆಳಗಿನದಲ್ಲ. ಅದಕ್ಕೆ ಕೋಣೆಯ ಬಂಧನವಿಲ್ಲ, ಮಂದಗತಿಯಿಲ್ಲ. ಇಳಿ ಯುವ ಹೊಂಬೆಳಕಿನಲ್ಲಿ, ಪರ್ವತದ ಎತ್ತರದಲ್ಲಿ ನಿಂತುಕೊಂಡು, ಸ್ವೇಚ್ಛೆ ಯಾಗಿ ಸ್ವಚ್ಛವಾಗಿ ಬೀಸುವ ಈ ಹುಚ್ಚು ಗಾಳಿಯಿಂದಲೇ ಕುರುಳನ್ನು ಕೆದರಿಸಿಕೊಂಡು, ಸೀರೆಯನ್ನು ಹಾರಾಡಿಸಿಕೊಂಡು, ಮುಖಕ್ಕೆ ಕೈ ಅಡ್ಡ ತಂದು, ಅರೆಗಣ್ಣು ಬಿಟ್ಟುಕೊಂಡು, ಈ ಗಾಳಿ ಸಾಕು ಸಾಕೆನ್ನುವಂತೆ ಹರ್ಷ ಹೇರಳವನ್ನು ಎಳೆದೆಳೆದು ಎದೆಗೆ ತುಂಬಿ ಹೊರ ಚೆಲ್ಲುವ ಯೌವನದ ಚಲುವೆಯೇ ಅವಳ ಇಷ್ಟ ಚಿತ್ರ; ಅದನ್ನೇ ಬಯಸುತ್ತಿದ್ದಳು, ಅರಸು ತ್ತಿದ್ದಳು, ಅನುಸರಿಸುತ್ತಿದ್ದಳು; ಆ ಆನಂದವನ್ನೇ ಅನುಭವಿಸುತ್ತಿದ್ದಳು. ಈ ಪ್ರಾಯದ ಪ್ರವಾಹ ತಾನಾಗಿಯೇ ಸುತ್ತ ಹತ್ತು ಕಡೆಗಳಿಂದ ಇವಳ ಕಟ್ಟೆಗೇ ಹರಿಯುತ್ತಿದ್ದಿತೆಂದ ಮೇಲೆ ಅವಳು ಕೂಡಿಟ್ಟುಕೊಳ್ಳದೆ ಇರು ತ್ತಾಳೆಯೇ? ಕಟ್ಟೆಯ ಕೆಲಸವೇ ಅದು. ಕೂಡಿಡುವುದಲ್ಲದೆ ಕೋಡಿ ಹರಿಯಿಸುತ್ತಲೂ ಇದ್ದಳು–ತಾನು ತುಂಬಿ ತುಳುಕಿ.

ವಯಸ್ಸಿನ ಚಾಪಲ್ಯವೂ ಇದಕ್ಕೊಂದು ಕಾರಣ. ಹಾಯ್ದು ಹೋಗು ತ್ತಿರುವ ಸುಖಗಳನ್ನು ಸವಿಯುವುದಕ್ಕೆ ಸಂಕಟಪಡುವುದು ಇಳಿ ವಯಸ್ಸಿನ ವೈಶಿಷ್ಟ್ಯ. ನಾಯಕಿಗೂ ಈ ಒಡಲ ಚಪಲ ಇತರರಿಗಿದ್ದಂತೆಯೇ. ಯಾಕೆ, ತೃಪ್ತಿಯ ಅವಕಾಶವಿರುವವರಿಗೆ, ಹೆಚ್ಚಾಗಿರುವವರಿಗೆ ಚಪಲ ಇನ್ನೂ ಹೆಚ್ಚು. ಅವಳಿಗೆ ಅವಕಾಶವಿದ್ದೂ ಇಲ್ಲದ ಹಾಗಿದ್ದು ತೋಳಲು ಮತ್ತೂ ಜಾಸ್ತಿ. ಅಷ್ಟು ಕಾಲದ ಹಸಿವು ಬೇರೆ. ಕಾಲ ಕಳೆದು ಹೋಗು ತ್ತಿರುವಲ್ಲಿ ನ್ಯಾಯವಾಗಿಯೇ ಆತುರ. ಈ ಸ್ಥಿತಿಯಲ್ಲಿ ಅವಳನ್ನು ಯೌವ ನದ ಸಾಮೀಪ್ಯ, ಸಲಿಗೆ, ಸ್ತೋತ್ರಗಳು ಕೆಣಕುತ್ತಿದ್ದಂತೆಯೇ ವಿಚಿತ್ರವಾಗಿ ತೃಪ್ತಿಪಡಿಸುತ್ತಲೂ ಇದ್ದುವು. ಅಲ್ಲದೆ ಆ ಯುವಕ ಯುವತಿಯರ

ಪರಸ್ಪರ ನಡೆ ನುಡಿಗಳೂ ಇವಳಿಗೆ ಅಸೂಯೆಯನ್ನುಂಟುಮಾಡಿದಂತೆಯೇ ಆವೇಶವನ್ನೂ ತರುತ್ತಿದ್ದುವು–ಒಗಚಾದ 'ಬೀರ್' ಮದ್ಯದ ಹಾಗೆ. ಈ ಸವಿಯೂಟದಲ್ಲಿ ಅವಳು ಎಚ್ಚರಿಕೆಯಿಂದ ಇದ್ದರೂ, ಧಾರಾಳವಾಗಿಯೂ ಇದ್ದಳು. ಇದು ಅವಳಿಗೇ ಸರಿಯಾಗಿ ಅರ್ಥವಾಗಿರದಿದ್ದುದರಿಂದಲೋ ಏನೋ ತಪ್ಪಾಗಿ ಕಾಣುತ್ತಿರಲಿಲ್ಲ. ಯಾಕೆ, ಅವಳು ಆ ಬಗ್ಗೆ ಯೋಚಿಸುತ್ತಲೇ ಇರಲಿಲ್ಲವೆನ್ನಬಹುದು. ಅವಳಿಗೆ ಇದು ಯೌವನದೊಂದಿಗಿರುವಾಸೆಯು ಯೌವನದ ಜತೆಯಾಟ, ಅಷ್ಟೆ–ಜನಸಾಮಾನ್ಯಕ್ಕೆ ಕಂಡಂತೆ. ಬಣ್ಣದ ಚಿಟ್ಟೆಗಳು ಹೂವಿನ ಸುತ್ತ ಹಾರಾಡಿದಂತೆ ಇವರು ತನ್ನ ಸುತ್ತ ಓಡಾಡುತ್ತಿದ್ದರೆ ಅವಳಿಗೆ ಒಬ್ಬೊಬ್ಬ ಯುವಕ ಅವಳೇ ಹೆತ್ತು, ಹೊತ್ತು, ಕಳೆದುಕೊಂಡ ಚಂದುವಿನ ನೆನಪನ್ನು ತರುತ್ತಿದ್ದ; ಒಬ್ಬೊಬ್ಬ ಯುವತಿ, ಅವಳಿಗೆ ಹಡೆಯುವ ಸೌಭಾಗ್ಯವಿರದೆ ಬರಿಯ ಹಂಬಲಾಗಿಯೇ ಉಳಿದಿದ್ದ ಹೆಣ್ಣನ್ನು ಮನಸ್ಸಿಗೆ ತರುತ್ತಿದ್ದಳು. ಈ ಸಮೂಹ ತನ್ನ ಊಹೆಯ ಮಕ್ಕಳನ್ನು ಮುಂದೆ ನಿಲ್ಲಿಸಿ ನೋವನ್ನೂ ಸಂತೋಷವನ್ನೂ ಒಂದೇ ಕಾಲದಲ್ಲಿ ತರುತ್ತಿತ್ತು. ಆದರೆ ಕೆಲವರು 'ಇದು ಇವಳದ್ದೊಂದು ದೌರ್ಬಲ್ಯ, ಹುಚ್ಚು, ಸ್ವಾರ್ಥಪರತೆಯ ಒಂದು ಅವತಾರ; ಈ ವಿನೋದ ಅಷ್ಟು ಚೆನ್ನಾಗಿಲ್ಲ' ಎಂದು ಆಕ್ಷೇಪಿಸುತ್ತಿದ್ದರು. 'ಅವಳು ಹೊಸಬರಿಗೆ ಉತ್ತೇಜನ ಕೊಡೋದಕ್ಕೆ ಒಂದು ಕಾರಣ, ಅವರು ಸುತ್ತುಗಟ್ಟಿಕೊಂಡಿರಲಿ ಅನ್ನೋ ಆಸೆಯೂ ಕೂಡ' ಎಂದು ತೀರ್ಮಾನ ಹೇಳುತ್ತಿದ್ದರು. ಇನ್ನು ಕೆಲವರು 'ಪಾಪ, ಎಷ್ಟೋ ಹಸಿದ ಜೀವ. ಒಂದು ತರಹ ಒದ್ದಾಡುತ್ತಾಳೆ. ಇನ್ನೂ ಯಾವ ಅರಿವೂ ಇಲ್ಲ. ಅವಳಿಗಿರೋ ಅವಕಾಶದಲ್ಲಿ ಇನ್ನು ಯಾರಾದರೂ ಆಗಿದ್ದರೆ ಎಷ್ಟೆಷ್ಟು ಹೊಲಸಾಗುತ್ತಿದ್ದರೋ. ಇವಳ ಸಂಯಮ ಆಶ್ಚರ್ಯವಾದದ್ದು. ಹುಂ, ಇವಳಿಗೆ ಸಂಸಾರವೊಂದೂ ಇದ್ದಿದ್ದರೆ! ಗಂಡ, ಮಗ–ಮಕ್ಕಳು ಇವರ ಮೇಲೆ ಎಷ್ಟು ಪ್ರೇಮವನ್ನು ಕರೆಯುತ್ತಿದ್ದಳೋ. ಆ ಪ್ರೇಮ, ಆ ಹಸಿವು ಎರಡೂ ಸ್ವಲ್ಪ ರೂಪಾಂತರ ಹೊಂದಿ ಹೀಗೆಲ್ಲ ಕಾಣುತ್ತೆ, ಆಶ್ಚರ್ಯವೇನು' ಎಂದು ಕನಿಕರಿಸುತ್ತಿದ್ದರು; ಅವಳ ಅಲ್ಪ ಸ್ವಲ್ಪದ ಅತಿರೇಕವನ್ನು ಕ್ಷಮಿಸುತ್ತಿದ್ದರು. ಈ ಆಟವೂ ಅವಳ ಪ್ರಕಟನೆಯನ್ನು ಹೆಚ್ಚಿಸುತ್ತಿದ್ದಿತು.

ಅವಳ ಪ್ರಚಾರಕ್ಕೆ ಇನ್ನೂ ಕೆಲವು ದಾರಿಗಳಿದ್ದುವು. ಗುಪ್ತಗಾಮಿನಿ ಯೆಂಬ ಹೆಸರನ್ನು ಕಳೆದುಕೊಳ್ಳದೆ, ಏನೋ ಅಲಕ್ಷ್ಯದಿಂದ ಅವಳ ಅಭೇದ್ಯ ವಾದ ಏರಿಯಲ್ಲಿ ಆಕಸ್ಮಾತ್ತಾಗಿ ತೂತಾದಂತೆ, ವಸ್ತು ಕಳವಾದಂತೆ ತನ್ನ ಕೆಲವು ಸಮಾಚಾರಗಳು ಹೊರಗೆ ಬರುವುದಕ್ಕೆ ಅವಕಾಶ ಕೊಡುತ್ತಿದ್ದಳು. ಸುದ್ದಿಗಾರರಿಗೆ ಈ ರೀತಿ ಕಳುವಿನಿಂದ ಸಂಪಾದಿಸಿದ ಸಮಾಚಾರ ಬಹಳ ಬೆಲೆಯಾದುದಲ್ಲವೆ? ಅದಕ್ಕೆ ವಿಶೇಷ ಪ್ರಕಟನೆ ದೊರೆಯುತ್ತಿತ್ತು. ಏನೋ ತನಗೆ ಬೇಕಾದವರಲ್ಲಿ ಗುಟ್ಟಾಗಿಯೇ ಹೇಳಿದಂತೆ 'ಆದರೆ ಸುದ್ದಿಗಾರರಿಗೆ ತಲುಪುವಂತೆ ಒಂದೊಂದು ಮಾತನ್ನು ಹೊರಗೆಡಹುತ್ತಿದ್ದಳು. ಅದಕ್ಕೆಂ ತಹ ವಿಶೇಷ ಮನ್ನಣೆ! ಏನು ಅದರ ಕೂಗಾಟ! ಮಾಲಾಳ ಹೆಸರಿನ ಮೇಲೆ ಸ್ವಲ್ಪ ಧೂಳು ಬಿದ್ದ ಕಡೆಯಲ್ಲಿ ಈ ಮಾತಿನ ಉಸಿರು ಒರಸುವ ಕೆಲಸಮಾಡುತ್ತಿರಲೆಂದು ಅವಳ ಇಷ್ಟವಾಗಿತ್ತು.

ಈಚೀಚೆಗೆ ಕೆಲವೇ ಕೆಲವು ಸ್ವಾರಸ್ಯವಾದ ವಿಲಕ್ಷಣ ನಡತೆಗಳೂ, ಒಂದೆರಡು ಆಕರ್ಷಣೀಯವಾದ ಸ್ವಭಾವ ಚೇಷ್ಟೆಗಳೂ ವರದಿಯಾಗಿದ್ದುವು. ಹಿಂದೆ ಯಾವಾಗಲೋ ಒಂದೊಂದು ಪಾರ್ಟಿಗಳಿಗೆ ಹೋಗುತ್ತಿದ್ದವಳು ಈಗ ಸ್ವಲ್ಪ ಹೆಚ್ಚಿಸಿಕೊಂಡಿದ್ದಳು. ವರ್ಷದಲ್ಲಿ ಒಂದೆರಡು ಸಾರ್ವಜನಿಕ ಸಮಾರಂಭಗಳಲ್ಲೂ ಕಾಣಿಸಿಕೊಳ್ಳುತ್ತಿದ್ದಳು. ಕೆಲವು ಸಾಮಾಜಿಕ ಚಟು ವಟಿಕೆಗಳಿಗೆ ತನ್ನ ಹೆಸರನ್ನೂ ಹಣವನ್ನೂ ಕೊಡುತ್ತಿದ್ದಳು. ಬಹಳ ವಿರಳ ವಾಗಿ ಒಂದೊಂದು 'ಇಂಟರ್‌ವ್ಯೂ' ಕೂಡ ಕೊಟ್ಟು ಕೋಲಾಹಲವನ್ನೆ ಬ್ಬಿಸುತ್ತಿದ್ದಳು. ಆದರೂ ಒಟ್ಟಿನಲ್ಲಿ ಅವಳ ಬಿಗಿ, ಗಾಂಭೀರ್ಯ, ಗುಟ್ಟು ಈ ಸ್ವಭಾವ ಇನ್ನೂ ಗಾಢವಾಗಿಯೇ ಇತ್ತು. ಗಂಟಲು ನೆನೆಯುವಷ್ಟು, ಆದರೆ ದಾಹವಡಗದಷ್ಟು ತನ್ನ ಪ್ರಚಾರವನ್ನು ಹನಿಸುತ್ತಿದ್ದಳು.

ಇದೂ ಅಲ್ಲದೆ ಅರ್ಧ ಇಷ್ಟವಾಗಿ, ಅರ್ಧ ಹೆಸರಿಗಾಗಿ ಬೊಂಬಾ ಯಿನ ದೊಡ್ಡ ಕಲಾಭಿಮಾನಿ, ಆಶ್ರಯದಾತರಲ್ಲಿ ಒಬ್ಬಳು ಎಂದೆನಿಸಿ ಕೊಂಡಳು. ಹೊಸ ನಟ ನಟಿಯರಂತೂ ಅವಳ ವಿಶೇಷ ಪೋಷಣೆಗೊಳ ಗಾದವರು, ಬಹಳ ಎಚ್ಚರಿಕೆಯ ಜವಾಬ್ದಾರಿಯಾಗಿದ್ದರಲ್ಲ. ಸಾಹಿತ್ಯ ಸಂಗೀತಗಳಿಗೂ ಬೇಕಾದಷ್ಟು ಬಿಡುಗೈ ಉತ್ತೇಜನ ದೊರೆಯುತ್ತಿತ್ತು. ನಟ ನಟಿಯರಿಗೆ ಇವಳಿಂದ ಕಂಪನಿಗಳ ಪರಿಚಯ ಹೇಗೆ ಆಗುತ್ತಿದ್ದಿತೋ

ಹಾಗೆಯೇ ಸಾಹಿತಿಗಳಿಗೆ, ಸಂಗೀತಗಾರರಿಗೆ, ಮೇಲು ಸಮಾಜದ ಮತ್ತು ಸಾರ್ವಜನಿಕರ ಪರಿಚಯವಾಗುತ್ತಿದ್ದಿತು. ನಟಿಯರು ನಡೆಯುವ ಜಾಹೀರಾತುಗಳಂತೆ ಅನುಕರಣದಿಂದ ; ಸಾಹಿತಿಗಳು ತಮ್ಮ ವಿಮರ್ಶಾತ್ಮಕ ಬರಹಗಳು, ಭಾಷಣಗಳು, ಪುಸ್ತಕಗಳ 'ಅರ್ಪಣೆ'ಗಳು ಕೆಲವು ಕವಿತೆಗಳೂ ಕೂಡ–ಇವುಗಳಿಂದ ; ಸಂಗೀತಗಾರರು ಅವಳ ನಾಟಕದ ಮಟ್ಟುಗಳನ್ನು ಸಭೆಗಳಲ್ಲಿ, ರೇಡಿಯೋಗಳಲ್ಲಿ, ಗ್ರಾಮಫೋನ್‌ಗಳ ಮೂಲಕ ಹಾಡುವುದರಿಂದ, ಅವಳು ಕೊಟ್ಟ ಪ್ರೋತ್ಸಾಹಕ್ಕೆ ಪ್ರಕಟನೆಯ ಬೆಲೆಯನ್ನು ಕೊಡುತ್ತಿದ್ದರು. ಅವಳ ಕಲಾಭಿಮಾನ ಎರಡೊಂದು ಕೆಲಸ ಮಾಡುತ್ತಿತ್ತು. ಹೀಗೆಂದು ಪ್ರಚಾರದ ಆಸೆಯಿಂದ ಅಯೋಗ್ಯರನ್ನು ಆರಿಸಿಕೊಳ್ಳುತ್ತಿರಲಿಲ್ಲ. ಎಲ್ಲರಿಗೂ ಅವಳ ಅಭಿರುಚಿಯಲ್ಲಿ ಬಹಳ ಭರವಸೆ. ಕಲಾವಿದರಿಗೆ ಅವಳ ಪರಿಚಯ ದೇಶದ ಎದೆಗೆ ರಹದಾರಿ, ಪ್ರಜಾರಂಜನೆಯ ಸಮುದ್ರದ ಮೇಲೆ ತಮ್ಮ ಹಡಗನ್ನು ನಡೆಸುವ ಸನದು. ಚಿತ್ರಗಾರರೂ ಸಹಾಯ ಪಡೆದವರೆ, ಮಾಡಿದವರೆ. ಅಷ್ಟಿಷ್ಟು ಚಿತ್ರಗಳನ್ನು ಕೊಳ್ಳುವ ಹುಚ್ಚು ಇವಳಿಗಿದ್ದಿತು. ಅವರಿಗಾಗಿಯೂ ಕೊಂಡದ್ದುಂಟು. ಆದರೆ ಅವರು ಬಹಳವಾಗಿ ನಿರೀಕ್ಷಿಸುತ್ತಿದ್ದ, ಬೇಡುತ್ತಿದ್ದ ಸಹಾಯವೆಂದರೆ ಅವಳನ್ನು ಚಿತ್ರಿಸುವುದು. ಅವಳಿಗೂ ಅದು ಇಷ್ಟವೇ. ಈಗಾಗಲೇ ಅವಳನ್ನು ನಿಜ ಜೀವನದಲ್ಲಿ, ಆಶ್ರಮದ ಸರಳ ಸುಕೋಮಲೆ ಶಕುಂತಲೆಯಾಗಿ, ಕುದುರೆಯ ಮೇಲೆ ಕುಳಿತು ಕತ್ತಿ ಹಿಡಿದಿದ್ದ ವೀರ ರಮಣಿ ಝಾಂಸಿ ಲಕ್ಷ್ಮೀಬಾಯಿಯಾಗಿ, 'ಸತಿ'ಗಾಗಿ ಹೊರಟ ವೀರ ಪ್ರಣಯಿನಿ ಸಂಯುಕ್ತೆಯಾಗಿ, ಕೀಚಕನ ಮೇಲೆ ಸಿಡಿದೆದ್ದ ಸೈರಂಧ್ರಿಯಾಗಿ, ಸಾರಂಗಧರನ ಮುಂದಿನ ಚಿತ್ರಾಂಗಿಯಾಗಿ, ಮರುಳಾದ ಋಷಿಪತ್ನಿ ಅಹಲ್ಯೆಯಾಗಿ, ಜಹಂಗೀರನ ನೂರ್‌ಜಹಾನಳಾಗಿ, ಕಠೋರ ಚಲುವೆ ಆನಂದಿಬಾಯಿಯಾಗಿ, ಯಮಧರ್ಮರಾಯನನ್ನು ದೈನ್ಯದಿಂದ ಆದರೆ ಧೈರ್ಯದಿಂದ ಹಿಂಬಾಲಿಸುತ್ತಿದ್ದ ಸಾವಿತ್ರಿಯಾಗಿ–ಹುಂ, ಕೆಲವೆ ಹೇಳುವುದಕ್ಕೆ ? ಹಲವಾರು ಚಾರಿತ್ರಿಕ ಪೌರಾಣಿಕ ಸಾಮಾಜಿಕ ಪಾತ್ರಗಳಲ್ಲಿ ಚಿತ್ರಿಸಲ್ಪಟ್ಟಿದ್ದಳು. ಆ ಚಿತ್ರಗಳು ಎಷ್ಟೋ ಸ್ಟೂಡಿಯೋಗಳಲ್ಲಿ, ಚಿತ್ರಶಾಲೆಗಳಲ್ಲಿ ತೂಗಾಡುತ್ತಿದ್ದುವು. ಇನ್ನೂ ಈಗಲೂ ಚಿತ್ರಗಾರರು ಚಿತ್ರದ ಕಾರ್ಡುಗಳವರು, ಕ್ಯಾಲೆಂಡರುಗಳವರು, ತಮ್ಮ ಸಾಮಾನುಗಳ ಹೊದಿಕೆಗಳಿಗಾಗಿ

ಇತರ ವ್ಯಾಪಾರಸ್ಥರು, ಈ ಚಿತ್ರಗಳ ಹಕ್ಕನ್ನು ಕೇಳಿ, ಇಲ್ಲ ಅಸ್ಕಿಸಿ ಕೊಂಡು, ಈ ಚಿತ್ರಗಳನ್ನೇ ಸ್ವಲ್ಪ ಕದ್ದು ಕಳಚಿ ಮಾರ್ಪಡಿಸಿ ಉಪ ಯೋಗಿಸಿಕೊಂಡು ಲಾಭ ಪಡೆಯುತ್ತಿದ್ದರು. ಇನ್ನೂ ಈಗಲೂ ಚಿತ್ರ ಗಾರರು ಹಿಂದಿನಂತೆಯೇ ಬರುತ್ತಿದ್ದರು–ಈ ಭಿಕ್ಷೆಗಾಗಿ. ಇದು ಎಲ್ಲಿ ಕ್ಕಿಂತಲೂ ಹೆಚ್ಚಾಗಿ ಅವಳಿಗೆ ತನ್ನ ಸೌಂದರ್ಯ ಆಕರ್ಷಣೆಗಳು ಅಚ್ಚಳಿಯು ದಿನೆಯೆಂಬ ಭರವಸೆ, ತೃಪ್ತಿ, ಸಂತೋಷಗಳನ್ನು ತರುತ್ತಿತ್ತು.

ಇತ್ತೀಚೆಗೆ ಪರಿಚಯವಾಗಿದ್ದ ಈ ಕಲಾವಿದರ ಸಮೂಹದಲ್ಲಿ ಅವಳಿಗೆ ಮುಖ್ಯವಾಗಿದ್ದವನು ಒಬ್ಬ ತರುಣ ಚಿತ್ರಗಾರ. ಕಂಡ ಕೂಡಲೆ ಅವನ ಮುಖ ಸೆಳೆದಿತ್ತು–ಹಳೆಯ ಪರಿಚಯದಂತೆ. ತಟ್ಟನೆ ಹೊಳೆದ ಯೋಚನೆ 'ಚಂದುವಿರಬಹುದೆ?' ಎಂಬುದು. ಹಿಂದೆಯೂ ಎಷ್ಟೋ ಬಾರಿ ಹೀಗಾಗಿ ನಿರಾಸೆಯಾದುದು ಅವಳ ಮನಸ್ಸಿನಲ್ಲಿದ್ದಿತು. ಆದರೆ ಈ ಕುತೂಹಲವೆಲ್ಲಿ ಹೋದೀತು? ಅದೂ ಇವನಿಗೆ ಅವನಿಗಾಗಬಹುದಾಗಿದ್ದಷ್ಟೇ ವಯಸ್ಸಾ ದಂತೆ ಕಂಡಿದ್ದಾಗ? ಪರಿಚಯ ಮಾಡಿಕೊಟ್ಟವರು 'ಈತ ಒಬ್ಬ ತರುಣ ಚಿತ್ರಗಾರ' ಎಂದು ಮಾತ್ರ ಹೇಳಿದ್ದಾಗ ಅವಳು ಸ್ವಲ್ಪ ಆತುರದಿಂದಲೇ 'ಹೆಸರು?' ಎಂದು ಕೇಳಿದ್ದಳು. ಅವನು 'ರಾಧಾಕೃಷ್ಣ ಪುಣೇಕರ್' ಎಂದು ಹೇಳಿಕೊಂಡಾಗ ಅವಳ ಎದೆ ಇಳಿದುಹೋಗಿದ್ದಿತು.

"ಅಂದರೆ ಪುಣೆಯೋರೇಯೋ?" ಕುತೂಹಲ ಇನ್ನೂ ತಪ್ಪಿರಲಿಲ್ಲ.

"ಅಷ್ಟಲ್ಲವೆ!" ಇವೇಕೆ ಕೇಳುತ್ತಾರೆ, ಹೆಸರಿನಿಂದಲೇ ಗೊತ್ತಾಗುವು ದಿಲ್ಲವೆ ಎನ್ನುವಂತೆ ನಸುನಕ್ಕಿದ್ದ.

"ಓ," ಆಶಾಭಂಗದಿಂದ ಸಪ್ಪೆಯಾದಳು. ಆದರೆ ಪ್ರಶ್ನೆ ತಪ್ಪಲಿಲ್ಲ. "ಅಥವ ನೆಲೆಸಿರೋದು ಮಾತ್ರ ಅಲ್ಲೋ ಅಂತ ವಿಚಾರಿಸಿದೆ ಅಷ್ಟೆ."

"ನಮ್ಮ ತಂದೆ ಎಷ್ಟೋ ಕಡೆ ಓಡಾಡಿದಾರಂತೆ, ವ್ಯಾಪಾರದ ಮೇಲೆ."

"ತಂದೆಯೋರ ಹೆಸರು?"

"ಪಾಂಡುರಂಗ ಪುಣೇಕರ್; ಪುಣೇಲೇ ಇದಾರೆ."

"ಹುಂ," ನಿರುತ್ಸಾಹದಿಂದ. "ನಿಮ್ಮ ತಾಯಿಯೂ ಅಲ್ಲೇ ಇರ ಬೇಕು," ತಾಯಿಯ ವಿಷಯವನ್ನು ಕೇಳುತ್ತಿದ್ದುದು ಯಾವಾಗಲೂ ಅಂಜಿಕೆಯಿಂದಲೇ.

"ಇಲ್ಲ. ಅವರು ಆಗಲೇ, ನಾನು ಮಗುವಾಗಿದ್ದಾಗಲೇ ತೀರಿ ಕೊಂಡರು."

"ತೀರಿಕೊಂಡರೆ?"

"ಹುಂ."

"ಛೆ! ಛೇ! ಅನ್ಯಾಯ! ....ಮತ್ತೆ, ಪಾಪ ನಿಮ್ಮ ತಂದೆಯೋರೆ ಸಾಕಿ ಸಲಹಿ........"

"ಹೂಂ; ಆದರೆ ಆಗಿನಿಂದಲೂ ದೊಡ್ಡೋನಾಗೋವರೆಗೂ ಬೋರ್ಡಿಂಗ್ ಸ್ಕೂಲಿನಲ್ಲೇ ಬಿಟ್ಟುಬಿಟ್ಟಿದ್ದರು."

"ಹಾಗೋ; ಸರಿ. ಇನ್ನೇನು ಮನೆ ಮಾತು ಮರಾಠಿಯೇ," ಇದನ್ನು ಯಾಕೆ ಕೇಳುತ್ತಿದ್ದೇನೆ-ವ್ಯರ್ಥವಾಗಿ ಎಂದು ಅವಳಿಗೆ ಅನ್ನಿಸು ತ್ತಿತ್ತು. ಆದರೂ ಕೇಳಬೇಕಾಗಿದ್ದ ಪ್ರಶ್ನೆಗಳಲ್ಲೊಂದು. ಕುತೂಹಲ ಪೂರ್ತಿಯಾಗಿ ಅಡಗಿರಲಿಲ್ಲ.

"ಅಷ್ಟೇ, ನಂಗೆ ಬರೋದು ಅದೊಂದೇ ಅನ್ನಿ-ಬೋರ್ಡಿಂಗ್‌ನಲ್ಲಿ ಕಲಿತದ್ದು, ಇಂಗ್ಲಿಷ್ ಬಿಟ್ಟರೆ. ನಮ್ಮ ತಂದೆಯೋರಿಗೆ ಅಂದರೆ ಎಷ್ಟೋ ಭಾಷೆ ಚೆನ್ನಾಗಿ ಬರುತ್ತೆ-ಆರೇಳು. ನಂಗೂ ಕೊಂಚ ಕೊಂಚ ಗೊತ್ತಾ ಗುತ್ತೆ. ಆದರೆ ನಾವು ಆಡೋದು ಮರಾಠಿಯೇ."

ಹೀಗೆ ಸವಾಲು ಮುಗಿದುಹೋಗಿತ್ತು. ಅವಳಿಂದ ನಿಟ್ಟುಸಿರನ್ನು ತಂದಿತ್ತು-ತುಂಬಿದ ಬಲೂನಿನಿಂದ ಗಾಳಿ ಹೋದಂತೆ. 'ಹುಂ, ಅದೇ ನನ್ನ ಭ್ರಾಂತಿ-ಇನ್ನೊಂದು ಬಾರಿ' ಎಂದುಕೊಂಡಿದ್ದಳು. ನಿರಾಸೆ ಪೂರ್ತಿಯಾಗಿತ್ತು. ಆದರೆ ಆ ಹುಡುಗನಲ್ಲಿದ್ದ ಆಸಕ್ತಿ ಅಳಿದಿರಲಿಲ್ಲ. ಅಂತಹ ವ್ಯಕ್ತಿ ಅವನು. ಧೃಡಾಂಗ, ದಿಟ್ಟವಾದ ನಿಲುವು, ಆಕರ್ಷಣೀಯ ವಾದ ಗಂಡು ಚೆಲುವು, ಸರಳವಾದ ನಡತೆ. ಅವಳಿಗೆ ಹಿತವಾಗಿತ್ತು. ಅಂತೂ ಆ ಬಗೆಯ ಪ್ರಶ್ನೆಗಳನ್ನು ಬಿಟ್ಟು ಅವನ ವಿದ್ಯಾಭ್ಯಾಸ, ಕಲಾ ಭ್ಯಾಸ ಇನ್ನೂ ಏನೇನನ್ನೋ ಕೇಳಿದ್ದಳು. ಉತ್ತರಗಳನ್ನು ಗಮನಕ್ಕೇ ತಂದುಕೊಂಡಿರಲಿಲ್ಲ. ಅವಳ ಆಸಕ್ತಿಯನ್ನು ಕಂಡು ಅವನಿಗೆ ಅತ್ಯಾಶ್ಚರ್ಯ ವಾಗಿತ್ತು. ಅಂಥ ಪ್ರಸಿದ್ಧ ನಟಿ ಎಷ್ಟು ಬಿಗುಮಾನದಿಂದ ಇರುತ್ತಾಳೋ, ಆಗ ತಾನೆ ಹುಟ್ಟುತ್ತಿದ್ದ ತನ್ನಂತಹ ಕಲಾವಿದನನ್ನು ಕಣ್ಣೆತ್ತಿಯೂ ನೋಡು

ತ್ತಾಳೋ ಇಲ್ಲವೋ, ಎಂದು ಬೆದರಿದವನಿಗೆ ಅವಳ ಸರಳತೆ, ಬಾಯಿ ತುಂಬ ಮಾತು ಬಹಳ ಉತ್ತೇಜನವನ್ನು ಕೊಟ್ಟಿದ್ದಿತು. ಅವನು ತನ್ನ ವಿಷಯವನ್ನೆಲ್ಲ ಬಾಯಿ ಬಿಚ್ಚಿ ಹೇಳಿಕೊಂಡಿದ್ದ. ಅವಳಿಗೆ ಆಗ ಈಗ ಗೊತ್ತಾದ ಅಂಶಗಳೆಂದರೆ; ಅವನೇನು ಪುಣ್ಯವಂತನಲ್ಲ, ಅವನಿಗೆ ಚಿಕ್ಕಂದಿನಿಂದಲೂ ಕಲೆಯ ಮೇಲೆ ಮನಸ್ಸು. ಪುಣೆಯಲ್ಲಿ ಸಾಕಾದಷ್ಟು ಸಂಪಾದನೆಯಿರಲಿಲ್ಲ. ಬೊಂಬಾಯಿನಲ್ಲಿ ತನ್ನ ಕಲೆಯಿಂದ ಜೀವನ ನಡೆಸಲು ಬಂದಿದ್ದ. ಅವನ ಕಲೆ ಮುಂದುವರಿಯುತ್ತಿತ್ತು; ಬಾಳಿಗೆ ಸಹಾಯವಾಗಿತ್ತು. ಆದರೆ ಇನ್ನೂ ಪ್ರಸಿದ್ಧವಾಗಿರಲಿಲ್ಲ, ಗಿರ್‌ಗಾಂನಲ್ಲಿ ಅವನ ಸ್ಟ್ಯುಡಿಯೋ ಇತ್ತು.

ಒಂದು ಭಾಗದಿಂದ ಇವನಲ್ಲಿ ಉತ್ಸಾಹ ಮುಗಿದುಹೋಗಿದ್ದರೂ ಇನ್ನೊಂದು ಭಾಗ ಅವಳನ್ನು ಬಿಡಲಿಲ್ಲ. ಅವನ ವ್ಯಕ್ತಿತ್ವ ಅವಳನ್ನು ಸೆರೆಹಿಡಿದಿತ್ತು; ಅವಳದ್ದು ಅವನನ್ನು ಹಿಡಿದಿದ್ದಂತೆ. ಮಾತಿಗೆ ಮೊದಲು ಸ್ವಲ್ಪ ಅತಿ ನಮ್ರತೆ ಕಂಡಿದ್ದರೂ ಬೇಗಲೇ ಆತ್ಮಭರವಸೆಯ ಸ್ವತಂತ್ರ ನಡತೆ ಅವನ ಬೆಲೆಯನ್ನು ಹೆಚ್ಚಿಸಿದ್ದಿತು. 'ಇವನು ಆಶ್ರಯಕ್ಕಿಂತ ಹೆಚ್ಚಾಗಿ ಸ್ನೇಹವನ್ನು ಬಯಸುತ್ತಾನೆ' ಎಂದುಕೊಂಡಿದ್ದಳು. ಈ ಅಸಾಮಾನ್ಯತೆ ಅವಳಿಗೆ ಅಷ್ಟೊಂದು ಹಿತವಾಗಿರದಿದ್ದರೂ ಅವನನ್ನು ಸೆಳೆದುಕೊಳ್ಳುವ ಆಸಕ್ತಿಯನ್ನು ಹೆಚ್ಚಾಗಿಸಿದ್ದಿತು. ಹಾಗೂ ಸ್ವಲ್ಪ ಸಲಿಗೆಗೆ ಅರ್ಹನೆನ್ನುವ ಅಭಿಪ್ರಾಯವನ್ನು ಹುಟ್ಟಿಸಿತ್ತು. ಅಲ್ಲದೆ ಅವನ ಕುಂಚ ಚುರುಕೆಂದೂ, ಮುಂದೆ ಬರತಕ್ಕವನೆಂದೂ ಕೇಳಿದ್ದ ಮಾತು ಅವಳ ಆದರದಲ್ಲಿ ಗೌರವವನ್ನೂ ಬೆರೆಸಿತ್ತು. ಅಂತಹವನು ತನ್ನೊಡನೆ ತನ್ನ ಸುತ್ತ ಇರಬೇಕು, ಚೆನ್ನ, ಎಂದೆನಿಸಿತ್ತು.

ಅವನ ಸ್ವಭಾವ ಬಹಳ ತಗ್ಗಿ ನಡೆಯುವುದಾಗಿರದಿದ್ದರೂ ಅದು ಅವಳ ಬಗ್ಗೆ ಅವನ ಮೆಚ್ಚಿಗೆಯನ್ನೇನು ಕಡಿಮೆ ಮಾಡಿರಲಿಲ್ಲ. ಎಂದೋ ಹುಡುಗನಿಂದಲೂ ಅವಳ ಮೋಡಿಗೆ ಮಾರುಹೋಗಿದ್ದ. ಅವರಿವರ ಸಹಾಯದಿಂದ ಪರಿಚಯಕ್ಕೆ ದಾರಿಮಾಡಿಕೊಂಡಿದ್ದ, ಪರಿಚಯವಾದಾಗ ಅವಳವನಾಗಿಬಿಟ್ಟಿದ್ದ; ಅವಳವನಾಗಿಯೇ ಇರುವುದಾಗಿಯೂ ತೀರ್ಮಾನಿಸಿಕೊಂಡಿದ್ದ. ಹೀಗೆ ಅವರು ಸ್ವಲ್ಪ ಕಾಲದಲ್ಲೇ ಹತ್ತಿರವಾಗಿದ್ದರು. ಅವಳು 'ಇವನನ್ನು ನನ್ನ ಚಂದು ಅಂತ ಯಾಕೆಂದುಕೋಬಾರದು?' ಎಂದು

ಆಗಾಗ ಯೋಚಿಸಿಕೊಂಡರೆ ಅವನು ‘ ವಯಸ್ಸು ಇವಳಿಂದ ಏನನ್ನೂ ಕದ್ದು ಕೊಂಡು ಹೋಗಿಲ್ಲ. ಮಂಜೂ ಆರದಿದ್ದ ಬೆಳಿಗ್ಗೆಯ ಹೂವಿನಂತೆ ಹೊಸ ದಾಗಿಯೇ ಇದಾಳೆ. ಇವಳನ್ನು ತನ್ನವಳೆನ್ನಬಲ್ಲವನು ಎಂಥ ಪುಣ್ಯ ವಂತನೋ ’ ಎಂದುಕೊಳ್ಳುತ್ತಿದ್ದ. ಅವಳಿಗೆ ಯುವಕ ಯುವತಿಯರಲ್ಲೇ ಸರಸ ಇಷ್ಟವಾಗಿತ್ತು. ಇವನಂತೂ ಮನೆಯವನು, ತನ್ನವನು ಎನ್ನುವ ಏನೋ ಒಂದು ಭಾವನೆ ಅವಳಿಗೆ ಬರುತ್ತಿದ್ದು ಅವನೊಡನೆ ಸಾಮಾನ್ಯ ಕ್ಕಿಂತ ಸ್ವಲ್ಪ ಹೆಚ್ಚಾಗಿ ಸರಸ ಜೇಕೆನ್ನಿಸುತ್ತಿತ್ತು. ಅವನಾದರೂ ಇದನ್ನು ಎರಡು ಕೈಗಳಿಂದಲೂ ಬರಮಾಡಿಕೊಂಡಂತೆ ಬೇಗನೇ ಈ ಆಟದಲ್ಲಿ, ಚೇಷ್ಟೆ ಯಲ್ಲಿ, ಸೇರಿಕೊಳ್ಳುವುದನ್ನು ಕಲಿತಿದ್ದ. ಒಂದೊಂದು ವೇಳೆಯಂತು ಒಳಗಿನ ಭಾವಾವೇಶದಿಂದ ಮಿತಿಮೀರಿದಂತೆಯೇ ಸ್ವಲ್ಪ ಮುಂದುವರಿದು ನಡೆದುಕೊಳ್ಳುತ್ತಿದ್ದ. ಅವಳಿಗೆ ಈ ರೀತಿಯೇನು ಹೊಸದಾಗಿರಲಿಲ್ಲ. ಎಷ್ಟೋ ಜನರು ಎಷ್ಟೆಷ್ಟೋ ಹುಚ್ಚರಾಗಿ ನಡೆದುಕೊಂಡಿದ್ದರು. ಅವರ ನ್ನೆಲ್ಲ ಗುಣಪಡಿಸಿದ್ದಳು. ಇವನಿಗೂ ಮೃದು ಹಾಸ್ಯದಿಂದಲೇ ಎಚ್ಚರಿಕೆಯ ಸೂಚನೆಯನ್ನು ಕೊಡುತ್ತಿದ್ದಳು. ಅವನು ಪೆಚ್ಚಾಗಿ ತನ್ನ ಸ್ಥಾನವನ್ನರಿತು ಕೊಂಡು ಹಿಂದೆ ಸರಿಯುತ್ತಿದ್ದ. ಇದು ಅವನಿಗೆ ಕಿರಿಕಿರಿಯನ್ನುಂಟು ಮಾಡಿದಾಗ ತಮ್ಮಲ್ಲಿದ್ದ ಅಗಾಧವಾದ ಅಂತರವನ್ನು ನೆನೆಸಿಕೊಂಡು ಸಮಾ ಧಾನ ತಂದುಕೊಳ್ಳುತ್ತಿದ್ದ. ಮನಸ್ತಾಪಕ್ಕೆ ಅವಕಾಶ ಕೊಟ್ಟಿರಲಿಲ್ಲ. ಅದಕ್ಕೆ ಬದಲಾಗಿ ‘ ನನ್ನನ್ನು ಇಷ್ಟಾದರೂ ವಿಶೇಷವಾಗಿ ಕಂಡುಕೊಳ್ಳುತ್ತಾ ಇದ್ದಾಳಲ್ಲ. ನನ್ನ ಪುಣ್ಯ’ ಎಂದು ತೃಪ್ತಿಪಡುತ್ತಿದ್ದ. ಅವಳೇನೋ ಅವನಲ್ಲಿ ತನ್ನ ಭಾವನೆ ಕಿರಿಯನಲ್ಲಿ ಹಿರಿಯವಳದ್ದು–ಯಾಕೆ, ಮಗನಲ್ಲಿ ತಾಯಿಯದು, ಎಂಬುದನ್ನೇ ಸೂಚಿಸುತ್ತಿದ್ದಳು. ಯಾವ ಹೆದರಿಕೆಯೂ ಇರಲಿಲ್ಲ. ಆದರೆ ಅದನ್ನು ಅವನು ಸ್ಪಷ್ಟವಾಗಿ ಅರಿತಿರಲಿಲ್ಲ. ಅವನ ಎದೆ ಯಲ್ಲಿ ಬಿಸಿರಕ್ತ ಹುಡುಗತನದ ಹುಚ್ಚಾಟವನ್ನು ಆಗಾಗ ನಡೆಸುತ್ತಿತ್ತು. ಅವನು ಬೆದರುತ್ತಿದ್ದ, ಆದರೆ ಬಿಡಲಾರ.

ಪರಿಚಯವಾದ ಎಲ್ಲ ಚಿತ್ರಗಾರರಂತೆಯೇ ಅವನೂ ಅವಳನ್ನು ಚಿತ್ರಿಸಬೇಕೆಂದು ಬೇಡಿಕೊಂಡ. ಒಪ್ಪಿಕೊಂಡಳು. ಸಾಮಾನ್ಯವಾಗಿಯೂ ಇಲ್ಲವೆನ್ನುತ್ತಿರಲಿಲ್ಲ. ಅವನ ಪ್ರತಿಭೆಯನ್ನು ಕೇಳಿದ್ದಳು, ಅವನ ಚಿತ್ರ

ಗಳನ್ನು ನೋಡಿದ್ದಳು. ಅವನ ಭವಿಷ್ಯ ದೊಡ್ಡದೆಂದು ಅವಳಿಗೂ ಭರವಸೆ ಉಂಟಾಗಿದ್ದಿತು. ಅಲ್ಲದೆ ಅವನ ಸಹವಾಸ ಮಾತುಕತೆಗಳೂ ಬೇಕು. ಆಂದಮೇಲೆ ಸಂತೋಷದಿಂದಲೇ ಒಪ್ಪಿಕೊಂಡಿದ್ದಳು.

" ಆದರೆ, ನಾನು ನಿಮ್ಮ ಸ್ಟುಡಿಯೋ ಗೀಡಿಯೋಗೆ ಬರೋಲ್ಲ."

" ನೀವು ಎಲ್ಲಿ ಹೇಳಿದರೆ ಅಲ್ಲೇ."

" ಇಲ್ಲೇ. ನಿಮ್ಮ ಹಿಂದಿನೋರೆಲ್ಲ ಇಲ್ಲೇ ಚಿತ್ರಿಸಿದಾರೆ." ಅವರು ಅವಳ ಮಹಲಿನ ಮೇಲು ಹಜಾರದಲ್ಲಿ ಕುಳಿತಿದ್ದರು. ಇದು ಆಪ್ತರ ಭೇಟಿಗೆ, ಖಾಸಗಿ ಪಾರ್ಟಿಗಳಿಗೆ ಸ್ಥಳವಾಗಿತ್ತು.

" ಆಗಬಹುದು. ಇದೇ ನನ್ನ ಸ್ಟುಡಿಯೋ ಆಗಲಿ." ಇದು ಅವನಿಗೂ ಹಿತವೇ. ಇದರೊಡನೆ ಹೋಲಿಸಿದರೆ ಅವನ ಸ್ಟುಡಿಯೋ ಸಣ್ಣ ಉಗ್ರಾಣದಂತಿತ್ತು, ಅಷ್ಟು ಸಣ್ಣದು, ಅಷ್ಟೊಂದು ಸಿಕ್ಕಾಪಟ್ಟೆ ಸಾಮಾನು. ಇಲ್ಲಿ ಅವಳೊಡನೆ ಹೆಚ್ಚು ಕಾಲವನ್ನೂ ಕಳೆಯಬಹುದಾಗಿತ್ತು, ಹೆಚ್ಚು ಕೆಲಸವೂ ನಡೆದೀತೆಂಬ ಯೋಚನೆ–ಅದು ಮುಖ್ಯವಲ್ಲದಿದ್ದರೂ. ಅಲ್ಲದೆ ಇಲ್ಲಿ ಇನ್ನು ಯಾವ ಆತಂಕವೂ ಇರಲಿಲ್ಲ. ಅವಳ ರಾಜಾತಿಥ್ಯ ನಡೆಯುತ್ತಿತ್ತು. ತಾನೇನು ಆತಿಥ್ಯ ನಡೆಸಬಲ್ಲವನಾಗಿದ್ದ ಅವಳಿಗೆ? ಕೃಷ್ಣಾತಿಥ್ಯದಲ್ಲಿ ಕುಚೇಲನ ಅವಲಕ್ಕಿ ಹೊರಗೆ ಬಂದಂತೆ. ಅವನು 'ಬದುಕಿದೆ' ಎಂದೇ ಅಂದುಕೊಂಡ.

" ಹಾಗಾದರೆ ನಾಳೆಯೇ ಮೊದಲು ಮಾಡೋಣವೆ? " ಅವನು ಆತುರದಿಂದ ಕೇಳಿದ.

" ಹುಂ; ನಾನೇನೂ ಕೆಲಸಮಾಡುತ್ತಿಲ್ಲ, ಈಗ."

" ಸರಿ, ನನ್ನ ಸಾಮಾನನ್ನೆಲ್ಲ ತೆಗೆಸಿಕೊಂಡು ಬಂದುಬಿಡುತ್ತೀನಿ "

" ನಾನೇನಾದರೂ ಸಿದ್ಧಪಡಿಸಿಕೋಬೇಕೋ? " ಹಿಂದೆಲ್ಲ ಹಲವು ಪಾತ್ರಗಳಲ್ಲಿ ಚಿತ್ರಿತಳಾಗಿದ್ದಳಲ್ಲ.

" ಹುಂ, ಹುಂ. ಊರ್ವಶಿ ಪಾತ್ರದಲ್ಲಿ ಚಿತ್ರಿಸುತ್ತೀನಿ. ಅದು ನಂಗೆ ಬಹಳ ಇಷ್ಟ."

" ಊಹೂಂ? ಅದು ಆಗಲೇ ಎಷ್ಟೋ ಬಾರಿ ಚಿತ್ರಿಸಿ ಆಗಿದೆಯಲ್ಲ."

" ಇರಬಹುದು, ಅವರಿವರಿಂದ. ನನ್ನ ಚಿತ್ರ ನೋಡೋದಂತೆ. ವಿಶೇಷ. ನನ್ನ ಕಲೆಯನ್ನೆಲ್ಲ ಅದಕ್ಕೆ ತುಂಬುತ್ತೀನಿ–ಮನಸ್ಸು ಎದೆ ಗಳನ್ನೆಲ್ಲ."

" ಓಹೋ, ಏನು ಚಿತ್ರ ಬರೀತೀರೋ, ಕವಿತೆ ಬರೀತೀರೋ ? "

" ಎರಡೂ. ಚಿತ್ರವೆಂಬ ಕವಿತೆ, ಕವಿತೆಯೆಂಬ ಚಿತ್ರ. ನೋಡು ತ್ತೀರಿ." ಅವನ ಕಣ್ಣುಗಳು ಹೊಳೆಯುತ್ತಿದ್ದುವು. ಅವಳು ಅವನನ್ನೇ ವಿಟ್ಟಿಸಿ ಆನಂದಿಸಿದಳು.

" ಹುಂ, ಹಾಗೇ ಆಗಲಿ. ಆದರೆ ಯಾವ ಊರ್ವಶಿ ? ?

ದೇವೇಂದ್ರನ ತುಂಬು ಸಭೆಯಲ್ಲಿ, ತಾಳ ಮೇಳಗಳ ಹಿನ್ನೆಲೆಯಲ್ಲಿ, ವಿಶೇಷ ವೇಷಭೂಷಣಾಲಂಕೃತಳಾಗಿ, ಬಗೆ ಬಗೆಯ ಭಾವ ವಿಲಾಸಗಳನ್ನು ಆಕರ್ಷಕ ಭಂಗಿಗಳಿಂದ ಪ್ರದರ್ಶಿಸುತ್ತ, ದೇವಸಭೆಯನ್ನೇ ಮರುಳು ಗೊಳಿಸುತ್ತಿದ್ದ ದೇವವೇಶ್ಯೆ ಊರ್ವಶಿಯನ್ನೋ; ತೊರೆಯಲಾರದೆ ಮೊರೆ ಯಿಡುವ ಅನಂತ ವಿಷಯಾಸಕ್ತ ಪುರೂರವನ ತೋಳ್ಗಳಿಂದ ನುಸುಳಿ ಕೊಂಡು ಬಿಡಿ ಮುಡಿ ಬಿಳಿ ದುಕೂಲಗಳ ಶಯನವೇಷದಿಂದಲೇ ಅಂತ ರಿಕ್ಷವನ್ನೇರುತ್ತಿದ್ದ ಊರ್ವಶಿಯನ್ನೋ; ಕಾಮವಿಕಾರ ಪ್ರೇರಿತಳಾಗಿ, ಸ್ವೇಚ್ಛಾಲಂಕೃತಳಾಗಿ, ಅತ್ಯಾತುರ ಸಂಭ್ರಮಗಳಿಂದ ಅರ್ಜುನನನ್ನು ಅರಸಲು ಹೊರಟ ಅಭಿಸಾರಿಕೆ ಊರ್ವಶಿಯನ್ನೋ; ವೇಶ್ಯಾಚಾತುರ್ಯ ವನ್ನೆಲ್ಲ ನೆರವಾಗಿಸಿಕೊಂಡು, ಅಭಿನಯ ಪ್ರಾವೀಣ್ಯದ ಪರಮಾವಧಿಯಲ್ಲಿ ದೀನಳಾಗಿ ಪ್ರಣಯಭಿಕ್ಷೆಯನ್ನು ಯುವಕ ಅರ್ಜುನನಿಂದ ಬೇಡುವ ಊರ್ವಶಿಯನ್ನೋ; ಕಾಮ ಭಂಗ ಕೆರಳಿಸಿ, ಪ್ರಣಯ ನಿರಾಕರಣೆಯ ಹೀನಾಯ ತಿವಿದೆಬ್ಬಿಸಿದ ಸರ್ಪ ಕೋಪದಿಂದ ಕಂಪಿಸಿದ ದೇಹ, ಕೆಂಪೇರಿದ ಮುಖ, ಕೂಡಿದ ಕುಡಿಹುಬ್ಬು, ಹನಿಗೂಡಿದ ಹಣೆ, ಕಿಡಿಕಾರುವ ಸಿಡಿ ಗಣ್ಣು, ತಿರಸ್ಕಾರದ ಕಟಬಾಯ ನಗೆಗಳಿಂದ ವಿಚಾರಶೂನ್ಯಳಾಗಿ ಶಪಿಸುವ ದೇವಾಂಗನೆ ಊರ್ವಶಿಯನ್ನೋ; ಚಿತ್ರಗಾರರು ಚಿತ್ರಿಸಿದ್ದರು. ಅದಕ್ಕೇ ಅವಳು " ಯಾವ ಊರ್ವಶಿ ? " ಎಂದು ಕೇಳಿದುದು.

" ಅರ್ಜುನನ ಪ್ರಣಯಭಿಕ್ಷೆಗೆ ಹೊರಟ ಅಭಿಸಾರಿಕೆ ಊರ್ವಶಿ."

" ಊಂ ! "

" ಅದೇ ನಂಗೆ ಅತ್ಯಂತ ಚಿತ್ತಭ್ರಮೆಯನ್ನು ತಂದಿದ್ದು."

" ಏನು ಚಿತ್ತಭ್ರಮೆಯೆ ? ಎಂಥ ಪದ ಅಂತ ಗೊತ್ತೋ, ಅವು ? ನಮ್ಮಲ್ಲಿ...."

" ಬಂದ ಭಾವನೆಯನ್ನು ಹೇಳಿಬಿಟ್ಟೆ. ಅದೇ ಅರ್ಥ ಅಂತ ಕಾಣುತ್ತೆ. ಯೋಚಿಸದೆ ನಿಜ ಬಂದುಬಿಟ್ಟಿತು."

" ಓಹೋ, ಈ ಚಾತುರ್ಯ ಬಿಡಿ. ಅರ್ಜುನ ಅಂತ ತಿಳಿದುಕೊಳ್ಳೋ ತಪ್ಪನ್ನೆಲ್ಲಾದರೂ ಮಾಡೀರಿ, ಜೋಕೆ."

" ನಾನು ಅಷ್ಟು ಗೊಡ್ಡಲ್ಲ."

" ಯಾವ ಅರ್ಥದಲ್ಲಿ ಈ ಮಾತು ? ತಪ್ಪು ಮಾಡೋ ಅಷ್ಟು ಗೊಡ್ಡಲ್ಲ ಅಂತಲೋ, ಅರ್ಜುನನಷ್ಟು ಅಂತಲೋ ? "

ಇಬ್ಬರೂ ನಕ್ಕರು.

" ನಾನು ಕಲೆಗಾರ. ಸೌಂದರ್ಯವಿದ್ದಲ್ಲಿ ತಿಳಿದುಕೋಬಲ್ಲೆ ಅನ್ನೋ ಅರ್ಥದಲ್ಲಿ," ಅವನ ನಗುವಿನಲ್ಲೂ, ಧ್ವನಿಯಲ್ಲೂ ಚೇಷ್ಟೆಯಿತ್ತು.

" ಹಾಗೋ, ಇದು ಮೂರನೆಯ ರೀತಿ. ಪುಣೇಕರ್‌ಜಿ, ಇದು ಮೊದಲನೆಯ ಸಲವಲ್ಲ ನಿಮ್ಮ ಅತಿ ಬುದ್ಧಿವಂತಿಕೆ ಮಾತು ಕೇಳೋದು. ಸ್ವಲ್ಪ ತಿದ್ದಿಕೊಳ್ಳದಿದ್ದರೆ ನಿಮ್ಮ ಚಿತ್ರ ಮುಗೀದೆ ಇರಬಹುದು."

" ಯಾವ ಅರ್ಥದಲ್ಲಿ ? ಕೇಳಬಹುದಾದರೆ."

" ಅರ್ಥವೆ ? ಸ್ಪಷ್ಟವಾದದ್ದೆ. ನೀವು ಚಿತ್ರ ಮರೀತೀರಿ ; ಕಾಲ ಎಳೀತೀರಿ ಅಂತಲ್ಲ. ಮುಗಿಯೋದಕ್ಕೆ ಮುಂಚೆ ಈ ಸ್ಥಳ ಬಿಡ್ತೀರಿ, ಅಂತ. ಗೊತ್ತಾಯ್ತೊ ? " ಹಾಸ್ಯದ ಎಚ್ಚರಿಕೆ.

" ತಮ್ಮ ಆಜ್ಞಾಪಾಲಕ. ನನ್ನ ಯೋಗ್ಯತೆ ನಂಗೆ ಗೊತ್ತು. ಮತಿಗೆಟ್ಟು ದುಡುಕಿದರೆ ಮನ್ನಿಸಿಬಿಡಿ."

" ಹುಚ್ಚಪ್ಪ, ಅಷ್ಟೆಲ್ಲ ಅಂದುಕೋಬೇಕಾಗಿಲ್ಲ. ನಾನು ದೇಶಾದ್ಯಂತ ಸುಪ್ರಸಿದ್ಧ ತಾರೆ, ನೀವು ಈಗ ತಾನೆ ಕಣ್ಣು ಬಿಡುತ್ತಿರೋ ಚಿತ್ರಗಾರ ಅಂತ ತಿಳಿದುಕೊಂಡು, ಹಾಗೇ ನಾನು ನಿಮ್ಮ ತಾಯಿಯ ವಯಸ್ಸಿನೋಳು. ನೀವಿನ್ನೂ ಎಳೇ ಹುಡುಗ ಅಂತ ನೆನಪಿನಲ್ಲಿಟ್ಟುಕೊಂಡರೆ, ಎಲ್ಲ ಸರಿ ಹೋಗುತ್ತೆ, ಚಿತ್ರವೂ ಮುಗಿಯುತ್ತೆ," ಅವಳು ಇನ್ನೂ ನಗುತ್ತಲೇ ಹೇಳಿದಳು.

" ಮೊದಲನೇದೆರಡನ್ನೂ ಯಾವಾಗಲೋ ಒಪ್ಪಿಕೊಂಡಿದೀನಿ: ಕಡೇ ಎರಡನ್ನ ಮಾತ್ರ ನಂಬೋದಿಲ್ಲ. ನಂಗಾಗಲೇ ಇಪ್ಪತ್ತೆರಡು. ಎಳೇ ಹುಡುಗನೇ ? "

" ಅದರೇನು ನಂಗೆ ಮಗುವಿನ ಹಾಗೇ. ನಂಗೆಷ್ಟು ವಯಸ್ಸು ಗೊತ್ತೇ ? "

" ಎಷ್ಟು?"

" ಎಷ್ಟು! ಹೆಂಗಸರ ವಯಸ್ಸು ಕೇಳ್ತಾರೇ–ಹುಚ್ಚಪ್ಪ! ಅದೂ ನಟಿಯದು. ಇಷ್ಟೇಯೆ ನಿಮ್ಮ ಬುದ್ಧಿ?"

" ಹೌದು. ನಾನು ದಡ್ಡನೇ. ಎಷ್ಟು ಹೇಳಿ ಮತ್ತೆ. ಇಪ್ಪತ್ತೆಂಟು ? '

" ಆ ! "

" ಮೂವತ್ತು? "

" ಸರಿಯಾಯ್ತು."

" ಅದಕ್ಕೆ ಮೇಲಿಲ್ಲ ಬಿಡಿ. ನೀವು ಹೇಗೆ ನಟಿಸಿದರೂ ನಾನಂತೂ ಒಪ್ಪೋದಿಲ್ಲ. ಯಾರೂ ಒಪ್ಪೋದಿಲ್ಲ."

" ಹಾಗೇ ಆಗಲಿ. ದಡ್ಡ ಅಂತ ನೀವೇ ಹೇಳಿಕೊಂಡಿರಲ್ಲ," ಅವನ ಅಭಿಪ್ರಾಯದಿಂದ ಅವಳಿಗೆ ಬಹಳ ಹರ್ಷವಾಯಿತು, ಹೆಮ್ಮೆಯಾಯಿತು. ಎಷ್ಟೋ ವರ್ಷಗಳು ಚಿಕ್ಕವಳಾದಂತೆ ಚೈತನ್ಯ ಹಗುರವಾಯಿತು. ಆ ಗಳಿಗೆಯಲ್ಲಿ ಅವಳಿಗೆ ಅವನು ಇನ್ನೂ ಬಹಳ ಇಷ್ಟವಾದ.

" ನನ್ನ ಅಭಿಪ್ರಾಯಕ್ಕೆ ತಕ್ಕಂತೇ ನಾನು ನಡೆದುಕೋತೀನಿ," ಎಂದ ಮೊಂಡತನದಿಂದ.

" ಉಹುಂ, ಉಹುಂ. ನನ್ನ ಅಭಿಪ್ರಾಯದಂತೆ–ನನ್ನ ಹತ್ತಿರ ಇರೋವರೆಗೂ," ಅವಳು ಬೆರಳಾಡಿಸಿ ತನ್ನ ಕಡೆಗೆ ಬೆರಳನ್ನು ತೋರಿಸುತ್ತ ಒತ್ತಿ ಹೇಳಿದಳು.

" ಅಪ್ಪಣೆ," ಇವಳ ಇಷ್ಟಪೂರ್ತಿಗಾಗಿ ಹೇಳಿದ.

ಈಚೀಚೆಗೆ ಅವರು ಸೇರಿದಾಗಲೆಲ್ಲ ಹೀಗೇ ಒಂದಲ್ಲ ಒಂದು ವಿಷಯ ವಿನೋದವಾಗಿ ಚರ್ಚೆಯಾಗುತ್ತಿತ್ತು. ಇಂತಹ ಮಾತುಗಳೂ ಆಗಾಗ ಬರುತ್ತಿದ್ದುವು.

ಚಿತ್ರ ಮೊದಲಾಯಿತು. ನಡೆಯಿತು, ನಡೆಯಿತು ದೀರ್ಘವಾಗಿ. ಬಿಡುವಿದ್ದಾಗಲೆಲ್ಲ ಅವನಿಗಾಗಿ ನಿಲ್ಲುವುದು ಅವಳಿಗೆ ಸಾಕಾಗುತ್ತ ಬಂದಿತು; ಯಾಕೆ, ಒಂದೊಂದು ದಿನ ಬೇಸರವೇ ಆಗುತ್ತಿತ್ತು. ಅವನ ಸಹವಾಸ, ಸರಸದ ವಾದ, ಮೆಚ್ಚಿಗೆಯ ಮಾತುಕತೆ-ಇವು ಸ್ವಾರಸ್ಯ ತರದಿದ್ದರೆ ಎಂದೋ ಚಿತ್ರ ನಿಂತುಹೋಗುತ್ತಿತ್ತು. ಇತರ ಚಿತ್ರಗಾರರಿಗಿಂತ ಹೆಚ್ಚಾಗಿ ಅವನು ಅಲ್ಲಿಲ್ಲಿ ಹತ್ತು ಕಡೆ ನಿಂತು ನಿಂತು ತನ್ನ ಕಡೆಗೆ ನೋಡುವುದರಲ್ಲೇ ಮುಕ್ಕಾಲು ಹೊತ್ತನ್ನೆಲ್ಲ ಕಳೆಯುತ್ತಿರುವಂತೆ ಅವಳಿಗೆ ತೋರಿತು. ಒಂದೊಂದು ವೇಳೆ, ಈ ಚಿತ್ರ ಎಂದೆಂದಿಗೂ ಮುಗಿಯುವುದೇ ಇಲ್ಲವೋ ಎನ್ನಿಸುತ್ತಿತ್ತು. ಆದರೆ ತನಗೆ ತಿಳಿಯದ ಕಲಾಕ್ರಮದಲ್ಲಿ ಅವನೊಡನೆ ಏನು ವಾಗ್ವಾದ? ಸುಮ್ಮನಿರುತ್ತಿದ್ದಳು. ಈ ಒಪ್ಪಿಗೆಗೆ ಇನ್ನೂ ಒಂದು ಕಾರಣ ಅವನ ಕುಂಚ ಕೌಶಲ್ಯದಿಂದ ಮೂಡಿ ಬರುತ್ತಿದ್ದ ಚಿತ್ರ. ಇವಳು ನೋಡಿದ್ದ ಚಿತ್ರಗಳಿಗೆ ಲೆಕ್ಕವಿಲ್ಲ; ತನ್ನನ್ನೇ ಚಿತ್ರಿಸಿಕೊಂಡಿದ್ದುದೂ ಬಹಳ. ಕಲೆಯ ಸಾರ ಒಳಗೆ ಇಳಿದಿದ್ದಿತು, ಕಣ್ಣಿನಲ್ಲಿ ವಿಮರ್ಶೆಯಿತ್ತು. ಈ ಚಿತ್ರ ಅವಳಿಗೂ ವಿಶೇಷವೆಂದು ಕಾಣುತ್ತ ಬರುತ್ತಿತ್ತು. ಆಗಾಗ ಅದರ ಕಡೆಗೇ ಮುಗ್ಧಳಾಗಿ ನೋಡುತ್ತ ಹೊತ್ತನ್ನೇ ಮರೆಯುತ್ತಿದ್ದಳು. ಇದೂ ಈ ಕೆಲಸ ಇನ್ನೂ ಸಾಗುವುದಕ್ಕೆ ಅಷ್ಟು ಸಹಾಯವಾಗಿತ್ತು.

ವಿಶೇಷ ಸರಸ ಸ್ವಲ್ಪ ಸ್ವಲ್ಪ ವಿರಸಗಳಲ್ಲಿ ಸಾಗಿ ಚಿತ್ರ ಮುಗಿಯುವ ದಿನಕ್ಕೇ ಬಂದಿತ್ತು. ಆ ದಿನ ಮತ್ತೊಂದು ಬಾರಿ ಎಲ್ಲ ಭಾಗಗಳನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ಅವಳೊಡನೆ ಹೋಲಿಸಿ ಅಗತ್ಯವಾದರೆ ಅಲ್ಲಲ್ಲಿ ತಿದ್ದಿ ಪೂರಯಿಸುವುದಕ್ಕಾಗಿ ಬಂದಿದ್ದ. ಅವಳಿಗೆ ಆ ಚಿತ್ರ ಅಷ್ಟೊಂದು ತೃಪ್ತಿಕರವಾಗಿದ್ದುದು ಒಂದು ಸಮಾಧಾನ; ಇದನ್ನು ನೋಡಿದ ಜನ ಎಷ್ಟು ಮೆಚ್ಚುವರೋ, ಆನಂದಿಸುವರೋ, ತನ್ನನ್ನು ನೆನಸುವರೋ ಎನ್ನುವ ಉತ್ಸಾಹ; ತನ್ನ ಬಂಧನ-ಎಷ್ಟಾದರೂ ಬಂಧನವೇ-ತೀರಿತಲ್ಲ ಎಂದು ದೊಡ್ಡ ಪರಿಹಾರ, ಮೂರೂ ತುಂಬ ಸೌಖ್ಯವನ್ನು ತಂದಿದ್ದುವು. ಉಲ್ಲಾಸ ಏರಿತ್ತು. ಎಂದಿಗಿಂತಲೂ ಹೆಚ್ಚು ಸರಸಕ್ಕೆ ಆಸ್ಪದವಿತ್ತು. ಬಹಳವಾಗಿ ಪ್ರೋತ್ಸಾಹಿಸುವ, ಮನ್ನಿಸುವ ಮನೋಧರ್ಮ, ಅಂದು ಅವಳದ್ದು. ಅವನಿಗೆ

ಆ ದಿನ–ಅವಳೊಡನೆ ಅಷ್ಟು ಹೊತ್ತು ಇರುವ ಅವಕಾಶವಿದ್ದ ದಿನಗಳಲ್ಲಿ ಸದ್ಯಕ್ಕೆ ಕಡೆಯದು–ಮುಖ್ಯವಾದದ್ದೆಂದು ಹೇಳಲೇ ಬೇಕಾಗಿಲ್ಲ. ತನ್ನ 'ಮಾಸ್ಟರ್‌ಪೀಸ್' ಬಗ್ಗೆ, ತನ್ನ ಬಗ್ಗೆ ಏನೇನೋ ಸುಂದರ ಕನಸುಗಳು.

ಆಗ ತಾನೆ ಮಧ್ಯಾಹ್ನದ ಕಾಫಿ ಮುಗಿದಿತ್ತು. ಅವನು ಕಡೆಯ ಗುಟುಕನ್ನು ಕುಡಿದು ಚಿತ್ರದ ಮುಂದೆ ನಿಂತಿದ್ದ. ಅವಳಿಗೆ ತನ್ನ ಸ್ಥಾನಕ್ಕೆ ಹೋಗಲು ಸೂಚನೆಯಾಗಿರಲಿಲ್ಲ. 'ಸೋಫದ ಮೂಲೆಯ ಮೇಲೆ ಒರಗಿಕೊಂಡು, ಬಲಗೈಯನ್ನು ಪಕ್ಕದ ಏಣಿನ ಮೇಲೂ, ಎಡಗೈಯನ್ನು ಹಿಂದಿನ ಏಣಿನ ಮೇಲೂ ಇಟ್ಟುಕೊಂಡು ಕಾಲುಗಳನ್ನು ಒಂದರ ಮೇಲೊಂದು ಜೋಡಿಸಿ ಸ್ವಲ್ಪ ನೀಡಿಕೊಂಡು ಆರಾಮದಿಂದಿದ್ದಳು. ಅವನು ಇತ್ತ, ಅತ್ತ, ಹತ್ತಿರ, ದೂರ, ನಿಂತು ನಿಂತು ಚಿತ್ರವನ್ನು ಪರೀಕ್ಷಿಸುತ್ತಿದ್ದ. ಬಗ್ಗಿ ಕುಂಚವೊಂದನ್ನು ತೆಗೆದುಕೊಂಡು ಅವಳ ಕಡೆಗೆ ನೋಡಿದ.

"ಏನು ಅವಸರ? ಆಗಲಿ, ಇನ್ನೂ ಐದು ನಿಮಿಷ," ಅವಳು ಸನ್ನೆಗೆ ಉತ್ತರ ಕೊಟ್ಟಳು. ಅವನ ನೋಟ ಚಿತ್ರಕ್ಕೆ ತಿರುಗಿತು.

"ಎಂಥ ಸೊಗಸಾದ ಚಿತ್ರ! ನೋಡಿದಾಗ ಪ್ರಪಂಚಕ್ಕೆ ಪ್ರಪಂಚವೇ ಬಾಯಿ ಬಿಡುತ್ತೆ," ಅರ್ಧ ತನಗೇ ಹೇಳಿಕೊಂಡ.

"ಓಹೋ, ನಿಮ್ಮ ಭುಜಾನ ನೀವೇ ತಟ್ಟಿಕೋತೀರೋ?" ಅವಳು ಹಾಸ್ಯಮಾಡಿದಳು.

"ಹಾಗಲ್ಲ. ಇದು ಮುಗಿದುಹೋಯ್ತು. ಇನ್ನು ನನ್ನದಲ್ಲ. ವಿಮರ್ಶೆಮಾಡಬಲ್ಲೆ. ಬಹಳ ಸೊಗಸು."

"ಹಾಗೋ?"

"ನೋಡಿ, ಸಾಕ್ಷಾತ್ ಮೋಹವೇ ಮೂರ್ತೀಭವಿಸಿ ನಿಂತಿಲ್ಲವೆ? ಯುಗಯುಗಾಂತರದಿಂದ, ಸೃಷ್ಟಿಯೊಡನೆಯೇ ಹುಟ್ಟಿದ–ಯಾಕೆ, ಸೃಷ್ಟಿಯನ್ನೇ ಹುಟ್ಟಿಸಿದ, ಆ ಅನಾದ್ಯಂತ ಕಾಮವೇ ಇಲ್ಲಿ ತನ್ನ ನೆರವೇರಿಕೆಯನ್ನರಸುತ್ತಿದೆ, ತನ್ನದೇ ಪರಿಪೂರ್ಣತೆಗಾಗಿ...."

"ಊಹೂಂ! ಕಾವ್ಯಭಾಷೆ, ನಾಟಕಭಾಷೆ ಮೊದಲಾಯ್ತೋ?" ವಿನೋದವಾಗಿ ಎಚ್ಚರಿಸಿದಳು.

ಆದರೆ ಅವನು ಅದನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ ತನ್ನ ಮೆಚ್ಚಿಗೆಯ ಚಿತ್ರದಲ್ಲಿ ಮಗ್ನನಾಗಿದ್ದ; ಆದರ ವರ್ಣನೆಯನ್ನು ಮುಂದು ವರಿಸಿದ. ಅವನ ಮಾತುಗಳಲ್ಲಿ ರಸಿಕನ ಕಲಾಭಿರುಚಿಯೂ, ಹುಚ್ಚು ಪ್ರಣಯಿಯ ಆವೇಶವೂ ಬೇರ್ಪಡಿಸಲಾಗದಂತೆ ಹೆಣೆದುಕೊಂಡಿದ್ದುವು. ಕೇಳುತ್ತ ಕೇಳುತ್ತ ನಾಯಕಿಯ ಮುಖ ಕೆಂಪೇರುತ್ತ ಹೋಯಿತು-ಮೆಚ್ಚಿಕೆ ಯಿಂದ ಎಷ್ಟೋ ಅಷ್ಟೇ ನಾಚಿಕೆಯಿಂದಲೂ.

" ಸಾಕು ! ಸಾಕು ! ನಿಲ್ಲಿಸಿ. ನಾಚಿಸಬೇಡಿ," ಅವಳು ಮಧ್ಯೆ ತಡೆದಳು.

" ನಾನು ಚಿತ್ರವನ್ನು ಬಣ್ಣಿಸುತ್ತಿದ್ದೆ-ರಸಿಕನ ಮನಸ್ಸಿಗೆ ಹೇಗೆ ಹೊಳೆಯಬಹುದೋ ಹಾಗೆ," ಅವನು ತನ್ನನ್ನು ಸಮರ್ಥಿಸಿಕೊಂಡ.

" ಓ, ಇದೊಂದು ಸೋಗೋ ? "

" ಇಲ್ಲ. ಪ್ರಖ್ಯಾತ ಚಿತ್ರವೆಂದ ಮೇಲೆ ಎಂಥೆಂಥ, ಎಷ್ಟೆಷ್ಟು ಬಣ್ಣನೆಗೆ, ಹೊಗಳಿಕೆಗೆ...."

" ನಿಮ್ಮ ಕಲೆಗೆ ನೀವೇ ಮನಸ್ಸು ಸೋತುಬಿಡೋದು ವಿಚಿತ್ರ...."

" ಚಿತ್ರ ಹಾಗಿದೆ. ಇಷ್ಟಕ್ಕೂ ನನ್ನ ಕಲೆ ಕೈಚಳಕವೇನೂ ಇಲ್ಲ ಅಲ್ಲಿ."

" ಆ ! ಇದೊಂದು ಹೊಸ ರೀತಿ ಹೊಗಳಿಕೆಯೋ ? ನಾನೇನೂ ಮೋಸಹೋಗೋದಿಲ್ಲ, ತಿಳೀರಿ. ನಿಜವಾಗಿ ನೋಡಿದರೆ ನಾನೊಬ್ಬ ಮುದಿ ಮಾಟಗಾತಿ."

" ಅ ? " ಅವಳ ಕಡೆಗೆ ತಿರಿಗಿ " ಮಾಟಗಾತಿ-ನಿಜ. ಮುದಿ-ಶುದ್ಧ ಸುಳ್ಳು. ಪಕ್ಕಾ ಮಾಟಗಾತಿ ಅನ್ನಿ, ಒಪ್ಪುತ್ತೀನಿ."

" ನಿಮ್ಮ ತಲೆ ತಿರಿಗಿದೆ."

" ನೋಡಿದವರದ್ದು ಯಾರದು ತಿರಿಗಿಲ್ಲ ? ನಂದೇನು ಹೆಚ್ಚು ? "

" ಕಳಿಸಿಬಿಡುತ್ತೀನಿ."

" ಹಾಗೆಂದರೆ ಹೋಗಿಬಿಡ್ತೀನೇ ? "

" ತುಂಟ ಮಗು ! "

" ನಾನೇನು ಮಗುವಲ್ಲ. ಯಾಕೆ ಮತ್ತೆ ಮತ್ತೆ ಹಾಗೆ ಅಂತೀರಿ ? "

"ಆಗಲಿ. ನೀವು ಬೆಳೆದೋರೆ. ನಾನು ತಾಯಿ ಹಾಗೆ-ಅದಕ್ಕೇ ನೀವು ಮಗುವಿನ ಹಾಗೆ ಕಾಣ್ತೀರಿ."

"ಛೀ! ನಿಮ್ಮನ್ನು ತಾಯಿ ಅನ್ನೋರು ಯಾರು-ಆಗಾಗ ರಂಗದ ಮೇಲೆ ಬಿಟ್ಟು."

"ಇನ್ನೇನು ವಯಸ್ಸಾದೋಳು, ತಾಯಿ, ಅಜ್ಜಿ ಎಲ್ಲ."

"ಹುಚ್ಚು! ಯಾವ ಹುಡುಗಿಗೆ ಕಡಿಮೆಯಾಗಿದೀರಿ? ಯಾವೋಳು ಹೋಲಿಸಿಕೋಬಲ್ಲಳು?"

"ಆಹಾ, ನಿಜವಾಗಿದ್ದರೆ! ನಾನು ಮತ್ತೆ ಹುಡುಗಿಯಾಗಿದ್ದರೆ!"

"ಹುಡುಗಿಯೇ-ಯುವತಿಯೇ."

"ಹೊಗಳುಭಟ್ಟ! ಸ್ತುತಿಪಾಠಕನಾಗಬೇಕಾಗಿತ್ತು, ಚಿತ್ರಗಾರನಾಗೋ ಬದಲು."

"ಯಾವ ಗಂಡನ್ನು ಬೇಕಾದರೂ ಕೇಳಿ-ಹಾಗಾದರೆ."

"ಹಾಗೇ ಆಗಲಿ. ನಿಮ್ಮೊಡನೆ ಏನು ವಾಗ್ವಾದ. ನಿಮಗೆ ಶುದ್ಧ ಕುರುಡು."

"ನಂಗಿಲ್ಲ ಕುರುಡು. ನಿಮಗೆ ಭ್ರಾಂತಿ ಅಷ್ಟೆ. ಈ ಜಾಡ್ಯ ವೊಂದೇನೋ ಇದೆ; ಗುಣವಾಗಬೇಕು, ಅಷ್ಟೆ."

"ಹಾಗೇ ಆಗಲಿ. ನಿಮಗೆ ಸರಿಯಾಗಿದ್ದರೆ ಆಯ್ತು. ಹಾಗಾದರೆ ಮುಂದಿನ ಕಲಾಪ್ರದರ್ಶನದಲ್ಲಿ ಈ ಚಿತ್ರಕ್ಕೆ ದೊಡ್ಡ ಬಹುಮಾನ ಸಿಕ್ಕುತ್ತೆ ಅಂತೀರ?" ಮಾತನ್ನು ತಿರುಗಿಸಿದಳು. ಅವಳಿಗೆ ಕಲಾಪ್ರದರ್ಶನದ ದೃಶ್ಯ-ನೋಡಲು ಬರುವ ಲಕ್ಷಾಂತರ ಜನರ ಸಾಲು; ಈ ಚಿತ್ರದ ಮುಂದೆ ನಿಲ್ಲುವವರು; ಅವರ ಪ್ರಶಂಸೆಯ ಮಾತುಗಳು; ಚಿತ್ರಕ್ಕೆ, ತನಗೆ ದೊರೆ ಯುವ ಪ್ರಚಾರ-ಈ ಕಡೆಗೆ ಮನಸ್ಸು ಹರಿಯಿತು.

"ದೊಡ್ಡ ಬಹುಮಾನವೇನು-ಮೊದಲನೇದೇ. ಎಷ್ಟು ಬಾರಿಯೋ-ಮುಂದೆ. ಹುಂ....ಆದರೆ ಆ ಬಹುಮಾನಗಳೆಲ್ಲ ನಂಗೇನು ಬೇಕು; ನಂಗೆ ಬೇಕಾದದ್ದು ನಿಮ್ಮಿಂದ."

"ನನ್ನಿಂದಲೇ? ಬಹುಮಾನ? ಇಷ್ಟು ದಿನ ಚಿತ್ರಹಿಂಸೆ ಅನುಭವಿಸಿ ದ್ದಲ್ಲದೆ?"

“ ನಿಜವಾಗಿಯೂ ಚಿತ್ರಹಿಂಸೆಯಾಗಿತ್ತೆ? ” ಅವನ ಮುಖ ಸ್ವಲ್ಪ ಸಪ್ಪೆಯಾಯಿತು.

“ ಇಲ್ಲ, ಚೇಷ್ಟೆಯಾಡಿದೆ ” ಅವಳು ನಕ್ಕಳು. ಅವನ ಮುಖ ಮತ್ತೆ ಅರಳಿತು. “ ನಿಮ್ಮದು ಹಿತವಾದ ಸಹವಾಸ; ಆಯ್ತೆ? ” ಅವನನ್ನು ಸಮಾಧಾನಪಡಿಸಲು ಹೇಳಿದುದು ಅವನಿಗೆ ಪ್ರೋತ್ಸಾಹವಾಯಿತು.

“ ನಾನು ಧನ್ಯ.”

“ ಅದು ಸರಿ, ನನ್ನಿಂದ ಮತ್ತೆ ಯಾವ ಬಹುಮಾನ ಹೊಡೆದುಕೋಬೇಕು ಅಂತಿದೀರಿ? ಉದ್ದಕ್ಕೂ ನಿಮ್ಮ ಚಿತ್ರಾನ, ನಿಮ್ಮ ಪ್ರತಿಭೇನ, ನಿಮ್ಮನ್ನ ಹೊಗಳ್ತಾಲೇ ಬಂದು ದಣಿವಿದೀನಲ್ಲ. ಇನ್ನೇನೂ ಸಾಧ್ಯವೇ ಇಲ್ಲ. ನೀವೇ ನಂಗೆ ಏನಾದರೂ ಕೊಡಬೇಕು, ಗೊತ್ತೆ–‘ ಸಿಟಿಂಗ್ ಫೀ ’ ಅಂತ.”

“ ಆ ಯೋಗ್ಯತೆ ಇದೆಯೆ ನಂಗೆ? ನನ್ನೇ ಮಾರಿಕೊಂಡರೂ ಅಷ್ಟು ಸಿಗೋದಿಲ್ಲ. ಆದರೆ ಒಂದೇನೋ ಇದೆ, ಬಡವಂದು. ಆದರೆ ಬಹಳ ಬೆಲೆಯಾದ್ದು, ನಂಗೆ.”

“ ಊಹೂಂ! ಅಂಥಾದ್ದು ಏನಿದೆ? ಅದು ನಂಗೂ ಬೆಲೆಯಾದ್ದೇ ಯಾಕಾಗಬಾರದು? ”

“ ಅದನ್ನು ಯಾವಾಗಲೂ ಇಲ್ಲೇ ಇಟ್ಟುಕೊಂಡಿದೀನಿ, ಈ ಜೇಬಿನಲ್ಲಿ. ಯಾವಾಗ ಸಮಯ ಬರುತ್ತೋ ಅಂತ ” ಅವನು ಕೋಟಿನ ಒಳಜೇಬಿಗೆ ಕೈಹಾಕಿ ಆಭರಣದ ಪೆಟ್ಟಿಗೆಯೊಂದನ್ನು ಹೊರಗೆ ತೆಗೆದ.

“ ಓಹೋ, ಹಾಗೇ! ” ಅವಳಿಗೆ ಆಶ್ಚರ್ಯವಾಯಿತು.

“ ಇದು ಯಾವುದೋ ಕಾಲದಿಂದಲೂ ನಮ್ಮ ವಂಶದಲ್ಲಿ ಅತ್ತೆಯಿಂದ ಸೊಸೆಗೆ ಬದಲಾಯಿಸಿಕೊಂಡು ಬಂದ ಉಡುಗೊರೆಯಂತೆ. ಅದಕ್ಕೇ ಅಷ್ಟು ಬೆಲೆ ಅದಕ್ಕೆ. ನಮ್ಮ ತಾಯಿಯೂ ಅವಳ ಸೊಸೆಗೆ ಅಂತಲೇ....” ಹೇಳುತ್ತಲೇ ಪೆಟ್ಟಿಗೆಯ ಮುಚ್ಚಳವನ್ನು ತೆರೆದ. ಜೋಮಾಲೆಯ ಸರ!

ಹೂಂ, ಜೋಮಾಲೆಯ ಸರ! ಅದೇ! ಅವಳದ್ದೇ! ನಾಯಕಿಗೆ ದಿಗ್ಭ್ರಮೆಯಾಯಿತು. ಅಗಲವಾಗಿ ಕಣ್ಣುಬಿಟ್ಟು ನಿಶ್ಚೇಷ್ಟಿತಳಾಗಿದ್ದಳು. ಆ ಕ್ಷಣದಲ್ಲಿ ಅವಳ ಹಿಂದಿನ ಜೀವನವೆಲ್ಲ ಅವಳ ಮುಂದೆ ನಿಂತಂತೆ

ಹಾಯ್ದಿತು. ಅವನು ಅವಳ ಮಗ! ಇಷ್ಟುಕಾಲ ಕಳೆದುಹೋಗಿದ್ದ ಚಂದು! ತನ್ನದೇ ಪುಟ್ಟ ಚಂದು! ಹೀಗೆ ಬೆಳೆವಿದ್ದಾನೆ! ಓ; ಅದೃಷ್ಟವೆ! ಅವಳ ಬಾಯಿ ಕಟ್ಟಹೋಗಿತ್ತು; ಉಸಿರೂ ಕೂಡ.

ಅವನು ಮಾಲೆಯನ್ನು ಹಿಡಿದು ಅವಳ ಬಳಿಗೆ ಬಂದ. ಅವಳ ಕೈಗಳು ತಾವಾಗಿ ತೆರೆದುಕೊಂಡುವು. ಎದೆ ಉಬ್ಬುತ್ತಿದ್ದಿತು. ಅವಳ ಕೊರಳಿಗೆ ಮಾಲೆ ಬಿದ್ದಿತು. ಅದರ ಸೂಚನೆ! ಆದರೂ ಅವಳು ನಿಸ್ಸಹಾಯಳು. ಆಡಲು ಬಾಯಿ ಬರದು, ತಡೆಯಲು ಕೈಗೆ ಶಕ್ತಿಯಿಲ್ಲ. ಮಾಲೆ ಬಿದ್ದ ಮರುಕ್ಷಣದಲ್ಲಿ ಅವನು ಅವಳ ಕೈಗೆ ಮುತ್ತಿಡುತ್ತಿದ್ದ. ಮುಂದೆಯೂ ಬಂದ! ಅದೇನಾಯಿತೋ ಅವಳಿಗೇ ಗೊತ್ತಿಲ್ಲ; ಅವಳ ಕೈಗಳು ತಾವಾಗಿ ಅವನನ್ನು ಬಾಚಿ ಬಿಗಿದಪ್ಪಿದುವು, ತಲೆಯನ್ನು ಸೆಳೆದು ಅವಳೆದೆಗೆ ಒರಗಿಸಿದುವು. ಎದೆ ಈಗ ಹೊಯ್ದುಕೊಳ್ಳಲಾರಂಭಿಸಿತು,. ಏದುಸಿರು ಬಂದಿತು. ಕಣ್ಣು ತುಳುಕಿತು.

ಅವನೂ ಅವಳನ್ನು ತಬ್ಬಿಕೊಂಡ. ಆದರೆ ಆ ಎರಡು ಆಲಿಂಗನಗಳಿಗೂ—ಒಂದೇ ಒಂದರ ಎರಡು ಭಾಗಕ್ಕೂ—ಎಷ್ಟೊಂದು ವ್ಯತ್ಯಾಸ! ಹಾಲಿಗೂ ಹೆಂಡಕ್ಕೂ ಇರುವ ವ್ಯತ್ಯಾಸ; ವನದ ಗಾಳಿಗೂ ಬೀದಿಯ ಧೂಳಿಗೂ ಇರುವುದು; ಪ್ರೇಮ ಕಾಮಾತಿಶಯಗಳಿಗೆ ಇರುವ ಅಂತರ. ಈ ವ್ಯತ್ಯಾಸ ನಾಯಕಿಯ ಆ ಸ್ಥಿತಿಯಲ್ಲೂ ಅವಳನ್ನು ಎಚ್ಚರಿಸಿತು. ಬೆಚ್ಚಿದಳು. ಮೈ ಜುಂ ಎಂದಿತು.

"ಉಹುಂ, ಉಹುಂ!" ಕೊರಳಿನಿಂದಲೇ ಉಸುರಿ, ಗಾಬರಿಯಿಂದ ತಲೆಯಾಡಿಸುತ್ತ, ಕೈ ತೆಗೆದು, ಬಿಡಿಸಿಕೊಳ್ಳಲು ಯತ್ನಿಸಿದಳು.

"ಯಾಕೆ? ಏನಾಯ್ತು?" ಅವನು ಪಿಸಿಗುಟ್ಟುತ್ತ ಹಿಡಿತವನ್ನು ಬಲಪಡಿಸಿದ.

"ಆಗದು. ಆಗದಪ್ಪ! ಅಯ್ಯೋ, ಆಗದಪ್ಪ!" ಹೊಯ್ದಾಡಿದಳು.

"ಉಹುಂ, ನಾನು ಬಿಡೋದಿಲ್ಲ; ಉಹುಂ. ಎಂದಿಗೂ."

"ಬೇಡ, ಬೇಡ. ಕೇಳು ಕೇಳು," ಅಂಗಲಾಚಿದಳು.

ಈ ತಡೆ ಅವನಲ್ಲಿ ಆವೇಶವನ್ನು ಇನ್ನೂ ಹೆಚ್ಚಿಸಿತು.

"ಅಪ್ಪ, ನಾಳೆ ಬಾ ಮಗು. ಈಗ ಹೋಗು. ಇದು ಸರಿಯಲ್ಲ. ಈಗ ನೀನು ಸರಿಯಾಗಿಲ್ಲ. ಖಂಡಿತ. ನಾಳೆ ಬಾ, ಮಗನಂತೆ. ಈ ಹುಚ್ಚು ಕಳೆದ ಮೇಲೆ. ಸ್ವಲ್ಪ ಹೊತ್ತಾದ ಮೇಲೆ. ಅಪ್ಪುವೆಯಂತೆ."

"ಛಿ, ಛಿ. ಅದೆಲ್ಲ ಇಲ್ಲ. ಆ ವಿನೋದ ಕೇಳೋದಿಲ್ಲ, ಈಗ."

"ವಿನೋದವಲ್ಲ. ನನ್ನಾಣೆ. ನಾನು ತಾಯಿ–ಯ ಹಾಗೆ," ನಿಜವನ್ನೇ ಹೇಳಬೇಕೆಂದು ಆತುರ, ಆದರೆ ರಾಜನ ಕಡೆಯ ಕಾಗದದಲ್ಲಿದ್ದ ಅವನ ಕೋರಿಕೆ; ಅವನ ಸಮ್ಮತಿಯಿಲ್ಲದೆ ತಿಳಿಸುವುದು ಸರಿಯಲ್ಲವೆಂಬ ಭಾವನೆ; ಹಾಗೆ ಮಾಡಿಬಿಟ್ಟರೆ ಏನು ಅನರ್ಥವಾದೀತೋ ಎಂದು ರಾಜನ ಬಗ್ಗೆ ಹೆದರಿಕೆ ಈಗಲೂ ನಿಜವನ್ನು ತಡೆಯಿತು.

ಅವಳ ಹೇಳಿಕೆ ಬೇಡಿಕೆಗಳಿಗೆ ಅವನು ಕಿವುಡನಾಗಿದ್ದ.

"ಅಯ್ಯೋ, ಬೇಡ! ಹೋಗು!" ಕಡೆಗೆ ಕೆಳಧ್ವನಿಯಲ್ಲಿ ಕೂಗಿಕೊಂಡುಬಿಟ್ಟಳು; ಬಲವನ್ನೆಲ್ಲ ಬಿಟ್ಟು ಅವನನ್ನು ತಳ್ಳಿಯೂ ಬಿಟ್ಟಳು. "ನಾಳೆ. ಇನ್ನೊಂದು ವೇಳೆ....ನಾನೂ ತಬ್ಬಿ ಮುತ್ತಿಡ್ತೀನಿ, ಮಗ ಅಂತ. ಈಗ ಅಭಾಸ....ಅಸಹ್ಯ! ....ಅಸಾಧ್ಯ!"

ಇದಕ್ಕೆ ಅವನು ಸಿದ್ಧವಿರಲಿಲ್ಲ. ಸ್ವಲ್ಪ ತತ್ತರಿಸಿ ಸೋಫಾದ ಮೇಲೆ ಅತ್ತ ದೂರವಾದ. ಅವಳು ತನ್ನ ಕೊರಳನ್ನು ಸುಡುತ್ತಿದ್ದ ಜೋಮಾಲೆಯನ್ನು ತೆಗೆದು ಅವನ ಕಡೆಗೆ ತಳ್ಳಿದಳು. ಅವನು ಹುಚ್ಚುಹುಚ್ಚಾಗಿ ಹೋಗಿದ್ದ. ಅವನಿಗೆ ಅವಳ ಬೇಡಿಕೆ ತಿಳಿವಳಿಕೆಗಳು ಅರ್ಥವಾಗಲೇ ಇಲ್ಲ. ಅವಳ ನಿರಾಕರಣೆ, ಕಠಿಣದ ಮಾತುಗಳು ಕುಕ್ಕಿದುವೇ ಹೊರತು ಅವಳು ಕೊಟ್ಟ ವಿವರ, ಮಾಡಿದ ಸಮಾಧಾನ, ಕಣ್ಣಿನ ದೈನ್ಯ, ಪ್ರೇಮ, ಕನಿಕರ ಯಾವುದೂ ಅವನ ಗಮನಕ್ಕೆ ಬರಲೇ ಇಲ್ಲ. 'ತಾಯಿ, ತಾಯಿ' ಹಿಂದಿನ ತಮಾಷೆಯೆಂದೇ ಈಗಲೂ ಅವನಿಗೆ. ನಂಬುವ ಯೋಚನೆಯೇ ಬರಲಿಲ್ಲ. ಆ ಆಟ ಇನ್ನೂ ಇಲ್ಲಿಯೂ ಬಂದೀತೆಂದುಕೊಂಡಿರಲಿಲ್ಲ. ತನ್ನ ಸಮಸ್ತವನ್ನೂ ಅವಳಿಗೆ ಸಮರ್ಪಿಸಿದ್ದರೂ ತಾನಿನ್ನೂ ಅವಳಿಗೆ ಆಟದ ಸಾಮಾನಾಗಿಯೇ ಉಳಿದಿದ್ದನೆಂಬುದು ಅವನಿಗೆ ಅತ್ಯಂತ ರೋಷವನ್ನು ತಂದಿತ್ತು. ಮುಸಿಮುಸಿಗುಟ್ಟುತ್ತ ಹೆಡೆ ತುಳಿಸಿಕೊಂಡ ಸರ್ಪದ ಹಾಗೆ ತಟ್ಟನೆ ಮೇಲೆದ್ದು ನಿಂತ.

"ಹೂಂ! ಹಾಗಾದರೆ ಇಷ್ಟು ದಿನವೂ ಆಟವನ್ನೇ ಆಡುತ್ತಿದ್ದಿರಿ-ನನ್ನನ್ನು ಮೋಸಗೊಳಿಸಿ! ಇತರರೊಡನೆ ವಿನೋದವಾಡಿದ ಹಾಗೇ. ಬೇಕಾದಾಗ ಸೆಳೆದು, ನಂಬಿಸಿ, ಹುಚ್ಚುಹಿಡಿಸಿ, ಸಾಕಾದಾಗ ಎಸೆಯೋದು! ಕೇಳಿದ್ದೆ, ನಂಬಿರಲಿಲ್ಲ. ಅಬ್ಬಬ್ಬ!"

"ಅಪ್ಪ! ಗೊತ್ತಾಗೋದಿಲ್ಲವೆ ನಿಂಗೆ-ನನ್ನ ಮಾತು?"

"ಗೊತ್ತಾಯ್ತು; ಬಹಳ ಚೆನ್ನಾಗಿ ಗೊತ್ತಾಯ್ತು. ಅದಕ್ಕೇ ಎಚ್ಚೆತ್ತು ಕೊಂಡಿದೀನಿ."

"ತಪ್ಪು ಭಾವನೆ ಕೊಡಲಿಲ್ಲವಪ್ಪ-ಎಂದೂ, ಖಂಡಿತವಾಗಿ. ಸಲಿಗೆಯಿಂದಿದ್ದ...."

"ಸಲಿಗೆ! ಕತ್ತು ಕುಯ್ಯುವ ಸಲಿಗೆ. ಸಾಲದೇ? ನಾನು ಅನುಭವಿಸಿದೆನಲ್ಲ."

"ಮಗು, ಉದ್ದಕ್ಕೂ ತಿಳಿಸುತ್ತಲೇ ಬಂದೆನಲ್ಲಪ್ಪ, ತಾಯಿಯ ಭಾವನೆ...."

"ಸಾಕು! ಮತ್ತೆ ಅದೇ. ಒಳ್ಳೇ ಭಾವನೆ, ತಾಯಿಯಂತೆ-ತಾಯಿ! ಬೇಕಾದರೆ ಪ್ರಣಯಿ, ಬೇಡವಾದರೆ ತಾಯಿ! ಹೀಗೇ ಇನ್ನೆಷ್ಟು ಯುವಕರಿಗೆ ತಾಯಿಯಾಗಿದ್ದಿರಿ-ಅವರು ಬೇಡವಾದಾಗ?"

"ಅಯ್ಯೋ, ಅವರೆಲ್ಲರಿಗೂ ತಾಯಿಯಾಗಿದ್ದರೆ! ನಿಜವಾಗಿ!........ ತಾಯಿ ಅಂತ ಪ್ರೀತಿಸಲಾರೆಯ ನನ್ನ-ಈ ಹುಚ್ಚು ಬಿಟ್ಟು?"

"ಹುಂ, ತಾಯಿ, ಮಗ! ಚೆನ್ನಾಗಿದೆ! ಇಲ್ಲಿಗೆ ಬಂತೋ ಆಟ? ನಿಮ್ಮ ಕ್ರೂರ ವಿನೋದಗಳಲ್ಲಿ ಇದೂ ಒಂದೋ? ಹೊಸದು. ಹಿಂಡಿದ ಸಿಪ್ಪೆಯನ್ನು ಬಿಸುಡುವ ವರಸೆ."

"ಇಲ್ಲ, ಇಲ್ಲ! ನಾನು ತಾಯಿ ಅಂತಲೇ ಪ್ರೀತಿಸ್ತೀನಪ್ಪ ನಿನ್ನ."

"ಹುಂ, ಒಳ್ಳೇ ತಾಯಿ! ನಿಮ್ಮ ಮಾತೃಪ್ರೇಮ ಸಾಕು. ನನ್ನ ತಾಯಿಗೂ ನಿಮಗೂ ಎಷ್ಟೊಂದು ಅಂತರ ಗೊತ್ತೆ? ಅಜಗಜಾಂತರ. ಅವರು ದೊಡ್ಡ ಮನೆತನದ ಮಗಳು, ತುಂಬ ಗೌರವಸ್ಥೆ, ಆದರ್ಶ ಗೃಹಿಣಿ. ಮನೆ ಅಂದರೆ ಬಹಳ ಹೆಮ್ಮೆ; ಗಂಡ, ಮಗ ಅಂದರೆ ಪ್ರಾಣ. ದೈವಕ್ಕೆ ಸಹಿಸಲಿಲ್ಲ; ಕೊಂಡುಹೋಯ್ತು. ಆ ಪೆಟ್ಟಿನಿಂದ ನಮ್ಮ ತಂದೆ ಇನ್ನೂ ಇವತ್ತಿಗೂ ಚೇತರಿಸಿಕೊಂಡಿಲ್ಲ. ತಿಳೀತೇ? ನೀವು ಅಂದರೆ...."

" ನಾನೂ ಅಂಥವಳೇ...."

" ಓಹೋ ಹಾಗೋ! ನಂಗೇನು ಗೊತ್ತಿಲ್ಲವೆ–ನಿಮ್ಮ ವಿಷಯ? ಪತ್ರಿಕೆಗಳಲ್ಲಿ ಓದಿಲ್ಲವೆ–ಮನೆ, ಗಂಡ, ಮಗು, ಎಲ್ಲ ಬಿಟ್ಟು ಓಡಿಹೋದ ನಟಿ ಅಂತ?"

" ಓಡಿಹೋದವಳು! ಅದು ನಿಜವಲ್ಲ. ಕಲೆಗಾಗಿ ಎಲ್ಲವನ್ನೂ ತೊರೆದೆ–ನಿಜ," ಅವಳ ಚೇತನ ಸೆಡಕಿನಿಂದ ಎದ್ದು ಸಮರ್ಥಿಸಿಕೊಂಡಿತು.

" ಅದೆಲ್ಲ ಪತ್ರಿಕೆಯ ಕತೆ, ಹೇಳಿಕೆ: ಹೆಸರು ಮಾಡಿದೋರನ್ನ ಹೇಗಾದರೂ ಹೊಗಳುತ್ತಲೇ ಇರೋದು, ಅವರ ತಪ್ಪನ್ನೆಲ್ಲ ಅಪರಾಧವನ್ನೆಲ್ಲ ಮುಚ್ಚಿ ಮೇಲೆ ಬಣ್ಣ ಹಾಕೋದು ಅವುಗಳ ಕೆಲಸ. ಕಂಡಿಲ್ಲವೆ? ಕಲೆಗಂತೆ! ಅದು ಬಿಟ್ಟು ನಟಿಯ ಕೆಟ್ಟ ಚಾಳಿಗಾಗಿ ಅನ್ನಿ."

" ಛಿ! ಛಿ! ಸುಳ್ಳು. ಅಂದಿನಿಂದ ಇಂದಿನವರೆಗೂ ಶುದ್ಧವಾಗೇ ಬಾಳುತ್ತ ಬಂದಿದೀನಿ."

" ಕಲೆಯ ಕತೆಯಾಯ್ತು; ಈಗ ಶುದ್ಧ ನಡತೆ ಮಾತು ಬೇರೆ. ನಾನು ಇಷ್ಟೆಲ್ಲ ಕೇಳಿ ಕಂಡು ಅನುಭವಿಸಿದ ಮೇಲೂ ನಿಮ್ಮ ಮಾತನ್ನೆಲ್ಲ ನಂಬ ಬೇಕೋ? ನಿಜವಾದ ಹೆಂಡತಿ ಗಂಡನನ್ನು, ತಾಯಿ ಮಗುವನ್ನು ಬಿಡುತ್ತಾಳೇ–ಇನ್ನ ಯಾವುದಕ್ಕಾದರೂ, ಜಗತ್ತಿಗೇ ಆದರೂ? ಅದೂ ಕಲೆಗಾಗಿ, ಹ್ಞ! ಉಹುಂ, ಅಸಾಧ್ಯ."

" ಸಾಧ್ಯ; ಈ ನಿರ್ಭಾಗ್ಯೆ ಹಾಗೆ ಮಾಡಿದಾಳೆ."

" ಒಪ್ಪಲಾರೆ. ಒಂದು ವೇಳೆ ಅಂಥವಳೂ ಇದ್ದರೆ, ಆ ತಾಯಿಗೆ ಏನು ಬೆಲೆ? ಅಂಥ ತಾಯಿ ಪ್ರೀತಿಗೆ ಅರ್ಹಳೆ? ಅದೂ ಇಂಥ ನಾಚಿಕೆಯಿಲ್ಲದ ಚೆಲ್ಲಾಟದ ಹೆಂಗಸಾಗಿರೋಳು! ತಾಯಿ ಅಂತ ಪ್ರೀತಿಸಬೇಕಂತೆ ನಾನು, ಹ್ಞ! ಉಹುಂ, ನೀವು ಒಂದು ವೇಳೆ ತಾಯಿಯೇ ಆಗಿದ್ದರೂ ನಿಮ್ಮನ್ನೆಂದಿಗೂ ಒಪ್ಪಿಕೊಳ್ಳುತ್ತಿರಲಿಲ್ಲ. ಮತ್ತೆ ನಂಗೆ ನೀವೇನೂ ಆಗದಿರುವಾಗ ನಿಮ್ಮನ್ನು ನೋಡೋದೂ ಬೇಡವಾಗಿದೆ. ಪ್ರೇಯಸಿ ಆಯ್ತು; ಈಗ ತಾಯಿ! ಸಾಕು, ಸಾಕು!" ತಿರಸ್ಕಾರ ವ್ಯಂಗ್ಯ ಸಿಟ್ಟುಗಳಿಂದ ಬಾಯಿ ಸೊಟ್ಟ ಮಾಡಿ ನಕ್ಕು ಹೊರಡಲು ತಿರುಗಿದ.

ಆಗಲೂ ಅವಳಿಗೆ 'ನಿಜವನ್ನು ಹೇಳಿಬಿಡಲೆ?' ಎಂದು ಆತುರ. 'ಹೇಳಿದರೂ ಅವನು ನಂಬುವ ಸ್ಥಿತಿಯಲ್ಲಿದ್ದಾನೆಯೇ?' ಎಂದು ಅನು

ಮಾನ. 'ಒಪ್ಪಿಕೊಂಡೂ ತಿರಸ್ಕರಿಸಿ ತುಚ್ಛೀಕರಿಸಿಬಿಟ್ಟರೆ!' ಎಂಬ ಭಯ. ಹಾಗೇ ರಾಜನ ಕೋರಿಕೆಯು ಬಾಧೆ ಪೇರಿ. ರಾಜನನ್ನೇ ಮರೆ ಹೋಗುವುದೆಂದುಕೊಂಡಳು. ಅವರಲ್ಲೂ ಭರವಸೆಯಿಲ್ಲ. ನುಂಗಲಾರದ ಉಗುಳಲಾರದ ತುತ್ತು. ಅಂತೂ ನುಂಗಿಕೊಂಡಳು. "ಅಪ್ಪ, ಸಿಟ್ಟಿನಿಂದ ಹೋಗಬೇಡ. ಸ್ವಲ್ಪ ತಾಳು," ಎಂದು ಮಾತ್ರ ಅಂಗಲಾಚಿದಳು.

"ಛಿ, ಇಲ್ಲಿ ಒಂದು ಕ್ಷಣವೂ ಇರಲಾರೆ. ಹುಚ್ಚು ಹಿಡಿದೀತು." ಹೆಜ್ಜೆಯಿಟ್ಟ.

"ಮಗು, ನಿಂಗೆ ಇದರಿಂದ ವ್ಯಥೆಯಾಗುವುದಿಲ್ಲವೆ? ನನ್ನ ಮೇಲೆ ಅಷ್ಟಿಷ್ಟು ಕನಿಕರ ಹುಟ್ಟುವುದಿಲ್ಲವೆ? ಸ್ವಲ್ಪ ಯೋಚಿಸು! ನಿಲ್ಲು! ಹಿಂದಿರಿಗು!" ನಿಸ್ಸಹಾಯತೆಯ, ನಿರಾಸೆಯ, ಸಂಕಟದ ಕೂಗು.

"ಮಗನ ಪ್ರೇಮ, ಅದು ನಿಮ್ಮಂಥ ತಾಯಿಯ ಮೇಲೆ. ಎದೆಗೆ ಬಂದಾಗ ಹಿಂದಿರುಗುತ್ತೀನಿ, ಹ್ಹ! ಈ ಜನ್ಮದಲ್ಲಂತೂ ಇಲ್ಲ. ನಮಸ್ಕಾರ! ದೊಡ್ಡ ನಮಸ್ಕಾರ!" ಎರಡು ಹೆಜ್ಜೆಯಿಟ್ಟು ಚಿತ್ರದ ಮುಂದೆ ತಡೆದ. "ಹುಂ. ನನ್ನ 'ಮಾಸ್ಟರ್‌ಪೀಸ್!' ಇದರಿಂದ ಜಗತ್ಪ್ರಸಿದ್ಧಿ! ಬಹುಮಾನ! ಆಹಾ, ಎಷ್ಟು ಚೆನ್ನ! ........ಹುಂ, ಎಂಥ ಜೀವಂತ ಚಿತ್ರ! ಎದೆಯಿಲ್ಲದ ವಿಚಿತ್ರ!" ಇದಿರಿಗಿದ್ದ ಬಣ್ಣದ ತಟ್ಟೆಯನ್ನು ತೆಗೆದು ಚಿತ್ರಕ್ಕೆ ಎಸೆದುಬಿಟ್ಟ.

"ಹ!" ನಾಯಕಿಯ ಎದೆಗೆ ಶೂಲ ತಿವಿದಂತಾಯಿತು. ಅಳು ಬಿಕ್ಕಿತು.

ಚಿತ್ರದ ಮುಖಕ್ಕೆ ಬಣ್ಣದ ಚಟ್ಟು ಬಡಿದು ಹಾಳಾಯಿತು. ಅವನು ಮುಂದೆ ನಡೆದ.

"ಮಗು! ಬಾ! ಹೋಗಬೇಡ! ....ಕೇಳು!" ಆರ್ತಳಾಗಿ ಕೂಗುತ್ತ ಅವನನ್ನು ಹಿಂಬಾಲಿಸಿ ಕೈಹಿಡಿದುಕೊಂಡಳು.

"ಹುಚ್ಚಿ!" ಕೈಕೊಡಹಿಕೊಂಡು ದಡದಡನೆ ಮಹಡಿ ಇಳಿದು ಹೊರಟುಹೋದ.

ನಾಯಕಿ ಅಲ್ಲೇ ನೆಲದ ಮೇಲೆ ಕುಸಿದಳು. ಜೋರಲಾಗಿ ಬಿದ್ದುಕೊಂಡು ಧಾರಾಳವಾಗಿ ಬಿಕ್ಕಿಬಿಕ್ಕಿ ಅತ್ತಳು. ಅಳುವನ್ನು ಕೇಳಿ ಹೆಣ್ಣಾಳು ಓಡಿಬಂದಳು. ಆದರೆ ಅವಳನ್ನು ಕೈಸನ್ನೆಯಿಂದಲೇ ಕಳುಹಿಸಿಬಿಟ್ಟಳು. ಅವಳು ಅಳಬೇಕಾಗಿತ್ತು, ಅಳಬೇಕಾಗಿತ್ತು. ಎದೆಯೊಡೆದು ಹೋಗುವಂತೆ

ಅಳಬೇಕಾಗಿತ್ತು. ಅಳಿದುಹೋಗುವವರೆಗೂ ಅಳಬೇಕಾಗಿತ್ತು. ಅಷ್ಟೊಂದೇ ಗೊತ್ತು ಅವಳಿಗೆ. ಬೇರೆ ಯಾವ ಭಾವನೆಯನ್ನೂ ಬಿಡಿಸಲಾರಳು. ಸ್ವಲ್ಪ ಸ್ವಲ್ಪ ಸಮಾಧಾನವಾದಂತಾದಾಗಲೂ ಮತ್ತೆ ಮತ್ತೆ ತನ್ನ ಬಾಳಿನ ಆಸ ನಿರಾಸೆಗಳೆಲ್ಲ, ನೋವುಗಳೆಲ್ಲ, ಅಂದಾದ ತನ್ನ ಕಂದನ ತಿಳಿವಳಿಕೆ, ಅವನ ಕೋಪದ ತಿರಸ್ಕಾರ ಎಲ್ಲವೂ ಮುಗುಚಿ ಮುಗುಚಿ ಮೋಡಗಳಂತೆ ಕವಿದು ಬರುತ್ತಿದ್ದವು, ದುಃಖವನ್ನು ಕರೆಯುತ್ತಿದ್ದವು, ಹುಚ್ಚು ಹೊಳೆಯಾಗಿ ಹರಿದು ಅವಳನ್ನು ಕೊಚ್ಚುತ್ತಿದ್ದವು. ಈ ಸ್ಥಿತಿಯಲ್ಲೂ—ಹೀಗೆ ಮುಳು ಮುಳುಗಿ ಮೇಲೇಳುವಾಗಲೂ—ಅವಳಿಗೊಂದು ಆಶಾಕಿರಣದ ಕಿರು ತಾರೆ ಯೊಂದು ಕಾಣುತ್ತಿತ್ತು. ಮಿಣಿಮಿಣಿಕಿ ಕರೆಯುತ್ತಿತ್ತು. ಕೋಪವಿಳಿದ ಮೇಲೆ, ಸಮಾಧಾನ ಬಂದ ಮೇಲೆ, ಸತ್ಯ ತಿಳಿದಾಗ, ಕನಿಕರ ಹುಟ್ಟಿದಾಗ, ತನ್ನ ಕಂದ ಹಿಂದಿರಿಗಿ ಬಂದಾನೆಂಬುದು. ಇದನ್ನು ನಂಬಿ ನೋವನ್ನೆಲ್ಲ ನುಂಗಿಕೊಳ್ಳಲು ಹೆಣಗುತ್ತಿದ್ದಳು. ಹಾಗೂ ಹಿಂದೆಯೇ 'ಏನು ತಿಳಿದರೂ ಅವನು ಅವಳನ್ನು ಒಪ್ಪಿಕೊಳ್ಳಲಾರ—ಅವನ ಸ್ವಭಾವ ಅಂತಹದೇ. ಹಿಂದಿರುಗುವುದೂ ಇಲ್ಲ' ಎಂಬ ಭಯದಿಂದ ದುಃಖ ಮರುಕಳಿಸುತ್ತಿತ್ತು.

ಅವಳ ಸ್ಥಿತಿ ಸ್ವಲ್ಪ ಹತೋಟಿಗೆ ಬಂದಾಗ ಮೊದಲನೆಯ ಯೋಚನೆ ರಾಜನಿಗೆ ಬರೆಯಬೇಕೆಂದುಕೊಂಡಿದ್ದ ಕಾಗದದ್ದು. 'ಆಹಾ ಅವರು ಸ್ವಲ್ಪ ಸಹಾಯವಾದರೆ, ಕರುಣೆ ತೋರಿದರೆ! ಈ ಅನರ್ಥ ಈಗಲೂ ಸರಿಹೋಗ ಬಹುದಾದ ಅಷ್ಟಿಷ್ಟು ಆಶೆ ಇನ್ನೂ ಇತ್ತು. ಆಗ ಇಷ್ಟೊಂದು ವರ್ಷಗಳ ಕೊರತೆಯನ್ನೂ ತಾನು ಮರೆಯಬಹುದು. ಮತ್ತೆ ಮನೆ, ಅವರು— ಬಹುಶಃ ಮಗನೂ. ಓ, ಎಷ್ಟು ಚೆನ್ನ! ತನಗಿತ್ತೆ, ಅಷ್ಟೊಂದು ಅದೃಷ್ಟ!

ಎಷ್ಟು ಕಾಲದ ಮೇಲೆ ಭೇಟಿ! ಆಹಾ, ಎಂಥ ಭೇಟಿ! ....ಹುಂ.... ಆದರೆ ಸಾಧ್ಯವೆ? ....ಅವರು ಒಪ್ಪಿಯಾರೇ? ........ಅಥವ ಹಿಂದಿನ ಬೆಲೆ ಯನ್ನೇ ಕೇಳಾರೋ? ....ಹುಂ, ಆಗ? ........ಉಹುಂ, ಅದು ಮಾತ್ರ ಆಗದು! ತನ್ನ ದಾರಿ ತಪ್ಪಲ್ಲ. ಅದಕ್ಕಾಗಿ ಏನಾದರೂ ಸೈರಿಸುವುದೆ— ಈಗಿನ ಹಾಗೆ....ಛಿ, ಆ ಯೋಚನೆ ಯಾಕೆ—ಈಗಲೇ. ಅಷ್ಟು ನಿರ್ದಯ ರಾಗಿದ್ದಾರೇ—ಎಲ್ಲ ತಿಳಿದ ಮೇಲೆ? ಏನೋ ಹೇಗಿರುವುದೋ—ಅಷ್ಟು ಹಟ ತೊಟ್ಟೋರು, ಅವರು? ತಾನು ಬದುಕಿಲ್ಲವೆಂದೇ. ಮಗನಿಗೆ ಹೇಳಿರೋರು ....ಅಬ್ಬಬ್ಬ! ....ಅವರ ಉತ್ತರ ಏನಾದೀತು? ಪತ್ತೆಮಾಡಿದಳೆಂದು ಕೋಪ

ಗೊಂಡಾರೋ–"ಹುಡುಕಬಾರದು, ಅನರ್ಥವಾದೀತು" ಎಂದು ಖಂಡಿತವಾಗಿ ಬರೆದಿದ್ದರಲ್ಲ. ಮತ್ತೆಲ್ಲಾದರೂ ಪತ್ತೆಯಾಗದಂತೆ ಹೊರಟುಹೋಗುತ್ತಾರೋ.... ಆದರೂ ಬರೆದು ನೋಡುವುದೆ. ಆದದ್ದಾಗಲಿ ಅಂತ. ಇಷ್ಟಕ್ಕೂ ತನಗೆ ಇನ್ನು ಯಾವ ದಾರಿ ತಾನೆ ಇದೆ? ....ಹುಂ, ಬರೆದುಬಿಡೋದು.... ಮರುಗಿಯಾರು........ಹುಂ, ಹುಂ........ಏನು ಬರೆಯೋದು? ಹೇಗೆ? ಅವರು ಇದ್ದಲ್ಲಿಗೇ ಹೋದರೋ? ........ಉಹುಂ. ಉಹುಂ' ಅವಳಿಗೆ ಹೋಗಲು ಧೈರ್ಯ ಬರಲಿಲ್ಲ. ಬರೆಯುವುದನ್ನೇ ನಿಶ್ಚಯಿಸಿದಳು.

ಕಾಗದ ಪೆನ್ ತೆಗೆದುಕೊಂಡಾಗ ತನ್ನ ಎದೆಯನ್ನೆಲ್ಲ ಬಿಚ್ಚಿ ಹರಡಿ ಹತ್ತಾರು ಪುಟಗಳನ್ನು ತುಂಬಿದಳು. ಅವಳ ಕತೆ, ಮಗನ ಕತೆ ಎಲ್ಲ ಬಂದುವು. ತನ್ನ ವರ್ತನೆಯ ಸಮರ್ಥನೆ, ಮೂರು ಪುಟದ ತುಂಬ. ದಯೆಗಾಗಿ ದೈನ್ಯದ ಬೇಡಿಕೆ ಪುಟ ಪುಟಗಳಲ್ಲಿ ಕಂಡಿದ್ದರೂ, ಕಡೆಯ ಪುಟವೆಲ್ಲ ಮತ್ತೆ ಅದೇ. ಗಡಿಯಾರ ಹನ್ನೊಂದನ್ನು ಹೊಡೆಯಿತು. ಮತ್ತೊಮ್ಮೆ ಕಾಗದವನ್ನು ಓದಿದಳು. ಸರಿಯಾಗಿ ಕಾಣಲಿಲ್ಲ. ಅದರ ಅತಿ ದೈನ್ಯ ಅವಳಿಗೆ ಹಿಂಸೆಕೊಟ್ಟಿತು. ಯಾವ ಅಪರಾಧಕ್ಕಾಗಿ? ಎಂದು ಯೋಚಿಸಿಕೊಂಡಳು. ಹಾಗೇ ಮಗನ ಕತೆಯನ್ನು ಬರೆಯಬಾರದಾಗಿತ್ತು ಎನ್ನಿಸಿತು. ಇದನ್ನು ಬರೆಯುವುದರಿಂದ ಅನಾನುಕೂಲವೇ ಅಪಕಾರವೇ ಆದೀತೆಂದುಕೊಂಡಳು. ಕಾಗದವನ್ನು ಹರಿದುಹಾಕಿದಳು. ಇನ್ನೊಂದನ್ನು ಬರೆದಳು. ಅದೂ ಬಹಳ ಉದ್ದವಾಯಿತು. ತಡೆಯದೆ ಮುನ್ನುಗ್ಗಿ ಬರುವ ಭಾವನೆಗಳ ಹಿಂಡನ್ನೇ ತುಂಬುತ್ತಿದ್ದರೆ ಬೇರೆ ಹೇಗಾದೀತು? ಈ ಕಾಗದದಲ್ಲೂ ಅತೃಪ್ತಿ ಹುಟ್ಟಿತು. ಹರಿದುಹಾಕಿದಳು. ಒಂದು ಗಂಟೆ! ಮತ್ತೊಂದನ್ನು ಮೊದಲು ಮಾಡಿದಳು. ಅದನ್ನೂ ಹರಿದುಹಾಕುವಾಗ ನಾಲ್ಕು ಗಂಟೆ! ಬೆಳಗ್ಗೆ ಆರು ಗಂಟೆಯಲ್ಲೂ ಬರೆಯುತ್ತಲೇ ಇದ್ದಳು. ಆದರೆ ಒಂದೂ ಸರಿಹೋಗಲಿಲ್ಲ. ಕಟ್ಟಕಡೆಗೆ ಇಷ್ಟನ್ನೇ ಬರೆದಳು:

' ದೇವರೆ,

ನಾನು ಬಹಳ ಸಂಕಟದಲ್ಲಿದ್ದೇನೆ. ಮಗುವಿನ ಮುಖವನ್ನು ಮತ್ತೊಮ್ಮೆ ನೋಡಲು ಸಹಾಯಮಾಡಿ. ನಿಮ್ಮ ಎದೆಯ ಮೇಲೆ ನನ್ನ ತಲೆಯಿಡುವ ಹಂಬಲು ತೃಪ್ತಿಗೊಳ್ಳುವಂತೆ ಕರುಣಿಸಿ.

ನಿಮ್ಮವಳೇ,
ನಾಯಕಿ.'

ಹಿಂದೆ ಪುಣೆಯಿಂದ ಚಂದು ಬರೆದಿದ್ದ ಒಂದು ಕಾಗದದಿಂದ ವಿಳಾಸ ಸಿಕ್ಕಿತು. ಕಾಗದವನ್ನು ಹಾಕಿ ಮುಳ್ಳಿನ ಮೇಲೆ ಕುಳಿತು, ಹೊರಳಿ, ಉತ್ತರವನ್ನು ನಿರೀಕ್ಷಿಸುತ್ತಿದ್ದಳು. 'ಏನನ್ನು ಬರೆದಾರು? ಹೇಗೆ ಬರೆದಾರು? ಅವರೇ ಬಂದಾರು! ಹುಂ, ಚಂದುವನ್ನೂ ಕರೆತಂದಾರು! ಓ, ಆಸೆಯೆ! ........ಎಂಥ ಉತ್ತರವೋ ಏನೋ........ಇಲ್ಲ. ಇಲ್ಲ. ಆಸೆ ಇದೆ!' ಈ ಅನಿಶ್ಚಯದ ತಳಮಳದಲ್ಲಿ ಅವಳು ಒಂದು ದಿನವನ್ನೆಲ್ಲ ಒಂದು ರಾತ್ರಿಯನ್ನೆಲ್ಲ ಗಳಿಗೆಗೊಂದು ಯುಗದಂತೆ ಕಳೆಯಬೇಕಾಯಿತು. ಮಾರನೆಯ ಬೆಳಿಗ್ಗೆ ಉತ್ತರದ ನಿರೀಕ್ಷಣೆ. ಬರಲಿಲ್ಲ. 'ಯಾಕೆ–ಈ ತಡ? ಯೋಚಿಸುತ್ತಿರಬಹುದೆ? ಹೌದು. ಒಪ್ಪದಿದ್ದರೆ ಒಂದು ಸಾಲು ಗೀಚಿಹಾಕಿ ಬಿಡುತ್ತಿದ್ದರು. ಈ ತಡ ಶುಭ ಸೂಚನೆ! ಹುಂ! ........ ಅಥವ ಬರೆಯುವುದೇ ಇಲ್ಲವೊ? ....ಅ! ....ಉಹುಂ, ಹಾಗಿರಲಾರದು' ಅವಳ ಯೋಚನೆ ಸಮುದ್ರದ ಅಲೆಗಳು ಎದ್ದೆದ್ದು ಮುಗುಚಿ ಮುಗುಚಿ ದಡವನ್ನು ಬಡಿಯುವಂತೆ.

ಮಧ್ಯಾಹ್ನ ಕಾಗದ ಬಂದಿತು.

'ನಿನಗಾಗಿ ಮರುಗುತ್ತೇನೆ. ಆದರೆ ನಿನ್ನ ತಪ್ಪು ದಾರಿಯನ್ನು ಬಿಡದೆ ಈ ಕೋರಿಕೆ ಸಾಧ್ಯವಿಲ್ಲ. ಹಾಗಿಲ್ಲದಿದ್ದರೆ ದಯವಿಟ್ಟು ನಮ್ಮಷ್ಟಕ್ಕೆ ನಮ್ಮನ್ನು ಬಿಟ್ಟುಬಿಡು ನಮ್ಮ ಪತ್ತೆ ಹಚ್ಚದಿದ್ದರೇ ಚೆನ್ನಾಗಿತ್ತು. ಇನ್ನಾದರೂ ಮುಂದುವರೆಯಬೇಡ.'

ಓದುತ್ತಿದ್ದಂತೆ ಅವಳ ಕೈನಡುಗಿ ಚೀಟಿಯೊಂದು ಮಡಿಲಿಗೆ ಬಿದ್ದಿತು. "ಎಂಥ ಕಾಗದ! ಎಷ್ಟು ಬೋಳು! ........'ತಪ್ಪುದಾರಿಯನ್ನು ಬಿಡದೆ ಕೋರಿಕೆ ಸಾಧ್ಯವಿಲ್ಲ!' ........ಸಾಧ್ಯವಿಲ್ಲ! ....'ಇನ್ನಾದರೂ ಮುಂದುವರೆಯಬೇಡ' ........'ಮುಂದುವರೆಯಬೇಡ' ಅಯ್ಯೋ!" ಹೊರಹೊರಡದ ಸ್ವರದಿಂದ ತನ್ನಷ್ಟಕ್ಕೆ ತಾನೇ ಹೇಳಿಕೊಂಡಳು. ಅವಳ ಬಿಕ್ಕಟ್ಟಿನಲ್ಲಿ ತಟ್ಟನೆ 'ಮಗನಿಗೆ ವಿಶದವಾಗಿ ಬರೆದರೋ?' ಎನ್ನಿಸಿತು. ಆದರೆ ತಕ್ಷಣದಲ್ಲೇ ರಾಜನನ್ನು ನೆನೆಸಿಕೊಂಡು 'ಆಗದು, ಆಗದು. ಅವರು ಇಷ್ಟು ನೊಂದಿರೋದೇ ಸಾಕು' ಎಂದುಕೊಂಡು ಅದನ್ನು ಮನಸ್ಸಿನಿಂದ ಒತ್ತರಿಸಿಬಿಟ್ಟಳು. ಮತ್ತೆ ಚೀಟಿಯನ್ನು ತೆಗೆದುಕೊಂಡು ದಿಟ್ಟಿಸಿ ನೋಡಿದಳು. 'ತಪ್ಪುದಾರಿ........ತಪ್ಪುದಾರಿಯೇ? ತಪ್ಪು ಮಾಡಿದೆನೆ?

........ಅ? ........ಉಹುಂ! ತಪ್ಪು....ಮಾಡಿಲ್ಲ....ತಪ್ಪು....ಮಾಡಿಲ್ಲ'
ಇನ್ನೂ ಒಳಧ್ವನಿಯಲ್ಲೇ ಹೇಳಿಕೊಳ್ಳುತ್ತ ಮೆಲ್ಲಗೆ ತಲೆಯಾಡಿಸಿದಳು. ಮತ್ತೆ ಮತ್ತೆ ಅದನ್ನೇ ಹೇಳಿಕೊಂಡಳು–ಹುಚ್ಚಿಯ ಹಾಗೆ. ಅವಳಿಗೆ ಎತ್ತೆತ್ತಲೂ ನಿರಾಸೆಯ ಕತ್ತಲೆ ಕವಿದಿತ್ತು. ವ್ಯಥೆ ಪೂರ್ತಿಯಾಗಿತ್ತು; ಕಣ್ಣೀರಿಗೂ ಸ್ಥಳವಿರಲಿಲ್ಲ.

ನಾಯಕಿ ಕತ್ತಲಾಗುವವರೆಗೂ ಅಲ್ಲಿಯೇ ಕುಳಿತಿದ್ದಳು. ಅನಂತರ ಮಲಗುವ ಕೋಣೆಗೆ ಹೊರಟುಹೋದಳು. ಆ ರಾತ್ರಿ ಮಹಲಿನಲ್ಲಿ ದೀಪ ವಿಲ್ಲ, ಊಟವಿಲ್ಲ.

ಬೆಳಿಗ್ಗೆ ಬೊಂಬಾಯಿಗೆ ದೊಡ್ಡ ಬಾಂಬು ಬಡಿದಿತ್ತು–ಮಾಲಾಳ ಮರಣ. ಬೊಂಬಾಯಿ ಸ್ಟೇಷನ್ ರೇಡಿಯೋವಿನ ಬೆಳಗಿನ ವಾರ್ತಾ ಪ್ರಸಾರದಲ್ಲಿ ಈ ರೀತಿ ತಿಳಿಸಲಾಗಿತ್ತು:

'ಸ್ವಲ್ಪ ಹೊತ್ತಿನ ಕೆಳಗೆ ಗೊತ್ತಾದ ದುರ್ಘಟನೆಯೊಂದನ್ನು ತಿಳಿಸಲು ಬಹಳ ವ್ಯಥೆಯಾಗುತ್ತದೆ. ಭಾರತದ ಅತ್ಯಂತ ಸುಪ್ರಸಿದ್ಧ ನಟಿ ಶ್ರೀಮತಿ ಮಾಲಾದೇವಿಯವರು ನಿನ್ನೆ ರಾತ್ರಿ ನಿಧನರಾದರೆಂದು ತಿಳಿದು ಬಂದಿದೆ. ಕೆಲಸದ ಒತ್ತಡದಿಂದ ನರದೌರ್ಬಲ್ಯ ಹೆಚ್ಚಿ, ಅವರ ಆರೋಗ್ಯ ಬಹಳ ಕಾಲದಿಂದಲೂ ಸೂಕ್ಷ್ಮವಾಗಿದ್ದಿತಂತೆ. ಈ ಕಾರಣದಿಂದ ಅವರು ಆಗಾಗ ನಿದ್ರೆಗೋಸ್ಕರ ಗುಳಿಗೆಗಳನ್ನು ತೆಗೆದುಕೊಳ್ಳುವ ಅಭ್ಯಾಸವನ್ನು ಮಾಡಿಕೊಂಡಿದ್ದರಂತೆ. ನಿನ್ನೆ ರಾತ್ರಿ ತೆಗೆದುಕೊಂಡ ಗುಳಿಗೆಗಳ ಪ್ರಮಾಣದಿಂದ ಈ ದುರಂತ ಸಂಭವಿಸಿತೆಂದು ಡಾಕ್ಟರು ಅಭಿಪ್ರಾಯಪಡುತ್ತಾರೆ. ಇದಂತೂ ವ್ಯಥೆಯನ್ನು ಬಹಳವಾಗಿ ಹೆಚ್ಚಿಸುವ ಸಂದರ್ಭ. ಶ್ರೀಮತಿಯವರ ಈ ಅಕಾಲ ಮರಣದಿಂದ ಭಾರತದ ರಂಗಭೂಮಿಗೆ ಆಗಿರುವ ಅಪಾರ ನಷ್ಟವನ್ನು ಅಳೆಯುವುದು ಸಾಧ್ಯವಿಲ್ಲ. ಭಗವಂತನು ಅವರ ಆತ್ಮಕ್ಕೆ ನಿರಂತರವಾದ ಶಾಂತಿಯನ್ನು ಕರುಣಿಸಲಿ.'

ಈ ಪ್ರಸಾರದಿಂದ ಮತ್ತು ಇತರ ದಾರಿಗಳಿಂದ ನಾಯಕಿಯ ಮರಣದ ಸುದ್ದಿ ಅನೇಕ ಕಡೆಗಳಲ್ಲಿ, ಅದೂ ಬೊಂಬಾಯಿ ಪೂನ ಮೊದಲಾದ ಊರುಗಳಲ್ಲಿ ಕೆಲವೇ ಗಂಟೆಗಳೊಳಗಾಗಿ ಎಲ್ಲೆಲ್ಲಿಯೂ ಹರಡಿಬಿಟ್ಟಿತು. ನಾಲ್ಕು ಗಂಟೆಗೆ ಹೊರಬಿದ್ದ ಸಂಜೆ ಪತ್ರಿಕೆಗಳು ಈ ವಿಷಾದದ ಸಮಾಚಾರವನ್ನು ಕಪ್ಪು ಅಂಚಿನ ಮಧ್ಯೆ ದಪ್ಪ ದಪ್ಪ ಅಕ್ಷರಗಳಲ್ಲಿ ಪ್ರಕಟಿಸಿದ್ದುವು.

ಪತ್ರಿಕೆ ಹುಡುಗರು ಬೀದಿ ಬೀದಿಗಳಲ್ಲಿ ಕೂಗುತ್ತಿದ್ದರು. 'ಮಹಾ ಪ್ರಸಿದ್ಧ ನಟಿ ಮಾಲಾಳ ಮರಣ!', 'ಅಭಿನಯದಲ್ಲಿ ಒಂದು ಯುಗ ಕಳೆಯಿತು–ಮನೋಹರ ಮಾಲಾ ತೀರಿಕೊಂಡಳು!', 'ಕೋಟ್ಯಾನು ಕೋಟಿ ಎದೆಗಳ ರಾಣಿ–ಮಾಲಾ ಕಣ್ಮರೆಯಾದಳು!', 'ಅಭಿನಯ ಸಾಮ್ರಾಜ್ಞಿಯ ಆಡಳಿತ ಕೊನೆಗಂಡಿತು–ಮಾಲಾ ಕಾಲವಾದಳು!', 'ನಾಟಕ ಮುಕುಟ ಮಣಿ ಕಳಚಿಬಿತ್ತು. ಇನ್ನಿಲ್ಲ ಮಾಲಾ!', 'ಸಿನಿಮಾ ಜಗತ್ತಿನ ಪ್ರೇಯಸಿಯ ಸಾವು' ಈ ಬಗೆಯ ನೂರಾರು ಮೇಲುಬರಹಗಳ ಕೆಳಗೆ ಅವಳ ಚರಿತ್ರೆ–ತಿಳಿದಮಟ್ಟಿಗೆ; ಕಲಾ ಪ್ರಶಂಸೆ, ಸಂತಾಪ ಸೂಚನೆಗಳು ಉದ್ದುದ್ದವಾಗಿ ಕಾಲಂಗಳಲ್ಲಿ ತುಂಬಿದ್ದುವು. 'ಈವಿನಿಂಗ್ ನ್ಯೂಸ್' ಪತ್ರಿಕೆ ಉಪಸಂಪಾದಕೀಯವನ್ನು ಬರೆಯುತ್ತ 'ಅಂತಹ ಅಭಿನಯ ಅತ್ಯಪೂರ್ವ; ಆ ಆನಂದದ ದಿನಗಳು ಆಗಿಹೋದುವು ಎಂದೇ ಬಹಳ ವ್ಯಥೆಯಿಂದ ಹೇಳಬೇಕಾಗಿದೆ. ಈ ಶೂನ್ಯವನ್ನು ಭರ್ತಿಮಾಡುವುದೇನು ಸಾಮಾನ್ಯವಲ್ಲ; ಸಾಧ್ಯವಿಲ್ಲವೆಂದೇ ಹೇಳಿದರೂ ತಪ್ಪಾಗಲಾರದು. ಶ್ರೀಮತಿ ಮಾಲಾದೇವಿ ತಮ್ಮ ವಿಶೇಷ ಸೌಂದರ್ಯದಿಂದ, ಸುಮಧುರ ಗಾನ ವಾಣಿಗಳಿಂದ, ಅಮೋಘ ಅಭಿನಯದಿಂದ ಹೇಗೆ ಕಲಾ ಪ್ರಪಂಚವನ್ನೇ ಗೆದ್ದು ಸೂರೆಗೊಂಡಿದ್ದರೋ, ಹಾಗೇ ವ್ಯಕ್ತಿಜೀವನದಲ್ಲಿ ಸರಳ ಗಾಂಭೀರ್ಯದಿಂದ, ಸಹೃದಯದಿಂದ, ಪರಿಚಯವಾದವರೆಲ್ಲರಿಂದಲೂ ಮೆಚ್ಚಿಗೆ ಪಡೆದಿದ್ದರು. ಅವರ ಕೊಡುಗೈ ಸಹಾಯವನ್ನು ಕೇಳಿ ಪಡೆಯದವರೇ ಇಲ್ಲ. ಅವರ ಸಾರ್ವಜನಿಕ ದಾನ, ಇತರ ಚಟುವಟಿಕೆಗಳಂತೂ ಪ್ರಸಿದ್ಧವಾಗಿಯೇ ಇವೆ. ಅವರು ತಮ್ಮ ಪ್ರತಿಭೆಯನ್ನರಿತುಕೊಂಡು ಕಲೆಯ ಹುಚ್ಚಿಗಾಗಿ ಪಟ್ಟ ಕಷ್ಟ, ಮಾಡಿದ ಬಲಿದಾನ ಅಷ್ಟಿಷ್ಟಲ್ಲವೆಂದು ತಿಳಿಯುತ್ತೇವೆ. ಅವು ಅತ್ಯಂತ ಯಶಸ್ವಿಯಾದುವೆಂದು ಹೇಳಲೇಬೇಕಾಗಿಲ್ಲ. ಸುಸಂಸ್ಕೃತ ಸ್ತ್ರೀಯರು ಅಭಿನಯ ಪ್ರಪಂಚಕ್ಕಿಳಿಯಲು ಹಿಂಜರಿಯುತ್ತಿರುವ ಕಾಲದಲ್ಲಿ, ನಾಟಕ ವಾತಾವರಣದಲ್ಲಿಯೂ ಕೂಡ ಅತ್ಯಂತ ಮರ್ಯಾದೆಯಿಂದ ಇದ್ದುಕೊಂಡು, ಶ್ರೇಷ್ಠ ಸೇವೆಯನ್ನು ಸಲ್ಲಿಸಿ, ಅಪಾರವಾದ ಕೀರ್ತಿಯನ್ನು ಸಂಪಾದಿಸಬಹುದೆಂಬುದಕ್ಕೆ ಧೈರ್ಯವಾಗಿ ಮಾದರಿಯನ್ನು ಹಾಕಿಕೊಟ್ಟು ಉಪಕಾರ ಮಾಡಿದ್ದಾರೆ. ಈ ವೆ ಲ್ಪಂಗ್ತಿಯನ್ನನುಸರಿಸಿ ನಮ್ಮ ಹೆಣ್ಣುಮಕ್ಕಳು ಹೆಚ್ಚುಹೆಚ್ಚಾಗಿ ಮುಂದೆ

ಬಂದು ಈ ಕಲೆಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿ ತಾವೂ ಕೃತಾರ್ಥರಾಗ ಬೇಕೆಂದು ಆಶಿಸುತ್ತೇವೆ....' ಮುಂತಾಗಿ ಹೇಳಿದ್ದಿತು ಇತರ ಪತ್ರಿಕೆಗಳೂ ಇದನ್ನೇ ಬೇರೆ ಬೇರೆ ರೀತಿಯಲ್ಲಿ ಬರೆದಿದ್ದುವು.

ಸಂಜೆ ಐದು ಗಂಟೆಗೆ 'ಮಲಬಾರ್ ಹಿಲ್'ನಿಂದ ಹೊರಟ ಮೆರವಣಿಗೆ ಮೈಲು ಮೈಲಿಗಳ ಉದ್ದವಾಗಿತ್ತು. ಸಾಮ್ರಾಜ್ಞಿಗೆ ತಕ್ಕ ಸಿದ್ಧತೆಗಳಾಗಿದ್ದುವು. ಮುಚ್ಚಿದ ಹೂಮಾಲೆಗಳ ಅಲಂಕಾರದಲ್ಲಿ ತಾನೊಂದು ದೊಡ್ಡ ಮಾಲೆಯಾಗಿ ಮಾಲಾ-ಬಾಳಿನ ಹಿರಿಯಾಸೆಗಾಗಿ ಹೋರಾಡಿ ನೆರವೇರಿಸಿಕೊಂಡ ಶ್ರೇಷ್ಠ ನಟಿ ಮಾಲಾ; ಹೆಂಡತಿಯ, ತಾಯಿಯ, ಗೃಹಿಣಿಯ ಹಲವು ಹಂಬಲನ್ನೆಲ್ಲ ತನ್ನೆದೆಯಲ್ಲೇ ಹೂಳಿಕೊಂಡ, ಯಾಕೆ, ಬಾಳನ್ನೇ ಹಾಳುಮಾಡಿಕೊಂಡ ಬಡ ಹೆಣ್ಣು ರಂಗನಾಯಕಿ-ಈಗ ತನ್ನ ಹೋರಾಟವನ್ನು ಮುಗಿಸಿ, ಈಗಲೂ ಕೀರ್ತಿಯ ಶಿಖರದಲ್ಲೇ ವಿಶ್ರಮಿಸುತ್ತ ಮೆರೆಯುತ್ತಿದ್ದಳು. ಮುಂದೆ ಧನಚಂದರು ಹೋಗುತ್ತಿದ್ದರು. ಬೆಳಿಗ್ಗೆ ಬೆಂಗಳೂರಿನಲ್ಲಿ ಸುದ್ದಿಯು ತಿಳಿದೊಡನೆ ವಿಮಾನದಲ್ಲಿ ಬಂದ ಕಪೂರ್‌ಚಂದರೂ, ಶಾಮಣ್ಣನೂ ಎಡ ಬಲ ಪಕ್ಕಗಳಲ್ಲಿದ್ದರು. ರಾಜಬಹದ್ದೂರ್ ಅಲ್ಲೇ ಹಿಂದೆಯೇ ಇದ್ದ. ಮೆರವಣಿಗೆಯ ಹಿಂದೆ, ಕಟ್ಟಕಡೆಯಲ್ಲಿ ನರೆಗೂದಲಿನ ಅರೆಬೋಳು ತಲೆಯ, ಸುಕ್ಕು ಮುಖದ, ಬಾಗು ಬೆನ್ನಿನ ಮುದುಕನೊಬ್ಬ ಕತ್ತನ್ನು ತಗ್ಗಿಸಿಕೊಂಡು ಒಬ್ಬನೇ ನಡೆಯುತ್ತಿದ್ದ. ಸ್ವಲ್ಪ ಹೊತ್ತಿನ ಮೇಲೆ ಇವನನ್ನು ನೋಡಿದ್ದ ಸಪ್ಪೆ ಮುಖದ ಯುವಕನೊಬ್ಬ ಅಲ್ಲಿಲ್ಲಿ ನುಸುಳಿ ಬಂದು ಅವನ ಜತೆಗೆ ಸೇರಿದ.

"ಅಪ್ಪ! ಯಾವಾಗ ಬಂದೆ?" ಯುವಕ ಆಶ್ಚರ್ಯದಿಂದ ಕೇಳಿದ.

"ಸ್ವಲ್ಪ ಹೊತ್ತಾಯ್ತು," ಮುದುಕ ಗಂಭೀರವಾಗಿ ಹೇಳಿದ.

"ಮತ್ತೆ ಇದಕ್ಕೂ ಬಂದುಬಿಟ್ಟೆ!" ಯುವಕ.

"ಹೂಂ, ಇವಳನ್ನು ಮೆಚ್ಚಿದೋರಲ್ಲಿ ನಾನೂ ಒಬ್ಬ," ಮುದುಕ ಮಂಜಿನ ಕಣ್ಣೆತ್ತಿದ.

"ನಟಿಯರು ಅಂದರೆ ನಿಂಗೆ ಅಷ್ಟಕ್ಕಷ್ಟೆ ಅಂತ...."

"ಇಂಥ ನಟಿ ಅಪೂರ್ವ," ನಿಧಾನವಾಗಿ ಬಂದಿತು, ಉತ್ತರ.

---

# ಶಾರದಾ ಸಾಹಿತ್ಯಮಾಲೆಯ ಪ್ರಕಟನೆಗಳು

| | | ಬೆಲೆ | | |
|---|---|---|---|---|
| | | ರೂ. | ಆ. | ಪೈ. |
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨-೩. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೪. | ಜೀವನಕಲೆ * | ೧ | ೦ | ೦ |
| ೫. | ಮುಗುಳುನಗೆ * | ೧ | ೪ | ೦ |
| ೬. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೭-೮. | ಆಲದ ಹೂ | ೧ | ೧೨ | ೦ |
| ೯. | ಹುಡುಗಾಟ | ೧ | ೪ | ೦ |
| ೧೦. | ಶವದ ಮನೆ | ೧ | ೪ | ೦ |
| ೧೧. | ಎದಿರೇಟು | ೧ | ೮ | ೦ |
| ೧೨-೧೩. | ಸರ್ವಮಂಗಳ * | ೪ | ೮ | ೦ |
| ೧೪. | ಕೇಡಿಗನ ಕಿಡಿಗಳು | ೧ | ೦ | ೦ |
| ೧೫. | ದೇವತೆಗಳು ನಕ್ಕಾಗ | ೧ | ೪ | ೦ |
| ೧೬-೧೭. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೮. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೯. | ಹಾಳು—ಮೂಳು | ೧ | ೦ | ೦ |
| ೨೦-೨೧-೨೨. | ಮೋಹದ ಬಲೆಯಲ್ಲಿ | ೫ | ೧೨ | ೦ |
| ೨೩. | ಸಾವಿನೊಂದಿಗೆ ಸರಸ | ೧ | ೪ | ೦ |
| ೨೪. | ಅನುರಾಗ | ೧ | ೪ | ೦ |
| ೨೫. | ಜೋಳದ ಬೆಳೆಯ ನಡುವೆ | ೧ | ೪ | ೦ |
| ೨೬-೨೭. | ಬಿಡುಗಡೆಯ ಬೇಡಿ | ೩ | ೪ | ೦ |
| ೨೮-೨೯. | ಜರತಾರಿ ಜಗದ್ಗುರು | ೩ | ೧೨ | ೦ |
| ೩೦. | ಕಾನ್ವೆಂಟ್ ಗರ್ಲ್ | ೧ | ೦ | ೦ |
| ೩೧. | ಖಾನಾವಳಿಯ ನೀಲಾ | ೧ | ೦ | ೦ |
| ೩೨. | ರಂಗನಾಯಕಿ | ೨ | ೦ | ೦ |
| ೩೩. | ಮದುವೆ ಮಾಡಿ ನೋಡು | ೧ | ೦ | ೦ |
| ೩೪-೩೫. | ಕಲ್ಯಾಣಿ | ೨ | ೮ | ೦ |

* ಪ್ರತಿಗಳು ಮುಗಿದಿವೆ.

ಕನ್ನಡ ಪತ್ರಿಕಾರಂಗದಲ್ಲಿ ದಿಟ್ಟತನದ ಹೊಸ ಹೆಜ್ಜೆ

# ಸಾಹಿತ್ಯ ಪ್ರಗತಿ

**ಸಂಪಾದಕರು: ಆರ್. ಬಸವರಾಜ್ ಬಿ.ಎಸ್‌ಸಿ. (ಆನರ್ಸ್)**

ಕನ್ನಡ ಸಾಹಿತ್ಯದ ಮತ್ತು ಪ್ರಕಟನ ಪ್ರಪಂಚದ ಪ್ರಗತಿಗಾಗಿ
ಮೀಸಲಾದ ಹೊಸ ರೀತಿಯ ಮಾಸಪತ್ರಿಕೆ

ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು, ಲೇಖಕರು, ವಾಚನಾಲಯಗಳು,
ಪುಸ್ತಕ ಭಂಡಾರಗಳು ಹಾಗೂ ಎಲ್ಲ ರೀತಿಯ ಓದುಗರಿಗೂ
ಉಪಯುಕ್ತವಾದ ಮಾಸಿಕ

ಡೆಮ್ಮಿ ಅಷ್ಟದಳಾಕಾರದ ೩೬ ಪುಟಗಳು ಬಿಡಿ ಸಂಚಿಕೆ: ಮೂರಾಣೆ

**ವಾರ್ಷಿಕ ಚಂದಾ : ಎರಡು ರೂಪಾಯಿ ಎಂಟಾಣೆ ಮಾತ್ರ**
**(ಅಂಚೆ ವೆಚ್ಚ ಸೇರಿ)**

**ಸಾಹಿತ್ಯ ಪ್ರಗತಿಯ ವೈಶಿಷ್ಟ್ಯಗಳು**

★ ಪ್ರತಿ ತಿಂಗಳೂ ಹೊರಬೀಳುವ ಕನ್ನಡ ಪುಸ್ತಕಗಳ ಸಂಪೂರ್ಣ ಸುದ್ದಿ ಸಂಗ್ರಹ

★ **ಸ್ಥಿರ ಶೀರ್ಷಿಕೆಗಳು**

ಶ್ರೀ ಬಸವರಾಜ ಕಟ್ಟೀಮನಿಯವರ 'ಮಾನಸ ಸರೋವರ'
ಶ್ರೀ 'ತ.ರಾ.ಸು.'ರವರ 'ವಿಹಂಗಮ ವಿಹಾರ'
ಶ್ರೀ 'ಜಿಬಿಜ್'ರವರ 'ವ್ಯರ್ಥಾಲಾಪ'

★ ವಿಸ್ತೃತ ಪುಸ್ತಕ ವಿಮರ್ಶೆಗಳು, ಕೆಸರಾಂತ ಕತೆಗಾರರ ಸಣ್ಣಕತೆಗಳು, ಸಂಗ್ರಹಿತ ಕಾದಂಬರಿ, ನಾನೆಂದೂ ಮರೆಯಲಾಗದ ವ್ಯಕ್ತಿ, ಬೆಳಕಿಗೆ ಬರುತ್ತಿರುವ ಲೇಖಕರ ಪರಿಚಯ.

★ ಪತ್ರಿಕಾಭಿಪ್ರಾಯಗಳು

★ ವಾಚಕರ ವಿಭಾಗಗಳು–

'ನೀವು ಕೇಳಿದ್ದು' ಮತ್ತು 'ನಿಮ್ಮ ಓಲೆಗಳು'

ಇತ್ಯಾದಿ ಇತ್ಯಾದಿ

**ನೀವಿನ್ನೂ ಚಂದಾದಾರರಾಗದಿದ್ದಲ್ಲಿ ಇಂದೇ ಚಂದಾದಾರರಾಗಿರಿ**

ಪ್ರಕಾಶಕರು :

**ಶಾರದಾ ಪ್ರಕಟನಾಲಯ**

ಅರಳೇಪೇಟೆ, ಬೆಂಗಳೂರು–೨